ಶ್ರೀ ಲಕ್ಷ್ಮೀಹಯಗ್ರೀವ ಸೇವಾ ಟ್ರಸ್ಟ್ ಗ್ರಂಥ ಮಾಲಾ

ಕುಸುಮ—೪

    

ಶ್ರೀಮನ್ನಿಗಮಾಂತ ಮಹಾದೇಶಿಕರ

# ಶ್ರೀಮದ್ರಹಸ್ಯತ್ರಯಸಾರ ಸಂಗ್ರಹ

ವೇದಾಂತ ವಿದ್ವಾನ್, ವೇದಾಂತ ಸಾರಜ್ಞ

ಕೆ. ಎಸ್. ಕೃಷ್ಣತಾತಾಚಾರ್ಯ, ಬಿ.ಎ.

ಬೆಂಗಳೂರು

ಪ್ರಕಾಶಕರು :

ಶ್ರೀ ಲಕ್ಷ್ಮೀಹಯಗ್ರೀವ ಸೇವಾ ಟ್ರಸ್ಟ್

ಬೆಂಗಳೂರು

# ಅ ರಿ ಕೆ

ಆಸ್ತಿಕ ಮಹಾಜನರಿಗೆ ಉಪಯುಕ್ತವಾಗುವ ದಾರ್ಶನಿಕ ಮತ್ತು ಧಾರ್ಮಿಕ ಗ್ರಂಥಗಳನ್ನು ಕನ್ನಡ ಭಾಷೆಯಲ್ಲಿ ಪ್ರಕಾಶ ಪಡಿಸುವುದು ಶ್ರೀ ಲಕ್ಷ್ಮೀ ಹಯಗ್ರೀವ ಸೇವಾ ಟ್ರಸ್ಟಿನ ಉದ್ದೇಶಗಳಲ್ಲಿ ಒಂದಾಗಿದೆ. ಈ ಉದ್ದೇಶಕ್ಕನು ಸಾರವಾಗಿ 'ಭೂಸ್ತುತಿ', 'ಯತಿರಾಜರಾಮಾನುಜ' ಮತ್ತು 'ಶ್ರೀ ನಮ್ಮಾಳ್ವಾರ್ ದರ್ಶನ' ಎಂಬ ಹೊತ್ತಿಗೆಗಳು ಈ ಟ್ರಸ್ಟ್ ರೂಪುಗೊಂಡಮೇಲೆ ಪ್ರಕಾಶಿತ ವಾಗಿವೆ. ಈ ಗ್ರಂಥ ಮಾಲೆಯಲ್ಲಿ ಈಗ 'ಶ್ರೀಮದ್ರಹಸ್ಯತ್ರಯಸಾರಸಂಗ್ರಹ' ವನ್ನು ಪ್ರಕಾಶ ಪಡಿಸಲು ನಮಗೆ ಸಂತೋಷವಾಗಿದೆ. ವೇದಾಂತ ವಿದ್ವಾನ್ ವೇದಾಂತಸಾರಜ್ಞ ಶ್ರೀ ಕೃಷ್ಣತಾತಾಚಾರ್ಯಸ್ವಾಮಿಗಳು ಈ ಅಮೂಲ್ಯವಾದ ಕೃತಿಯನ್ನು ಬರೆದುಕೊಟ್ಟು ನಮಗೆ ಮಹೋಪಕಾರ ಮಾಡಿದ್ದಾರೆ. ಶ್ರೀಕೃಷ್ಣ ತಾತಾಚಾರ್ಯ ಸ್ವಾಮಿಗಳು ತಮ್ಮ ಅಪಾರವಾದ ವೈದುಷ್ಯದಿಂದಲೂ, ಅಸದೃಶವಾದ ವಾತ್ಸಲ್ಯದಿಂದಲೂ, ತಮ್ಮ ಪ್ರೌಢವಾದ ಅನೇಕ ಗ್ರಂಥರತ್ನ ಗಳಿಂದಲೂ, ವಿದ್ವತ್ಪೂರ್ಣವಾದ ಪ್ರವಚನಗಳಿಂದಲೂ ಶ್ರೀ ವೈಷ್ಣವರ ಸಮೂಹಕ್ಕೇ ಭೂಷಣಪ್ರಾಯರಾಗಿದ್ದಾರೆ. ಯಾವ ವಿಷಯವನ್ನಾದರೂ ಗಾಢವಾಗಿ ವಿವೇಚಿಸಿ ವಿಮರ್ಶಿಸುವ ಅಪೂರ್ವವಾದ ಪಾಂಡಿತ್ಯದಿಂದ ಪೂರ್ಣ ರಾಗಿದ್ದಾರೆ. ಇಂಥ ಹಿರಿಯ ವಿದ್ವಾಂಸರು ಶ್ರೀ ಲಕ್ಷ್ಮೀ ಹಯಗ್ರೀವ ಸೇವಾ ಟ್ರಸ್ಟಿನ ಪ್ರಾರ್ಥನೆಯನ್ನು ಮನ್ನಿಸಿ ಈ ಕೃತಿಯನ್ನು ಬರೆದುಕೊಟ್ಟಿ ರುವುದಕ್ಕಾಗಿ ಅವರಿಗೆ ನಾವು ಬಹಳ ಕೃತಜ್ಞರಾಗಿದ್ದೇವೆ.

ಈ ಕೃತಿಯನ್ನು ಸಕಾಲದಲ್ಲಿ ಮುದ್ರಿಸಿಕೊಟ್ಟಿರುವ ಬೆಂಗಳೂರಿನ ಶ್ರೀವಿದ್ಯಾ ಪ್ರಿಂಟರ್ಸ್‌ರವರಿಗೆ ನಮ್ಮ ವಂದನೆಗಳು. ಅನೇಕ ಮಹಾಜನರು ಈ ನಮ್ಮ ಸೇವೆಯನ್ನು ಸ್ವಾಗತಿಸುವರೆಂದೂ, ಸ್ವಹಸ್ತ ಪರಹಸ್ತಗಳಿಂದ ಈ ಪುಸ್ತಕ ಪ್ರಕಾಶನ ಯೋಜನೆಗೆ ಉದಾರವಾದ ಸಹಾಯವನ್ನೊದಗಿಸಿಕೊಟ್ಟು ಸಹಕರಿಸುವರೆಂದೂ ನಂಬಿದ್ದೇವೆ.

ಬೆಂಗಳೂರು          ಶ್ರೀ ಲಕ್ಷ್ಮೀ ಹಯಗ್ರೀವ ಸೇವಾ ಟ್ರಸ್ಟ್
15-2-1981

ಶ್ರೀಃ

# ಶ್ರೀಮದ್ರಹಸ್ಯತ್ರಯ ಸಾರಸಂಗ್ರಹ

## ನಿವೇದನೆ

ಭಗವಂತಮಿವಾನಂತ ಕಲ್ಯಾಣ ಗುಣ ಸಾಗರಂ ।
ವೇದಾಂತ ದೇಶಿಕಂ ನೌಮಿ ವೆಂಕಟೇಶ ಗುರೂತ್ತಮಂ ॥

ಶ್ರೀಮದಸ್ಮದ್ಗುರುಭ್ಯೋ ನಮಃ

ನಮಗೆ ಉಪಕಾರ ಮಾಡಿದವರು ಹಲವರಿದ್ದಾಗ್ಯೂ ಅವರೊಳಗೆ ಅಧಿಕ ಉಪಕಾರ ಮಾಡಿದವರನ್ನು ವಿಶೇಷವಾಗಿ ಕೊಂಡಾಡುವುದು ಉಚಿತವೆಂದು ಎಲ್ಲರೂ ಒಪ್ಪುವರು. ಹಾಗೆಯೇ ಲೋಕಹಿತಕ್ಕಾಗಿ ಸರ್ವೇಶ್ವರನೆತ್ತಿದ ಮತ್ಸ್ಯ ಕೂರ್ಮಾದಿ ಮೂವತ್ತು ರೂಪಗಳಲ್ಲಿ ದಶಾವತಾರಗಳೆಂದೂ, ಅವು ಗಳೊಳಗೂ ಸರ್ವಾಧಿಕಾರವಾದ ಪ್ರಪತ್ತಿ ಶಾಸ್ತ್ರವನ್ನು ಉಪದೇಶಿಸಿದ ಅವ ತಾರಗಳನ್ನು "ಜ್ಞಾನಪ್ಪಿರಾನ್" – ಎಂದೂ "ಶ್ರೀ ಚಕ್ರವರ್ತಿತ್ತಿರುಮಹನ್" ಎಂದೂ "ಶ್ರೀ ಗೀತಾಚಾರ್ಯ"ನೆಂದೂ ವಿಶೇಷವಾಗಿ ಕೊಂಡಾಡುತ್ತೇವೆ. ಇದೇ ನ್ಯಾಯದಿಂದ ಭಗವಂತನಿಂದ ಹಿಡಿದು ಭಗವದ್ರಾಮಾನುಜರವರೆಗಿನ ಗುರು ಪರಂಪರೆಯಲ್ಲಿಯ ಆಚಾರ್ಯರುಗಳು ಒಬ್ಬೊಬ್ಬರಾಗಿಯೂ ಮತ್ತು ಎಲ್ಲರೂ ಸೇರಿಯೂ ಮಾಡಿರುವ ಉಪಕಾರಗಳನ್ನೂ ಶ್ರೀ ದೇಶಿಕರ್‌ರವರು ಒಬ್ಬರೇ ಮಾಡಿರುವ ಉಪಕಾರಗಳನ್ನೂ. ತೂಗಿ ನೋಡಿದಲ್ಲಿ ಶ್ರೀ ದೇಶಿಕರ್‌ರವರು ಮಾಡಿರುವ ಉಪಕಾರಗಳೇ ಮಿಗಿಲಾದುವುಗಳೆಂದು ನಿರ್ಣಯವಾಗುತ್ತದೆ. ಆದುದರಿಂದ ಅವರನ್ನು ಮಿಕ್ಕ ಆಚಾರ್ಯರುಗಳಿಗಿಂತ ಮಿಗಿಲಾಗಿ ಕೊಂಡಾಡ ಬೇಕೆಂದು ಪೂರ್ವಿಕರು ನಿರ್ಣಯಿಸಿದ್ದಾರೆ.

ಒಟ್ಟಿನಲ್ಲಿ "ಆಚಾರ್ಯ" – ಎಂಬ ಅರ್ಥವುಳ್ಳ "ದೇಶಿಕನ್" "ಗುರು ಎಂಬ ಪದಗಳು ಶ್ರೀದೇಶಿಕರನ್ನೇ ಮುಖ್ಯವಾಗಿ ಹೇಳುವುವೆಂದೂ ಮಿಕ್ಕವರಲ್ಲಿ

ಅವು ಔಪಚಾರಿಕವೆಂದೂ ಕೆಳಗೆ ಉದಾಹರಿಸಿರುವ ಶ್ಲೋಕಗಳಲ್ಲಿ ಅನುಸಂಧಾನ ಮಾಡಿದ್ದಾರೆ.

1. ಯಸ್ಮಿನ್ನನನ್ಯ ಸಾಮಾನ್ಯಾ ವೇದಾಂತಾಚಾರ್ಯತಾ ಗುರೌ ।
ಯಥಾ ಪುರುಷತಾ ವಿಷ್ಣೌ ತಸ್ಮಿನ್ ನ್ಯಸ್ತ ಭರೋಽಸ್ಮ್ಯಹಂ ॥

[ಹೇಗೆ ಪುರುಷನೆಂಬ ಪದವು ಶ್ರಿಯಃಪತಿಯಾದ ವಿಷ್ಣುವನ್ನೇ ಮುಖ್ಯವಾಗಿ ಹೇಳತಕ್ಕದ್ದಾಗಿ ಮಿಕ್ಕವರಲ್ಲಿ ಗೌಣವಾಗಿ ವರ್ತಿಸುತ್ತದೆಯೋ ಹಾಗೆಯೇ ದೇಶಿಕ - ಆಚಾರ್ಯ ಮುಂತಾದ ಪದಗಳು ಆಚಾರ್ಯ ಲಕ್ಷಣಗಳನ್ನು ಪೂರ್ಣವಾಗಿಯುಳ್ಳ ಶ್ರೀ ದೇಶಿಕರೊಬ್ಬರಲ್ಲಿಯೇ ಮುಖ್ಯವಾಗಿ ವರ್ತಿಸುತ್ತಾ ಮಿಕ್ಕವರ ವಿಷಯದಲ್ಲಿ ಔಪಚಾರಿಕವಾಗಿ ಪ್ರಯೋಗಿಸಲ್ಪಟ್ಟಿವೆ.]

2. ದೇಶಿಕೋ ನಿಗಮಾಂತಾರ್ಯಾತ್ ತದ್ಭಕ್ತಾತ್ ಸಾತ್ತ್ವಿಕೋಜನಃ ।
ತತ್ಸೂಕ್ತೇಶ್ಚ ಪ್ರಬಂಧೋಽನ್ಯೋ ನಾಸ್ತಿ ನಾಸ್ತಿ ಮಹೀತಲೇ ॥

[ದೇಶಿಕರೆಂದರೆ ಶ್ರೀ ವೇದಾಂತದೇಶಿಕರೇ ದೇಶಿಕರು! ಪ್ರಬಂಧವೆಂದರೆ ಅವರ ಪ್ರಬಂಧದಂತಹ ಪ್ರಬಂಧವಿಲ್ಲ - ಅವರ ಭಕ್ತರಂತಹ ಸಾತ್ತ್ವಿಕರಿಲ್ಲ.]

ಶ್ರೀ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಅಸಾಧಾರಣವಾದ ಉಭಯ ವೇದಾಂತಗಳನ್ನು ವಿಶೇಷವಾಗಿ ಪ್ರವಚನ ಮಾಡಿ ಅವುಗಳನ್ನು ತಮಿಳು ಮತ್ತು ಸಂಸ್ಕೃತ ಭಾಷೆಗಳಲ್ಲಿ ವಿಸ್ತಾರವಾಗಿ ನಿರೂಪಿಸಿ-

ಪ್ರಾಕೃತೈ ಸಂಸ್ಕೃತೈಶ್ಚೈವ ಗದ್ಯ ಪದ್ಯಾಕ್ಷರೈಸ್ತಥಾ ।
ದೇಶಭಾಷಾದಿಭಿಶ್ಶಿಷ್ಯಂ ಬೋಧಯೇತ್ ಸ ಗುರುಃ ಸ್ಮೃತಃ॥ ಎಂದಿರುವ ಆಚಾರ್ಯ ಲಕ್ಷಣಕ್ಕೆ ಇವರು ಪೂರ್ಣ ಪಾತ್ರರಾಗಿದ್ದಾರೆ. ಈ ಮಹಿಮೆ ಆಚಾರ್ಯರುಗಳಲ್ಲಿ ಬೇರೆ ಯಾರಿಗೂ ಇಲ್ಲ. ಇವರ ಶ್ರೀ ಸೂಕ್ತಿಗಳಲ್ಲಿ ಅರ್ಥವಾದವಿಲ್ಲ, ವಿರುದ್ಧವಾಣಿಯಿಲ್ಲ, ಪರೋಕ್ಷವಾದಗಳಿಲ್ಲ, ಸಂಶಯೋಕ್ತಿಗಳಿಲ್ಲ. ಆದ್ದರಿಂದ ಇವು ಪ್ರಸಿದ್ಧ ವೇದಗಳಿಗಿಂತ ಮಾನನೀಯವೆನಿಸಿವೆ. ಇದನ್ನು ಅಭಿಯುಕ್ತರು " ಆಮ್ನಾಯ ಚೂಡಾ ಗುರು ಸೂಕ್ತಿವೇದೇ ನೈವಾರ್ಥವಾದೋ ನವಿರುದ್ಧವಾಣೀ । ಪರೋಕ್ಷವಾದೋ ನಹಿ ಸಂಶಯೋಕ್ತಿಃ ಅತಸ್ಸವೇದಾದಪಿ ಮಾನನೀಯಃ ॥" ಎಂಬುದಾಗಿ ಅನುಸಂಧಾನಮಾಡಿದ್ದಾರೆ. ಆಚಾರ್ಯತ್ವಕ್ಕೆ

ಉಪಯುಕ್ತವಾದ ಶುಭಗುಣಗಳೆಲ್ಲವೂ ಇವರನ್ನು ಹೊಂದಿ ಸಮುಚಿತ ವಿಭವ ದಿಂದ ಮೆರೆಯುತ್ತಿವೆ.

ಸರ್ವಕಾರಣನಾದ ಶ್ರೀಮನ್ನಾರಾಯಣನೇ ಸಂಸಾರ ಸಾಗರದಲ್ಲಿ ಮುಳುಗಿರುವ ಚೇತನರನ್ನು ಅದರಿಂದ ಮೇಲಕ್ಕೆ ಎತ್ತಿ ಉದ್ಧರಿಸುವುದಕ್ಕಾಗಿ ಆಚಾರ್ಯ ವೇಷವನ್ನು ಪರಿಗ್ರಹಿಸಿ ತನ್ನ ಮಹಿಮೆಯನ್ನು ಪ್ರಕಟಿಸುವವ ನಾದ್ದರಿಂದ ಆಚಾರ್ಯರಿಗಿಂತ ಅಧಿಕವಾದ ದೇವತೆಯಿಲ್ಲವೆಂದು ಶ್ರೀಮದಾ ಚಾರ್ಯರು ತಾವೇ ನಿಶ್ಚಯಿಸಿ "ಆಚಾರ್ಯಾದಿಹದೇವತಾಂ ಸಮಧಿಕಾಂ ಅನ್ಯಾಂ ನಮನ್ಯಾಮಹೇ — ಎಂಬುದಾಗಿ ಅಪ್ಪಣೆ ಕೊಟ್ಟಿದ್ದಾರೆ. ಇಂತಹ ಭಗವಂತನ ಪರ–ವ್ಯೂಹ–ಹಾರ್ದ–ವಿಭವ-ಅರ್ಚೆಗಳೆಂಬ ಐದುವಿಧ ಮೂರ್ತಿ ಗಳೊಳಗೆ ಅರ್ಚಾ ಪರ್ಯಂತವಾಗಿ ಉತ್ತರೋತ್ತರ ಅನುಗ್ರಹಕಾಷ್ಠೆಯು ಅಧಿಕ. ಇಂತಹ ಅರ್ಚಾಮೂರ್ತಿಗಳೊಳಗೆ ಕಾಷ್ಠಾಪ್ರಾಪ್ತ ಅನುಗ್ರಹವುಳ್ಳ ಶ್ರೀ ತಿರುವೇಂಗಡಮುಡೈಯಾನ್ – ಎಂಬ ಶ್ರೀನಿವಾಸಸ್ವಾಮಿಯ ಸಾಕ್ಷಾದವತಾರ ವಾದ ಪ್ರಕೃತ ಆಚಾರ್ಯರ ಹಿರಿಮೆ ಎಷ್ಟೆಂಬುದನ್ನು ಕೇಳಬೇಕೆ ! ಇವರು ಶ್ರೀನಿವಾಸ ದೇವರ ಸಾಕ್ಷಾದವತಾರವೆನ್ನುವುದಕ್ಕೆ —

ಅನ್ರಿವ್ವುಲಹಿನ್ಯೆಯಾಕ್ಕಿ ಯರುಪಟ್ ಪೊರುಳ್ ನೂಲ್‌ವಿರಿತ್ತು
ನಿನ್ರು ತನ್ನೀಳ್‌ಪುಗಳ್‌ವೇಂಗಡಮಾಮಲೈಮೇವಿಪ್ಪಿನ್ನುಂ
ವೆನ್ರಿಪುಗಳ್ ತಿರುವೇಂಗಡನಾಥ ನೆನುಮ್ ಗುರುವಾಯ್
ನಿನ್ರುನಿಗಳ್‌ನ್ದ ಮಣ್‌ಮೇಲ್ ನಿನ್ರನೋಯ್ ಕಳ್ ತವಿರ್‌ತ್ತನನೇ ॥

ಎಂಬ ಶ್ರೀ ಕುಮಾರ ನಯನಾರಾಚಾರ್ಯರ ಶ್ರೀ ಸೂಕ್ತಿಯೂ ಒಂದು ಪ್ರಮಾಣ. ಆದುದರಿಂದ ಇವರ ಅವತಾರ ದಿವಸವು ಶ್ರೀ ಶ್ರೀನಿವಾಸನ ಅವತಾರ ದಿವಸ ಕ್ಕಿಂತ ಉತ್ತಮವಾದುದೆಂದು " ಓದಾದೋದುಮ್ ವೇದಾನ್ತಾರಿಯನು ದಯಮ್ ಶೆಯ್‌ತಿಡುನಾಳ್ ಉತ್ತಮಮಾನ ಪುರಟ್ಟಾಶಿತ್ತಿರುವೋಣ ಮೆನು ನಾಳೇ–" ಇತ್ಯಾದಿಯಾಗಿ ಕೊಂಡಾಡಲ್ಪಟ್ಟಿದೆ. ಇದರ ತಾತ್ಪರ್ಯ ಶ್ರವಣವು ನಕ್ಷತ್ರಗಳೊಳಗೆಲ್ಲ ಶ್ರೇಷ್ಠ–ಏಕೆಂದರೆ ಇದು ವಿಷ್ಣುದೈವತಕ–ಆದ್ದ ರಿಂದ ಇದು "ಉತ್"; ಇದಕ್ಕಿಂತ ಶ್ರೇಷ್ಠ ಕನ್ಯಾಮಾಸದ ಶ್ರವಣ— ಏಕೆಂದರೆ ಇದು ಶ್ರೀ ವಿಷ್ಣುವಿನ ಅವತಾರವಾದ ಶ್ರೀ ತಿರುವೇಂಗಡನಾಥ

ಸದು—ಇದು "ಉತ್ತರ" : ಇದಕ್ಕಿಂತ ಶ್ರೇಷ್ಠವಾದುದು "ಓದಾದೋದುಂ ವೇದಾನ್ತಾಚಾರ್ಯನ್ ಉದಯಂ ಶೆಯ್ದಿಡುನಾಳ್"— ಇದು "ಉತ್ತಮ"— ಆದುದರಿಂದ ತಿರುವೇಂಗಡನಾಥನೇ ಶ್ರೀ ದೇಶಿಕರಾಗಿ ಅವತರಿಸಿದ ಈ ದಿವಸ "ಉತ್ತಮಮಾನ ಪುರಟ್ಟಾಶಿತ್ತಿರುವೋಣಂ"—ಎಂದು ಕೊಂಡಾಡಲ್ಪಟ್ಟಿದೆ.

ಭಗವಂತ ಪ್ರಪಂಚವನ್ನೆಲ್ಲಿ ಆದಿಯಲ್ಲಿ ಸೃಷ್ಟಿಸಿದ, ಶಾಸ್ತ್ರಗಳನ್ನು ಪ್ರವರ್ತನಗೊಳಿಸಿದ. ಆದರೆ ಅದನ್ನು ಅನುಷ್ಠಿಸುವವರಿಲ್ಲ! ತಾನೇ 'ತಿರು ವೇಂಗಡ ಮುಡೈಯಾನ್'—ಆಗಿ ಅವತರಿಸಿದ. ಜನರು ತನ್ನನ್ನು ಆರಾಧಿಸಿ ಉಜ್ಜೀವಿಸುವರೋ—ಎಂದು ನೋಡಿದ. ಆರಾಧಿಸುವವರಿಲ್ಲ! ಮತ್ತೆ ತಾನೇ ತಿರುವೇಂಗಡನಾಥನೆಂಬ ಹೆಸರಿನಿಂದ ಈ ಆಚಾರ್ಯರಾಗಿ ಅವತರಿಸಿದ. ಜಗತ್ತಿ ಗೆಲ್ಲಕ್ಕೂ ಉಜ್ಜೀವನವೇರ್ಪಟ್ಟಿತು, ಭಗವಂತನ ಸಂಕಲ್ಪ ಪೂರ್ಣವಾಯಿತು. ಇದರಿಂದ ಪರರೂಪಕ್ಕಿಂತ ಅವತಾರ ರೂಪ ಮೇಲಾದದ್ದು. ಇವರೊಳಗೂ ತಿರುವೇಂಗಡ ಮುಡೈಯಾನ್ ಎಂಬ ಅವತಾರ ಮತ್ತೂ ಮೇಲಾದದ್ದು— "ಕಲೌವೇಂಕಟನಾಯಕಃ" ಎನ್ನುತ್ತಾರೆ. ಇದರಲ್ಲಿಯೂ ಮೋಕ್ಷೋಪಾಯ ವನ್ನು ಗ್ರಂಥಗಳ ಮೂಲಕವೂ, ಸ್ವಾನುಷ್ಠಾನ ಮೂಲಕವೂ ನಮಗೆ ತಿಳಿಯುವ ಹಾಗೆ ಅನುಗ್ರಹಿಸಿದ ಶ್ರೀ ದೇಶಿಕರು ಉದಿಸಿದ ದಿವಸ ಸರ್ವೋತ್ತಮ. ತತ್ತ್ವಹಿತ-ಪುರುಷಾರ್ಥಗಳ ನಿರ್ಣಯವು ಲೋಕಕ್ಕೆ ಏರ್ಪಡುವಂತೆಯಾದ ಉತ್ತಮ ದಿವಸವಿದು. ಆದುದರಿಂದ ಇದು "ಉತ್ತಮ ಮಾನ ಪುರಟ್ಟಾಶಿ ತ್ತಿರುವೋಣಮೆನ ನಾಳೇ" —ಎನಿಸಿದೆ.

ಶ್ರೀ ರಂಗನಾಥನೇ ಮಹಾತ್ಮರ ದೊಡ್ಡ ಸಭೆಯಲ್ಲಿ ಅನುಗ್ರಹಿಸಿದ 'ವೇದಾಂತಾಚಾರ್ಯ' —ಎಂಬ ಬಿರುದಿನಿಂದ ಬೆಳಗುವ ವೈಲಕ್ಷಣ್ಯದ ಜತೆಗೆ "ಓದಾದೋದುಂ" —ಹಿರಿಮೆಯನ್ನೂ ಪಡೆದ ಆಚಾರ್ಯರಿವರು. ಲೋಕ ದಲ್ಲಿರುವವರು ಮತ್ತೆ ಯಾರೂ ಓದದುದನ್ನೆಲ್ಲಾ ಓದಿದವರಿವರು. ಎಲ್ಲ ವೇದಗಳ ಅಧ್ಯಯನ, ಅರ್ಥಜ್ಞಾನ, ಆಚರಣ, ಪ್ರಚರಣ, ಗ್ರಂಥನಿರ್ಮಾಣ, ಪರಮತನಿರಸನ — ಇವೆಲ್ಲವನ್ನೂ ಇವರ ಹಾಗೆ ಓದಿದವರು ದುರ್ಲಭ. ಶ್ರೀರಂಗಾದಿ ದಿವ್ಯ ದೇಶಗಳಲ್ಲಿ ಮತಾಂತರಸ್ಥರ ವಾದಗಳಿಗೆ ಉತ್ತರವೀಯಲು ಮಹಾಜ್ಞಾನಿಗಳೂ ಅಂಜಿ ಇವರಿಂದಲೇ ಪ್ರತಿ ವಾದಿಗಳನ್ನು ನಿರಸನ ಮಾಡಿ ಸುತ್ತಿದ್ದರು. ಏಕೆಂದರೆ—

"ಕೋವಾಚಕ್ಷುರುದಂಚಯೋಽಪಿ ಪುರಃ ಸಾಟೋಪ ತರ್ಕಚ್ಛಟಾ
ಶಸ್ತ್ರಾಶಸ್ತ್ರ ವಿಹಾರ ಸಂಭೃತ ರಣಾ ಸ್ವಾದೇಷು ವಾದೇಷು ನಃ॥"

—ಎಂದು ತಾವೂ, "ಕವಿತಾರ್ಕಿಕ ಕೇಸರೀ" ಎಂದು ಇತರರೂ ಕೂಡ ಕೊಂಡಾಡುವಂತಹ ವಾ ಗ್ವಿ ಭ ವ ವು — " ಓದಾದೋದುಂ " —ಎಂಬುದು. ಮುಮುಕ್ಷುಗಳಿಗೆ ಜ್ಞಾತವ್ಯಾಂಶಗಳನ್ನು ವಿಶದವಾಗಿ ಪ್ರತಿಪಾದಿ ಸುವುದರಿಂದ ಶ್ರೀರಹಸ್ಯತ್ರಯುಗಳು ಅದ್ವಿತೀಯವಾದ ಅತಿಶಯವನ್ನು ಪಡೆ ದಿರುವ ಹಾಗೆ, ಶ್ರೀದೇಶಿಕರು ಮತ್ತು ಅವರ ಶ್ರೀ ಸೂಕ್ತಿಗಳ ಹಿರಿಮೆಯನ್ನು ವಿಶೇಷವಾಗಿ ನಿರೂಪಿಸುವ ಮೂರು "ತನಿಯನ್" – ಗಳು ವಿಶೇಷವಾದ ಅತಿಶಯವನ್ನುಳ್ಳವುಗಳಾಗಿವೆ. ಇವುಗಳಲ್ಲಿ **ಮೊದಲನೆಯದು** : ಶ್ರೀ ನಯಿ ನಾರಾಚಾರ್ಯರು ಅಪ್ಪಣೆ ಕೊಡಿಸಿದ—

"ಶ್ರೀಮಾನ್ ವೇಂಕಟನಾಥಾರ್ಯಃ ಕವಿತಾರ್ಕಿಕಕೇಸರೀ ।
ವೇದಾಂತಾಚಾರ್ಯವರ್ಯೋ ಮೇ ಸನ್ನಿಧತ್ತಾಂ ಸದಾ ಹೃದಿ॥" ಎಂಬುದು.

[ಕಲಿಯುಗದಲ್ಲಿ ಭೂಮಿಯಲ್ಲಿ ಮನುಷ್ಯರಿಗೆ ಪೂರ್ವಾಚಾರ್ಯಗಳ ಶ್ರೀ ಸೂಕ್ತಿಯಲ್ಲಿ ಅಸದೃಶ ಉತ್ಕರ್ಷವುಳ್ಳ ಶ್ರಿ ಸೂಕ್ತಿಯನ್ನು ಉಪದೇಶಿಸ ಬೇಕೆಂದು ಬೇಡಿದ ಶ್ರೀ ತೊಂಡೈಮಾನ್ ಚಕ್ರವರ್ತಿಗೆ ಶ್ರೀ ಶ್ರೀನಿವಾಸನು ವೃಷಗಿರಿಯಲ್ಲಿ ಅತ್ಯಂತ ಕ್ಷೇಮವನ್ನು ಕೊಡತಕ್ಕದ್ದಿದು ಎಂದು ಯಾವ ಮಂತ್ರ ವನ್ನು ಉಪದೇಶಿಸಿದನೋ—ಅದೇ ಈ 'ಶ್ರೀಮಾನ್ ವೇಂಕಟನಾಥಾರ್ಯ' ಎಂದು ಉಪಕ್ರಮವಾಗಿರುವ ಮಂತ್ರ. ತನ್ನ ವಿಷಯವಾದ ತಿರುಮಂತ್ರ ವನ್ನು ಶ್ರೀ ತಿರುಮಂಗೈಯಾಳ್ವಾರ್ರಿಗೆ ತಾನೇ ಉಪದೇಶಿಸಿದ ಆ ಸರ್ವೇಶ್ವ ರನೇ ಶ್ರೀಮದಾಚಾರ್ಯರ ವಿಷಯವಾದ ಮೇಲಿನ ತನಿಯನನ್ನು ಪರಮ ಶ್ರೇಯ ಸ್ಕರವೆಂದು ತೊಂಡಮಾನ್ ಚಕ್ರವರ್ತಿಗೆ ಉಪದೇಶಿಸಿದನಾದ್ದರಿಂದ ತಿರು ಮಂತ್ರದ ಸಾದೃಶ್ಯವಿದಕ್ಕೆ ಉಂಟೆಂಬುದರಲ್ಲಿ ಸಂಶಯವಿಲ್ಲ. ಈ ವೃತ್ತಾಂತವು —"ಮಾನಾರ್ಹಂ ಮಹತಾಂ ಮಲೀಮಸಧಿಯಾಂ ವೈದೇಶಿಕಂ ದೇಶಿಕಂ

ವನ್ದೇಽಹಂ ಸತತಂ ಯದೀಯ ಮತುಲಂ ಶ್ರೀಮಾನಿತೀಮಂ ಮನುಂ ।
ಪೂರ್ವಾಚಾರ್ಯಕೃತೀಃ ಕಲೌಭುವಿನೃಣಾಂ ಬ್ರೂಹೀತಿ ಸಂಪೃಚ್ಛತೇ
ರಾಜ್ಞೇ ಶ್ರೀಶ ಉಪಾದಿಶದ್ವೃಷಗಿರೌ ಶ್ರೇಯಃ ಪ್ರದೋಽಸಾವಿತಿ॥"—

ಎಂಬ ಶ್ಲೋಕದಿಂದ ಹೊರಪಟ್ಟಿದೆ. ಆದುದರಿಂದ, ಇವರ ಅಭಿವಾದನ ವಿಲ್ಲದ ಪೂಜೆಯನ್ನು ಶ್ರೀನಿವಾಸನೂ ಸ್ವೀಕರಿಸನೆಂದು "ಗುರುಘಂಟಾಂ ಸುವರ್ಣಾಂಗೀಂತಾಮಾದ್ಯಾಮಭಿವಾದಯೇ । ನಪೂಜ್ಯತೇ ರಮೇಶೋಽಪಿ ವಿನಾಯದಭಿವಾದನಂ" ಎಂದು ಮಹಾತ್ಮರೊಬ್ಬರು ಹೇಳಿದ್ದಾರೆ].

**ಎರಡನೆಯದು** : ಶ್ರೀ ಪಿಳ್ಳೈ ಲೋಕಾಚಾರ್ಯರು ರಚಿಸಿರುವ

"ಶೀರೊನ್ರು ತೂಪ್ಪುಲ್ ತಿರುವೇಂಗಡ ಮುಡೈಯಾನ್
ಪಾರೊನ್ರೈಚ್ಚೊನ್ನಪ್ಪಳಮೊಳಿಯುಳ್—ಓರೊನ್ರು
ತಾನೇ ಅಮೈಯಾದೋ ತಾರಣಿಯಿಲ್ ವಾಳ್‌ವಾರುಕ್ಕು
ವಾನೇರಪ್ಪೋಮಳವುಂ ವಾಳ್‌ವು"—ಎಂಬ ತನಿಯನ್.

**ಮೂರನೆಯದು** : ಶ್ರೀ ಬ್ರಹ್ಮತಂತ್ರ ಸ್ವತಂತ್ರ ಜೀಯರ್ ರಚಿಸಿರುವ—

"ರಾಮಾನುಜದಯಾ ಪಾತ್ರಂ ಜ್ಞಾನ ವೈರಾಗ್ಯ ಭೂಷಣಂ ।
ಶ್ರೀಮದ್ವೇಂಕಟನಾಥಾರ್ಯಂ ವನ್ದೇ ವೇದಾನ್ತ ದೇಶಿಕಂ ॥"—ಎಂಬುದು.

ಈ ಮೂರೂ ಎಲ್ಲ ಅರ್ಥಗಳನ್ನೂ ಶಾಬ್ದವಾಗಿಯೂ ಆರ್ಥವಾಗಿಯೂ ಬೋಧಿಸುವುವಾದರೂ ಇವುಗಳಲ್ಲಿ ಒಂದೊಂದಕ್ಕೂ 'ಶ್ರೀ ರಹಸ್ಯತ್ರಯ'ಕ್ಕೆ ಇರುವಂತೆಯೇ ಪ್ರತ್ಯೇಕವಾದ ಅರ್ಥವಿಶೇಷವೂ ಉಂಟು. ಹೇಗೆಂದರೆ, ಮೊದಲನೆಯದಾದ "ಶ್ರಿಮಾನ್ ವೆಂಕಟನಾಥಾರ್ಯಃ ಹೃದಿ"ಎಂಬುದು ಆಚಾರ್ಯರ ಅವತಾರ ವೈಲಕ್ಷಣ್ಯವನ್ನೂ, ಎರಡನೆಯದು—ಆಚಾರ್ಯರ ಶ್ರೀ ಸೂಕ್ತಿಗಳ ವೈಲಕ್ಷಣ್ಯವನ್ನೂ, ಮೂರನೆಯದು - ಆಚಾರ್ಯರು ಪೂರ್ವಾಚಾರ್ಯರ ಪೂರ್ಣ ಕೃಪೆಗೆ ಪಾತ್ರರೆಂಬುದನ್ನೂ ನಿರೂಪಿಸುವುದನ್ನೇ ಮುಖ್ಯ ತಾತ್ಪರ್ಯವಾಗಿಯುಳ್ಳವು.

ಸರ್ವೇಶ್ವರನು ತಾನೇ ತನ್ನಿಂದ ಪ್ರವರ್ತಿತವಾದ ಈ ಸಂಪ್ರದಾಯಕ್ಕೆ ಪ್ರಕಟರೂ ಪ್ರಚ್ಛನ್ನರೂ ಆದ ಪಾಷಂಡಿಗಳಿಂದ ಉಪರೋಧ ಬರದಿರುವುದಕ್ಕಾಗಿ, "ಪೀತಹ ವಾಡೈಪ್ಪಿರಾನಾರ್ ಪಿರಮ ಗುರುವಾಹಿವಂದು"---ಎಂದೂ

"ಸಾಕ್ಷಾತ್ ನಾರಾಯಣೋ ದೇವಃ ಕೃತ್ವಾ ಮರ್ತ್ಯ ಮಯೀಂ ತನುಂ ।
ಮಗ್ನಾನುದ್ಧರತೇ ಲೋಕಾನ್ ಕಾರುಣ್ಯಾತ್ ಶಾಸ್ತ್ರಪಾಣಿನಾ ॥"—

ಎಂದೂ, ಹೇಳಿರುವಂತೆಯೇ ದ್ರವಿಡ ದೇಶದಲ್ಲಿ ಅನೇಕ ದೇಶಿಕ ರೂಪ ಗಳಿಂದ ಅವತರಿಸಿ, ಪ್ರಸಿದ್ಧವಾದ ಶ್ರೀ ರಾಮಕೃಷ್ಣಾದ್ಯವತಾರಗಳಲ್ಲಿ ನೆರ ವೇರಿಸಲಾಗದ ಸಕಲ ಚೇತನೋಜ್ಜೀವನವನ್ನೂ ಆಚಾರ್ಯರೂಪದಿಂದ ಅವತರಿ ಸಿಯೇ ನೆರವೇರಿಸಿದುದ್ಧರಿಂದ ಭಗವಂತನಿಗಿಂತ ಆಚಾರ್ಯರು ವಿಶೇಷ ಬಹು ಮಾನಕ್ಕೆ ಪ್ರಾಪ್ತರಾಗಿದ್ದಾರೆ. ಅಂತಹ ಆಚಾರ್ಯ ರೂಪವಾದ ಅವತಾರಗ ಗಳಲ್ಲಿ ನಡೆಸಿದ ಚೇತನೋಜ್ಜೀವನಕ್ಕೆ ಉಪಕಾರವಾದ ಕಾರ್ಯಗಳಲ್ಲಿ ಶ್ರೀ ವೇದಾಂತ ದೇಶಿಕರಾಗಿ ಅವತರಿಸಿ ನಡೆಸಿದ ಉಪಕಾರ ವಿಶೇಷಗಳೇ ಮಿಗಿಲಾ ದವುಗಳಾದ್ದರಿಂದ ಇವರನ್ನು ಮತ್ತೆಲ್ಲರಿಗಿಂತ ಮಿಗಿಲಾಗಿ ಕೊಂಡಾಡುವುದು ಯುಕ್ತವಾಗಿದೆ.

ಹಾಗೆ ಈ ಅವತಾರದಲ್ಲಿ ಆಚಾರ್ಯರು ನಡೆಸಿರುವ ಉಪಕಾರ ವಿಶೇಷ ಗಳಲ್ಲಿ ಅತಿ ಮುಖ್ಯವಾದುವು ಯಾವುವೆಂದರೆ—1. ಶರಣಾಗತಿಯೆಂಬ ಉಪಾ ಯವು ಎಲ್ಲರಿಗೂ ಎಲ್ಲ ಫಲಗಳಿಗೂ ಸಾಧನವೆಂಬುದು ಉಪದೇಶ ಮಾತ್ರ ದಿಂದಿರದೆ ಅನುಷ್ಠಾನ ಪರ್ಯಂತವಾಗಿ ಸ್ಥಾಪಿಸಲ್ಪಟ್ಟುದು ಮಹಾ ಕೀರ್ತಿ ಯುಳ್ಳ ಇವರಿಂದಲೇ. 2. ದಿವ್ಯ ಪ್ರಬಂಧಗಳ ಉತ್ಕರ್ಷವನ್ನೂ. ಇವು ಗಳೇ ನಮಗೆ ಎಲ್ಲಾ ಅರ್ಥಗಳನ್ನೂ ಚಿತ್ತ ರಂಜಕವಾಗಿ ಪ್ರಕಾಶಗೊಳಿಸುವು ವೆಂಬುದನ್ನೂ ಸಾಧಿಸಿದವರಿವರೇ. 3. ಆಳ್ವಾರುಗಳೆಲ್ಲರೂ ಭಗವಂತನ ಅಭಿನವ ದಶಾವತಾರ ರೂಪಗಳೆಂದೂ, ಉಭಯ ವೇದಾಂತಗಳೂ ಶ್ರಿಯಃ ಪತಿಯಾದ ನಾರಾಯಣನೇ ಉಪಾಯ-ಉಪೇಯಗಳೆಂಬ ಒಂದೇ ಅರ್ಥವನ್ನೇ ಪ್ರತಿಪಾದಿಸುವುವೆಂಬುದನ್ನೂ 4. ಪ್ರಪತ್ತಿಗಲ್ಲದೆ ಸರ್ವೇಶ್ವರನು ಪರಮ ಪುರುಷಾರ್ಥವನ್ನು ಕೊಡನೆಂಬುದನ್ನೂ ಈ ಪ್ರಪತ್ತಿಯೆಂಬ ಉಪಾಯವನ್ನು ಅನುಷ್ಠಿಸುವವರು ಯಾವ ಜಾತಿಯವರೇ ಆಗಲಿ, ಮರು ಜನ್ಮವಿಲ್ಲದೆಯೇ ಮೋಕ್ಷ ಪಡೆಯಬಹುದೆಂಬುದನ್ನೂ ಉಪದೇಶಿಸಿ ಗ್ರಂಥಗಳ ಮೂಲಕವೂ ಸ್ಥಾಪಿಸಿದವರಿವರೇ, 5. ಭಗವದ್ರಾಮಾನುಜರೇ ಮುಂತಾದ ಪೂರ್ವಾಚಾರ್ಯ ರುಗಳ ದಿವ್ಯ ಸೂಕ್ತಿಗಳೆಲ್ಲಕ್ಕೂ ವ್ಯಾಖ್ಯಾನಗಳನ್ನು ರಚಿಸಿ ಅವು ಎಲ್ಲರಿಗೂ ಉಪಯೋಗವಾಗುವಂತೆ ಮಾಡಿದವರಿವರೇ. 6. ಸನ್ಯಾಸಾಶ್ರಮದವರಿಗೆ ಮಾತ್ರವೇ ಮೋಕ್ಷವೆಂಬುದನ್ನು ಖಂಡಿಸಿ ವಿರಕ್ತಿಯುಳ್ಳವನು ಸನ್ಯಾಸಾಶ್ರಮ ವನ್ನು ಸ್ವೀಕರಿಸಬೇಕೆಂದು ವಿಧಿಸಲ್ಪಟ್ಟ ಒಂದು ಆಶ್ರಮವನ್ನು ಮೋಕ್ಷಕ್ಕೆ ಅವಿನಾ

ಘೋತವೆಂಬುದು ಸರಿಯಲ್ಲ. ಯಾವ ವರ್ಣ, ಯಾವ ಆಶ್ರಮದವರಾದಾಗ್ಯೂ ಯಾವ ವಯಸ್ಸಿನವರಾದಾಗ್ಯೂ, ಎಂತಹ ಕೀಳು ಸ್ಥಿತಿಯಲ್ಲಿರುವವರಾದಾಗ್ಯೂ, ಎಷ್ಟು ಪಾಪಿಷ್ಠರೇ ಆದಾಗ್ಯೂ, ಭಗವಂತನ ಪಾದಗಳಲ್ಲಿ ಸರ್ವಾಧಿಕಾರವಾದ ಸಾಂಗ ಪ್ರಪತ್ತಿಯನ್ನು ತಾನೇಯೋ, ಆಚಾರ್ಯರ ಮೂಲಕವಾಗಿಯೋ ಅನುಷ್ಠಿಸಿದವನು ಪುರುಜನ್ಮವಿಲ್ಲದೆಯೇ ಮೋಕ್ಷ ಹೊಂದುವನೆಂದು ಪ್ರಪತ್ತಿಯ ಪ್ರಭಾವವನ್ನು ಚೆನ್ನಾಗಿ ನಾಟಿದವರಿವರೇ, 7. ಈ ಪ್ರಪತ್ತಿಯ ಪ್ರಭಾವವನ್ನೂ ಇದರಲ್ಲಿ ನಿಷ್ಠರಾದವರ ಪ್ರಭಾವವನ್ನೂ ತಗ್ಗಿಸಿಯೂ ಮೀರಿಸಿಯೂ ನಿರೂಪಿಸಿದುದನ್ನು ಖಂಡಿಸಿ, ಶಾಸ್ತ್ರಾನುಸಾರವಾಗಿ ಅದರ ಮಿತಿಯನ್ನು ಸ್ಥಾಪಿಸಿದವರಿವರೇ. 8. "ಲೋಕೋಭಿನ್ನ ರುಚಿಃ"—ಎಂಬಂತೆ ಜನರ ಭಿನ್ನ ರುಚಿಯನ್ನು ಅನುಸರಿಸಿ, ಅವರುಗಳೆಲ್ಲರಿಗೂ ರುಚಿಸುವಂತೆ ಸ್ತೋತ್ರ ರೂಪವಾಗಿಯೂ ನಾಟಕ ರೂಪವಾಗಿಯೂ, ಕಾವ್ಯರೂಪವಾಗಿಯೂ, ಸಂಸ್ಕೃತ, ತಮಿಳು, ಪ್ರಾಕೃತ, ಮಣಿಪ್ರವಾಳ ಭಾಷೆಗಳಲ್ಲಿಯೂ, ಸಂಗ್ರಹವಾಗಿಯೂ ವಿಸ್ತಾರವಾಗಿಯೂ ಇದ್ದು, ಒಂದೊಂದೇ ಮೋಕ್ಷ ಪರ್ಯಂತವಾದ ಬಾಳ್ವೆಯನ್ನು ತರಬಲ್ಲ ಶತಾಧಿಕ ದಿವ್ಯ ಸೂಕ್ತಿಗಳನ್ನು ವಿರಚಿಸಿ ಅನುಗ್ರಹಿಸಿದ ಪರಮೋದಾರರಿವರೇ. ಇದನ್ನು ಅನುಸರಿಸಿಯೇ,

"ಅಣೋರಣೀಯಾನ್ ಮಹತೋ ಮಹೀಯಾನ್
ವೇದಾಂತ ಸೂರೇಶ್ಶುಭವಾಗ್ವಿಲಾಸ ।
ಸಂಖ್ಯಾವತಾಂ ವಿಸ್ಮಯ ಮಾತನೋತಿ
ಪ್ರತ್ಯಕ್ಷರಂ . ವಿಷ್ಣುವದೇವ ನಿತ್ಯಂ॥"—

ಎಂಬ ಅಭಿಯುಕ್ತೋಕ್ತಿಯೂ ಹೊರಟಿದೆ.

9. ಮೇಲೆ ನಿರೂಪಿಸಿರುವಂತೆ ಲೋಕೋಜ್ಜೀವನಕ್ಕಾಗಿ ಇವರು ರಚಿಸಿದುದೆಲ್ಲವೂ ಅತ್ಯಲ್ಪವೆಂಬಂತೆ, ಇವರು ತಾವೇ ತಮ್ಮ ಅವತಾರದ ಮುಖ್ಯ ಪ್ರಯೋಜನವೆಂದು ಭಾವಿಸಿದ ಪ್ರಪದನಕಲಾ ಜನ್ಮಜಲಧಿಯಾದ, ಕ್ಷೀರ ಸಮುದ್ರದಿಂದ ಕಡೆದೆತ್ತಿದ ಅಮೃತವನ್ನು ಅಂತಹ ಶ್ರೀಮದ್ರಹಸ್ಯತ್ರಯಸಾರವೆಂಬ ದಿವ್ಯ ಪ್ರಬಂಧವನ್ನು ರಚಿಸಿ ಅನುಗ್ರಹಿಸಿದ ಉಪಕಾರ ವಿಶೇಷವು ಎಣೆಯಿಲ್ಲದ್ದು. ಇದರ ಆಳವನ್ನು ಕಂಡವರಿಲ್ಲ. ಇದರ ಅಪಾರ ಮಹಿಮೆಗೆ

ಪ್ರಮಾಣವಾಗಿ "ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಂ। ರಹಸ್ಯತ್ರಯ ಸಾರಾಖ್ಯಂ ಪರಂ ಬ್ರಹ್ಮಾಸ್ತು ಮೇಹೃದಿ॥"--ಎಂಬ ಇದೊಂದು ಶ್ಲೋಕವೇ ಸಾಕು-ಮುಮುಕ್ಷುಗಳು ಅವಶ್ಯ ಅರಿಯಬೇಕಾದ ಮಹಾಪ್ರಬಂಧ ವಿದು. ಏಕೆಂದರೆ ಚೇತನರು ಅನಾದಿ ಕಾಲದಿಂದ ಆಚರಿಸಿಕೊಂಡು ಬಂದಿರುವ ತಮ್ಮ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಕೊಂಡಹೊರತು ಮುಕ್ತಿಯಿಲ್ಲ. ಆ ಪಾಪವೆಂಬುದು-ಸರ್ವೇಶ್ವರನ ವಸ್ತುವಾಗಿ ಆತನಿಗೇ ಶೇಷಭೂತವಾದ ಆತ್ಮವನ್ನು ತನ್ನದೆಂದೂ ತನಗೇ ಶೇಷಭೂತವೆಂದೂ ಅನಾದಿ ಕಾಲದಿಂದ ಅನುಭವಿಸಿಕೊಂಡು—ಅವನ ವಸ್ತುವನ್ನು ಅವನಿಗೆ ಸಮರ್ಪಣ ಮಾಡದೆ, ಅವನೊಡನೆ ವಿವಾದ ನಡೆಸುತ್ತಿರುವುದು-ಇದು ಆತ್ಮಾಪಹಾರವೆಂಬ ದೊಡ್ಡ ಚೌರ್ಯ. ಕದ್ದ ಒಡವೆಯನ್ನು ಒಡೆಯನಿಗೆ ಸಮರ್ಪಿಸದೆ ಬೇರೆ ಯಾವ ಪ್ರಾಯಶ್ಚಿತ್ತ ಮಾಡಿಕೊಂಡಾಗ್ಯೂ ಆ ಪಾಪನೀಗದು. ಅಹಂಕಾರ-ಮಮಕಾರಗಳನ್ನು ಒಳಗಿಟ್ಟುಕೊಂಡು ಪ್ರಾಯಶ್ಚಿತ್ತ ಮಾಡಿಕೊಳ್ಳುವುದು ನಿಷಿದ್ಧ ದ್ರವ್ಯಗಳನ್ನು ಒಳಗಿಟ್ಟುಕೊಂಡು ಮೇಲೆ ಶುದ್ಧಿಯಾಚರಿಸುವಂತೆ. ಒಡೆಯನಿಗೂ ಅವನ ಒಡವೆಗೂ ತಕ್ಕಂತೆ ಪ್ರಾಯಶ್ಚಿತ್ತವಾಗಬೇಕು. ಇಲ್ಲಿ ಒಡೆಯ ಸರ್ವೇಶ್ವರ, ಒಡವೆ ಆತ್ಮವೆಂಬ ವಸ್ತು. ದ್ರವ್ಯಗಳಲ್ಲಿ ಪ್ರಧಾನವಾದುದು ಆತ್ಮವೆಂಬ ದ್ರವ್ಯ-ಇದು "ಮಣಿವರ ಇವ ಶೌರೇಃ ನಿತ್ಯ ಹೃದ್ಯೋऽಪಿ ಜೀವಃ"—ಎಂಬಂತೆ ಅದರ ಒಡೆಯನಿಗೆ ನಿತ್ಯ ಹೃದ್ಯವಾದ ದ್ರವ್ಯ. ಇದನ್ನು ನಾವು ಅಪಹರಿಸಿ ಅವನಿಗೆ ದ್ರೋಹವನ್ನು ಆಚರಿಸುತ್ತಿದ್ದೇವೆ.

"ತೃಣಕಾಷ್ಠಾಪಹರಣೇ ಯೋ ದೋಷಃ ಪರಿಕೀರ್ತಿತಃ ।
ಸ್ವರ್ಣರತ್ನಾಪಹಾರೇऽಪಿ ತಾವಾನೇವ ಭವೇತ್ ಕಥಂ ?"—

ಅಂದರೆ ತೃಣ ಕಾಷ್ಠಗಳನ್ನು ಕದಿಯುವುದರ ದೋಷವೂ, ಸ್ವರ್ಣ-ರತ್ನಾದಿಗಳನ್ನು ಕದಿಯುವುದರ ದೋಷವೂ ಒಂದೇ ಆಗುತ್ತದೆಯೇ ? ಹಾಗೆಯೇ-

"ಶ್ವಪಾಕದ್ರವ್ಯಹರಣೇ ಯೋದೋಷಃ ಪರಿಕೀರ್ತಿತಃ ।
ಶ್ರೋತ್ರಿಯ ಸ್ವಾಪಹಾರೇऽಪಿ ತಾವಾನೇವ ಭವೇತ್ಕಥಂ ?"—

ಚಂಡಾಲನ ದ್ರವ್ಯವನ್ನು ಕದಿಯುವುದರಿಂದಾಗುವ ದೋಷವೂ ಬ್ರಾಹ್ಮಣ ಸ್ವತ್ತನ್ನು ಕದಿಯುವುದರಿಂದಾಗುವ ದೋಷವೂ ಹೇಗೆ ಒಂದೇ ಆದೀತು ?

"ಆತ್ಮ ವಸ್ತು ಯತೋಽನರ್ಘ್ಯಂ ಆತ್ಮೇಶ್ವರಃ ಪರಃ ಪುಮಾನ್ ।
ತಸ್ಮಾದಸ್ಯಾಪಹರಣೇ ದೋಷಸ್ಯಾನ್ತೋ ನ ವಿದ್ಯತೇ ॥"—

ಆತ್ಮವೆಂಬ ವಸ್ತು ಅನರ್ಘವಾದುದು. ಆತ್ಮ ವಸ್ತುವಿನ ಒಡೆಯ- ನಿರುವ ಪುರುಷ. ಆದ್ದರಿಂದ ಅಂಥ ಆತ್ಮಾಪಹರಣ ದೋಷ ಅಂತವಿಲ್ಲದ್ದು. ಆದ್ದರಿಂದ ಇದಕ್ಕೆ ತಕ್ಕ ಪ್ರಾಯಶ್ಚಿತ್ತ-ಪಶ್ಚಾತ್ತಾಪಗೊಂಡು-ಆಕಿಂಚನ್ಯ- ಅನನ್ಯಗತಿಕತ್ವಗಳ ಅನುಸಂಧಾನದಿಂದ ಕ್ಷಮಾಪಣ ಪೂರ್ವಕವಾಗಿ ಅವನಿಗೆ ಶೇಷಭೂತವಾದ ಆತ್ಮನನ್ನು ಅವನಿಗೇ ಶೇಷತ್ವೇನ ಸಮರ್ಪಿಸುವುದೊಂದೇ- ಇದೇ ಪ್ರಪತ್ತಿಯೆಂಬುದು. ಈ ರೀತಿ ಆತ್ಮವನ್ನು ಅವನಿಗೆ ಸಮರ್ಪಿಸ ಬೇಕಾದರೆ ಅದನ್ನು ಚೆನ್ನಾಗಿ ಸಂಸ್ಕರಿಸಿಯೇ ಸಮರ್ಪಿಸಬೇಕು. ಏಕೆಂದರೆ ಇದೊಂದು ಎಲ್ಲ ಯಜ್ಞಗಳಿಗಿಂತಲೂ ಶ್ರೇಷ್ಠವಾದ ಯಜ್ಞ. ಭಗವಂತ ನೆಂಬ ಅಗ್ನಿಯಲ್ಲಿ ಆತ್ಮವೆಂಬ ಹವಿಸ್ಸನ್ನು ಸಮರ್ಪಿಸುವಾಗ ಸಮಿತ್ತು ಮೊದ ಲಾದುವನ್ನು ಪ್ರೋಕ್ಷಣ—ಅಭ್ಯುಕ್ಷಣಾದಿಗಳಿಂದ ಸಂಸ್ಕರಿಸಿಯೇ ಅಗ್ನಿಯಲ್ಲಿ ಹೋಮ ಮಾಡುವಂತೆ ಈ ಪರಮಾತ್ಮನೆಂಬ ಅಗ್ನಿಯಲ್ಲಿ ಆತ್ಮವೆಂಬ ಹವಿ ಸ್ಸನ್ನೂ ಸಂಸ್ಕರಿಸಿಯೇ ಸಮರ್ಪಿಸಬೇಕು. ಈ ಸಂಸ್ಕಾರ ಯಾವುದೆಂದರೆ— "ಕ್ಷೇತ್ರಜ್ಞಸ್ಯೇಶ್ವರ ಜ್ಞಾನಾತ್ ವಿಶುದ್ಧಿಃ ಪರಮಾ ಮತಾ ।"—ಎಂಬಂತೆ ಆತ್ಮಯಾಥಾತ್ಮ್ಯ ಜ್ಞಾನ-ಇದರಿಂದ ಸಂಸ್ಕರಿಸಿಯೇ ಪರಮಾತ್ಮನೆಂಬ ಸನಾತನ ನಲ್ಲಿ ಆತ್ಮವನ್ನು ಸಮರ್ಪಿಸಬೇಕು. ಇದನ್ನೇ ಆಳ್ವಾರ್ರವರೂ—

"ವೀಡುಮಿನ್ ಮುತ್ತಮುಂ ವೀಡುಶೇಯ್ದು-
ಉಮ್ಮುಯಿರ್ ವೀಡುಡೈ ಯಾನಿಡೈ ವೀಡುಶೆಯ್ಮಿನೇ॥"

"ನೀರ್ನುಮದೆನ್ರಿವೈ ವೇರ್ ಮುದಲ್ ಮಾಯ್ತ್ತು,
ಇರೈ ಶೇರ್ಮಿನ್, ಉಯಿರ್ ಕ್ಕದನೇರ್ ನಿರೈಯಿಲ್ಲೇ—"
"ವಣ್ ಪುಹಳ್ ನಾರಣ್ । ತಿಣ್ ಕಳಲ್ ಶೇರೇ"—

—ಇತ್ಯಾದಿಯಾಗಿ ಉಪದೇಶಿಸಿದ್ದಾರೆ. ದಿವ್ಯ ಪ್ರಬಂಧಗಳಲ್ಲಿ ಉದ್ದಕ್ಕೂ 'ಪತ್ತು'-ಎಂದು ದಶಕಗಳೆಂಬ ಅರ್ಥದಲ್ಲಿ ಪ್ರಯೋಗಿಸಿರುವುದೂ ಈ ಪ್ರಪತ್ತಿಯನ್ನು ಅನುಷ್ಠಿಸಬೇಕೆಂಬ ಅರ್ಥಕ್ಕೂ ಸೂಚಕವಾಗಿದೆ. ಇಲ್ಲಿಯ ಸಂಖ್ಯಾವಾಚಕ ಶಬ್ದವಾದ 'ಪತ್ತ್'-ಎಂಬುದು ಏಕ ದೇಶವಿಕಾರ

ನ್ಯಾಯದಿಂದ ಅನನ್ಯಪತ್ತಿ ಶಬ್ದವಾಚ್ಯವಾದ ಭಕ್ತಿಯೆಂಬುದರ ಪರ್ಯಾಯ—ಪ್ರಪತ್ತಿಯೂ ಸಾಧ್ಯ ಭಕ್ತಿಯಷ್ಟೇ!—"ಪತ್ತಿ ಮುದಲಾಮವತ್ತಿಲ್"—ಇತ್ಯಾದಿ ಪ್ರಯೋಗಗಳು ಇದಕ್ಕೆ ನಿದರ್ಶನ. ಪ್ರಪತ್ತಿಯು ವೇದಗುಹ್ಯವಾದ ರಹಸ್ಯೋಪಾಯವಾದ್ದರಿಂದ ಪ್ರಪತ್ತ್ಯಪರ ಪರ್ಯಾಯವಾದ "ಪತ್ತು"ಯೆಂಬುದರಿಂದ ಅದನ್ನು ಮರೆಮಾಡಿ ಹೇಳಿದ್ದಾರೆಯೆಂದು ಭಾವಿಸತಕ್ಕದ್ದು. "ಎಟ್ಟಿನೋಡಿರಣ್ಡೆನುಂ (8+2=ಪತ್ತ್) ಕಯಿತ್ತಿನಾಲ್ ಮನನ್ದನ್ನೈ ॥ ಕಟ್ಟಿ...॥"—ಇತ್ಯಾದಿಯೂ ಇಲ್ಲಿ ಅನುಸಂಧೇಯ. ಹೀಗೆ ಅವಶ್ಯ ಅನುಷ್ಠಿಸಲೇಬೇಕಾದ ಪ್ರಪತ್ತಿಯೆಂಬ ಉಪಾಯದ ಸ್ವರೂಪ ಅಧಿಕಾರ ಪರಿಕರಗಳೇ ಮುಂತಾದುವನ್ನು ಮುಮುಕ್ಷುಗಳು ತಿಳಿಯಬೇಕಾದ್ದು ಅತ್ಯಗತ್ಯ. ಇದಕ್ಕೆ ಈ ಪ್ರಬಂಧ ರತ್ನದ ಕಾಲಕ್ಷೇಪವನ್ನು ಬಿಟ್ಟರೆ ಬೇರೆ ಸಾಧನವಿಲ್ಲ. ಆದುದರಿಂದ ಇದು ಎಲ್ಲರಿಗೂ ಅತ್ಯಂತ ಅದ್ಯಕರ್ತವ್ಯ ಇದೇ ರೀತಿ ನಮ್ಮ ಇತರ ಪೂರ್ವಾಚಾರ್ಯರುಗಳೂ ಆಳ್ವಾರ್ರುಗಳೂ ನಮ್ಮ ಸಿದ್ಧಾಂತ ಮತ್ತು ಸಂಪ್ರದಾಯಗಳ ರಕ್ಷಣೆಗಾಗಿ ಅನೇಕ ಗ್ರಂಥಗಳನ್ನು ತಮಿಳು, ಸಂಸ್ಕೃತ ಮುಂತಾದ ಭಾಷೆಗಳಲ್ಲಿ ರಚಿಸಿ ಅನುಗ್ರಹಿಸಿದ್ದಾರೆ. ಅವುಗಳನ್ನು ಸಾಕಲ್ಯೇನ ನಮ್ಮಲ್ಲಿ ಅನೇಕರು ತಿಳಿದಿಲ್ಲ—ತಿಳಿಯುವ ಇಚ್ಛೆಯೂ ಇಲ್ಲ. ಇಂಥವುಗಳ ವಿಷಯವಾಗಿ ನಮ್ಮ ಸಮಾಜದಲ್ಲಿ ಸಾಮಾನ್ಯರಿಗೂ—ಆದಷ್ಟು ಪರಿಚಯ ಮಾಡಿಸುವುದಕ್ಕಾಗಿ ಶ್ರೀ ಬ್ರಹ್ಮತಂತ್ರ ಸ್ವತಂತ್ರ ಪರಕಾಲ ಮಠದ ಈ ನಗರ ಶಾಖೆಯ ಆಡಳಿತ ಸಮಿತಿಯವರು ಕೆಲವು ವರ್ಷಗಳಿಂದ ಈ ನಗರದ ನಾನಾ ಕಡೆಗಳಲ್ಲಿ ಆ ಗ್ರಂಥಗಳ ವಿಷಯವಾಗಿ ಅನೇಕ ಪ್ರವಚನಗಳನ್ನು ತದರ್ಹರಿಂದ ನಡೆಯಿಸಿಕೊಂಡು-ಅವರಿಂದ ರಚಿತವಾದ ಕೆಲವು ಗ್ರಂಥಗಳನ್ನೂ ಪ್ರಕಾಶ ಪಡಿಸುತ್ತ, ನಮ್ಮ ಸಮಾಜಕ್ಕೆ ಪ್ರಶಸ್ತತಮವಾದ ಉಪಕಾರಗಳನ್ನು ಮಾಡುತ್ತಿರುವುದು ಇಲ್ಲಿರುವವರಿಗೆ ತಿಳಿದ ವಿಷಯವೇ ಆಗಿದೆ. ಇದರ ಬಗ್ಗೆ ಅವರು ವಹಿಸಿರುವ ಅವಿಶ್ರಾಂತ ಶ್ರದ್ಧೋತ್ಸಾಹಗಳನ್ನು ಎಷ್ಟು ಕೊಂಡಾಡಿದರೂ ಸಾಲದು. ಈಚೆಗೆ ಆ ಸದಸ್ಯರುಗಳೇಯೇ "ಶ್ರೀ ಲಕ್ಷ್ಮೀಹಯಗ್ರೀವ ಟ್ರಸ್ಟ್"-ಎಂಬುದಾಗಿ ಏರ್ಪಡಿಸಿಕೊಂಡು ಈ ಅಮೋಘವಾದ ಕಾರ್ಯಗಳನ್ನು ಮುಂದುವರಿಸುತ್ತಿದ್ದಾರೆ. ಪ್ರಸಕ್ತ ಶ್ರೀಮದ್ರಹಸ್ಯತ್ರಯಸಾರ ವಿಷಯಕವಾದ ಪ್ರವಚನವು ಅವರು ದಾಸನಿಂದ ನಡೆಸಿದ ಪ್ರವಚನಗಳಲ್ಲಿ ಒಂದು. ಅದನ್ನು ಪ್ರಕಟಿಸುವ

ಉದ್ದೇಶದಿಂದ ಆದರ ಮೂಲ ಗ್ರಂಥವನ್ನು ಸಂಗ್ರಹವಾಗಿ ಬರೆದು ಕೊಡಬೇಕೆಂದು ಅವರು ಇಚ್ಛಿಸಿದರು. ನಾನು ಅತದರ್ಹನೂ ಜಡ ಸ್ವಭಾವದವನೂ ಆದರೂ ಅವರ ಅಭಿಮಾನಪೂರ್ವಕ ಪ್ರೋತ್ಸಾಹದಿಂದ ವಿಚಲಿತನಾಗಿ ತೋರಿದ ಮಟ್ಟಿಗೆ ಅತಿ ಸಂಗ್ರಹವಾಗಿ ಇದನ್ನು ಬರೆದು ಕೊಟ್ಟೆ. ಇದನ್ನು ಪ್ರಸಕ್ತ ಕಿರು ಹೊತ್ತಿಗೆಯ ರೂಪದಲ್ಲಿ ಮೇಲ್ಕಂಡ ಶ್ರೀ ಲಕ್ಷ್ಮೀ ಹಯಗ್ರೀವ ಟ್ರಸ್ಟ್ ಕಮಿಟಿಯವರು ಪ್ರಕಾಶಪಡಿಸಿರುವುದಕ್ಕಾಗಿ ಅವರಿಗೆ ನನ್ನ ವಿಶ್ವಾಸಪೂರ್ವಕ ಕೃತಜ್ಞತೆಗಳು ಸಲ್ಲತಕ್ಕವುಗಳಾಗಿವೆ. ದಾಸನು ಅತಿ ಸಂಕೋಚದಿಂದ ಬಹು ಸಂಕ್ಷಿಪ್ತವಾಗಿ ಬರೆದುಕೊಟ್ಟ ಈ ಕೃತಿಯು ಇದರ ಮೂಲವಾದ ಶ್ರೀಮದ್ರಹಸ್ಯತ್ರಯ ಸಾರ 'ಎಂಬ ದಿವ್ಯ ಪ್ರಬಂಧದಲ್ಲಿ ಪ್ರವೇಶವಿಲ್ಲದವರಿಗೆ ಅದರಲ್ಲಿ ಪ್ರವೇಶಿಸುವಷ್ಟು ರುಚಿ ಜನಕವಾಗಿರಲೆಂಬುವಷ್ಟೇ ಉದ್ದೇಶವುಳ್ಳದ್ದು. ಇದಕ್ಕೆ ಒಂದು ನಿದರ್ಶನ: ವೈಶಂಪಾಯನರು ಜನಮೇಜಯನನ್ನು "ಸಾಕಲ್ಯದಿಂದ ಮಹಾಭಾರತ ಕಥೆಯನ್ನು ಹೇಳುವೆನು, ಕೇಳು." – ಎಂದರಂತೆ. ಅದಕ್ಕೆ ಅವನು "ಅವಕಾಶವಿಲ್ಲ" – ಎಂದ, "ಒಂದೇ ಒಂದು ಪರ್ವವನ್ನಾದರೂ ಕೇಳು" – ಎಂದರು. "ಅವಕಾಶವಿಲ್ಲ" – ಎಂದ. "ಹೋಗಲಿ, ಒಂದು ಅಧ್ಯಾಯವನ್ನಾದರೂ ಕೇಳು" – ಎಂದರು. "ಅದಕ್ಕೂ ಅವಕಾಶವಿಲ್ಲ" – ಎಂದ. "ಒಂದು ಶ್ಲೋಕವನ್ನಾದರೂ ಕೇಳು." – ಎಂದರು. "ಹಾಗಾದರೆ ಹೇಳಿ." – ಎಂದ. ಆಗ ಅವರು —

ದ್ವಾವಿಮೌ ಪುರುಷೌ ಮೂಢೌ ದುರ್ಯೋಧನ ದಶಾನನೌ ।
ಗೋಗ್ರಹಂ ವನಭಂಗಂ ಚ ದೃಷ್ಟ್ವಾ ಯುದ್ಧಂ ಪುನಃ ಪುನಃ ॥ —

—ಎಂಬ ಒಂದು ಶ್ಲೋಕವನ್ನು ಸಾಕಾಂಕ್ಷವಾಗಿ ಹೇಳಲು ಅದರಲ್ಲಿ ಅವನಿಗೆ ರುಚಿ ಹುಟ್ಟಿ – "ಗೋಗ್ರಹ ಯಾವುದು? ವನಭಂಗ ಯಾವುದು?"– ಇತ್ಯಾದಿಯಾಗಿ ಮೇಲೆ ಮೇಲೆ ಪ್ರಶ್ನಿಸಲು ಅಡಿಯಿಂದ ಕೊನೆಯವರೆಗೂ ಅವನಿಗೆ ಮಹಾಭಾರತವನ್ನೆಲ್ಲಾ ಹೇಳಿದಂತೆ. ಈ ವೃತ್ತಾಂತವೂ ಇಲ್ಲಿ ಅನುಸಂಧೇಯ. ಈ ಸಣ್ಣ ಪುಸ್ತಕದ ಮೂಲ ಗ್ರಂಥವಾದ 'ಶ್ರೀಮದ್ರಹಸ್ಯತ್ರಯಸಾರ'—ವೆಂಬುದರಲ್ಲಿ 32 ಅಧಿಕಾರಗಳಿವೆ. ಇವು 1. ಅರ್ಥಾನುಶಾಸನ ಭಾಗ. 2. ಸ್ಥಿರೀಕರಣ ಭಾಗ. 3. ಪದವಾಕ್ಯಯೋಜನಾ ಭಾಗ. 4. ಸಂಪ್ರದಾಯ ಪ್ರಕ್ರಿಯಾ ಭಾಗಗಳೆಂದು ನಾಲ್ಕು ವಿಭಾಗಗಳಾಗಿವೆ. ಆಯಾ ಅಧಿಕಾರ ಕ್ರಮದಲ್ಲಿ ಅವುಗಳ ಅರ್ಥಗಳನ್ನು ಪ್ರಕೃತ ಕಿರುಹೊತ್ತಿಗೆಯಲ್ಲಿ ಸಂಗ್ರಹಿಸಲಾಗಿದೆ.

ಇದರಲ್ಲಿಯ ಕೆಲವು ಶಾಸ್ತ್ರೀಯ ಪದಗಳ ಮತ್ತು ಕಠಿಣ ಶಾಸ್ತ್ರಾರ್ಥಗಳ ವಿವರಣೆಯು ಈ ಸಂಕ್ಷಿಪ್ತ ಗ್ರಂಥದ ಮಿತಿಗೆ ಒಳಪಟ್ಟದ್ದಲ್ಲ. ಇವುಗಳ ವಿವರಣೆಯನ್ನು ಮೂಲ ಗ್ರಂಥವಾದ ಶ್ರೀಮದ್ರಹಸ್ಯ ತ್ರಯಸಾರದ ಸಾಂಪ್ರದಾಯಿಕ ಕಾಲಕ್ಷೇಪ ಕ್ರಮದಿಂದಲೇ ತಿಳಿಯಬೇಕು. ಅದಕ್ಕೆ ಸಾಮಾನ್ಯರಿಗೂ ರುಚಿ ಹುಟ್ಟಿಸುವುದಷ್ಟೇ ಇದರಲ್ಲಿಯ ಕೆಲಸ.

ವಿಷಯ ವೈಲಕ್ಷಣ್ಯವನ್ನು ಗಮನಿಸದೆ–

ಇನ್ನು, "ಅರ್ಥಾಸ್ವಾದನ ವೇಳಾಯಾಂ ಶಬ್ದಸಾಷ್ಠವ ಚಿಂತಕಾಃ ।

ನೀವೀಮೋಚನವೇಳಾಯಾಂ ವಸ್ತ್ರಮೂಲ್ಯವಿಚಾರಕಾಃ" – ಎಂಬಂತೆ ಈಚಿನ ಕೇವಲ ಲೌಕಿಕ ಕಥೆ ಕಾದಂಬರಿಗಳ ಶೈಲಿಯೊಡನೆ ಇದರ ಭಾಷಾ ಶೈಲಿಯನ್ನು ಹೋಲಿಸಿ ಟೀಕಿಸುವ ದೋಷಾನ್ವೇಷಣ ರಸಿಕರಿಗೆ ಇದು ಒಂದು ವಿಧವಾದಮೋಜಿಗೂ ಕಾರಣವಾಗಬಹುದು. ಆದರೆ, ವಿಷಯ ಗ್ರಹಣಕ್ಕೆ ಅಡ್ಡಿಯಾಗದೆ. ವಿಷಯ ಗಾಂಭೀರ್ಯಕ್ಕೆ ತಕ್ಕಂತೆ ಭಾಷಾ ಶೈಲಿಯಿರಬೇಕಾದುದು ಸಹಜ, ಇದರಿಂದ ವಿಷಯ ಗ್ರಹಣೇಪ್ಸುಗಳಿಗೆ ವಿಶಿಷ್ಟ ಗ್ರಹಣವಾಗುವುದೂ ಸೂಕ್ತವೆಂಬುದು ಸಹೃದಯರಿಗೆ ಮೆಚ್ಚಿಗೆಯಾಗುವುದೆಂದು ಭಾವಿಸಿದ್ದೇನೆ. ಶಾಸ್ತ್ರೀಯ ವಿಷಯಗಳಿಗೆ ಅವಕ್ಕೆ ತಕ್ಕ ಆಯಾ ಶಾಸ್ತ್ರೀಯ ಭಾಷೆಯೂ ಮತ್ತಷ್ಟು ಕಳೆಕಟ್ಟುವುದಷ್ಟೆ !

ಕೆಲವು ಲಿಪಿಗಳು ಅಚ್ಚುಕೂಟದಲ್ಲಿ ಇಲ್ಲದ ಕಾರಣ, ಕೆಲವು ತಮಿಳು ಲಿಪಿಗಳಿಗೆ ಪ್ರತಿಯಾಗಿ ಅವುಗಳ ಉಚ್ಚಾರಣೆಗೆ ಸಮೀಪಿಸಿರುವ 'ಱ' 'ೞ' ಎಂಬ ಕನ್ನಡ ಲಿಪಿಗಳನ್ನು ಇದರೊಳಗೆ ಉಪಯೋಗಿಸಿದೆ. ಸಣ್ಣ ಪುಟ್ಟ ಹಲವು ಮುದ್ರಣದ ದೋಷಗಳಿಗಾಗಿ ಶುದ್ಧಾ ಶುದ್ಧ ಪಟ್ಟಿಯನ್ನು ಕೊಟ್ಟಿದೆ. ಗ್ರಂಥವನ್ನು ಅಚ್ಚುಕಟ್ಟಾಗಿ ಮುದ್ರಿಸಿ ಕೊಟ್ಟಿರುವುದಕ್ಕಾಗಿ, ಅಚ್ಚು ಕೂಟದವರೂ ಅಭಿನಂದ್ಯರು, ಈ ಸಂಬಂಧದಲ್ಲಿ ಮೊದಲಿನಿಂದ ಕೊನೆಯವರಿಗೂ ಪ್ರತಿಗಳ ಶೋಧನೆಗಾಗಿಯೂ ಅಡಿಗಡಿಗೂ ದಾಸನ ಬಳಿಗೆ ಒಬ್ಬರು ತಪ್ಪಿ ಒಬ್ಬರಾಗಿ ಓಡಾಡಿ ಬಹು ಶ್ರಮವಹಿಸಿದ ಶ್ರೀ ರಾಜಗೋಪಾಲಾಚಾರಿಯವರಿಗೂ, ಶ್ರೀ ಪಾರ್ಥಸಾರಥಿಯವರಿಗೂ ನನ್ನ ಕೃತಜ್ಞತಾ ಪೂರ್ವಕವಾದ ಪ್ರಶಸ್ತ ಶುಭಾಶಯಗಳನ್ನು ಈ ಮೂಲಕ ಮತ್ತೊಮ್ಮೆ ಅರ್ಪಿಸುತ್ತೇನೆ.

ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ,
ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀ ಗುರವೇ ನಮಃ॥

ಅನಂತ ಸೂರಿ ಸೂನವೇ ಽಭಿನಂದ್ಯ ಮಾನ ವೈಭವಾತ್, ದಿಗಂತವಾದಿ-ಹಂಸ ಜೈತ್ರ ಕಾಳಮೇಘದೇಶಿಕಾತ್ । ಉಪಾತ್ತ ಸರ್ವಶಾಸನಾಯ ಹಂತ ವರ್ಷವಿಂಶಕೌ: ಪುನಃ ಪುನರ್ನಮಸ್ಕ್ರಿಯಾಸ್ತುವೇಂಕಟೇಶ ಸೂರಯೆ ॥

— ಇತಿ ಶಮ್ —

ಇತಿ ಸಜ್ಜನ ವಿಧೇಯು
ಗ್ರಂಥ ಕರ್ತೃ



# ಶುದ್ಧಾಶುದ್ಧ ಪತ್ರಿಕೆ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| 16 | 20 | ಬಿಡಲ್ಪಟ್ಟದ್ವಿಯುತ್ತರಾದ ತನ್ನಲ್ಲಿ | ಬಿಡಲ್ಪಟ್ಟ ತನ್ನಲ್ಲಿ |
| 17 | 1 | ಕಾರಣಸ್ವಾತಾನುಭವ | ಕಾರಣವಾದ ಸ್ವಾತ್ಮಾನುಭವ |
| 18 | 25 | ಭೋಜ್ಯ | ಭೋಗ್ಯ |
| 27 | 27 | ದುಖಃ | ದುಃಖ |
| 29 | 8 | ಮೂಲಪಾದ | ಮೂಲವಾದ |
| 32 | 24 | ಯದ್ಯತ್ | ಯದ್ವತ್ |
| 50 | 1 | ಸ್ವಾಮ್ಯನಿಯುಕ್ತತಾ | ಸ್ವಾಮ್ಯವಿಯುಕ್ತತಾ |
| 54 | 7 | ನ್ಮ ಕಾಖಾತ್ | ನ್ಮ ಖಾತ್ |
| 54 | 24 | ನಪುರ್ವ್ಯತ್ತಿಃ | ವಪುರ್ವ್ಯತ್ತಿಃ |
| 59 | 17 | ಸ್ವನಿಷ್ಠಾ | ಸ್ವನಿಷ್ಠಾಂ |
| 65 | 13 | ಮೋದಂ | ಮೋ ಮತಂ |
| 66 | 7 | ಶೇಪಿ | ಶೇಷಿ |
| 68 | 16 | ಪುರುಷಾಧಕಾಷ್ಠೆ | ಪುರುಷಾರ್ಥಕಾಷ್ಠೆ |
| 71 | 25 | ಧರ್ವ್ಮ್ಯವೂ | ಧರ್ಮ್ಯವೂ |
| 72 | 13 | ಸಂಕೇತತಗಳಾದ | ಸಂಕೇತಗಳಾದ |
| 84 | 16 | ಎಲ್ಲಿಂದ | ಎಂದರೆ |
| 85 | 18 | ಪಯುಕ್ತ | ಪ್ರಯುಕ್ತ |
| 87 | 1 | ಮವಪ್ರಿಯಃ | ಮಮಪ್ರಿಯಃ |
| 87 | 7 | ಅರ್ಚನಾದಿ | ಅರ್ಚಿರಾದಿ |
| 88 | 17 | ಕಾಣರತ್ವ | ಕಾರಣತ್ವ |
| 88 | 22 | ಆನಂದೇವ | ಆನಂದೇನ |
| 89 | 6 | ಪ್ರತ್ಯರ್ಥಿಕ್ವಂ | ಪ್ರತ್ಯರ್ಥಿತ್ವಂ |
| 89 | 13 | ನಷ್ಕರ್ಮ್ಯ | ನೈಷ್ಕರ್ಮ್ಯೇ |
| 89 | 15 | ಕಥನುಸಾರರ್ಚಿ | ಕಥಮಸಾವರ್ಚಿ |
| 90 | 10 | ಸಮ್ಯಗುಪಪನ್ನನೂ | ಸಮ್ಯಗುಪಸನ್ನನೂ |
| 90 | 25 | ತನಗ್ಮೋ | ತನಗೋ |

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| 101 | 20 | ಯನ್ತಿ | ಯಾನ್ತಿ |
| 106 | 24 | ಮಾಲಾಕಾರಣ | ಮಾಲಾಕರಣ |
| 111 | 11 | ದಾನಜ | ದಾನದ |
| 111 | 23 | ವಹಾನಿಂದೆಗೆ | ಮಹಾನಿಂದೆಗೆ |
| 122 | 7 | ಸಕ್ತನ್ | ಸಕ್ತಾನ್ |
| 129 | 19 | ಸಾರ್ಥ | ಸಾರ್ಧ |
| 132 | 22 | ತನ್ಬಿಡುವುವ್ | ತನ್ಡಿಡುವುವ್ |
| 133 | 3 | ನಾರಾಣೇತಿ | ನಾರಾಣೇತಿ |
| 133 | 11 | ಉಪಮೇಯತ್ವ | ಉಪೇಯತ್ವ |
| 134 | 1 | ಯೆಂದ–ೕ | ಯೆಂದರೆ |
| 135 | 14 | ತಥ್ಯೆ | ತಥ್ಯೈ |
| 135 | 15 | ವಾರ್ಥಣಾನಿ ಚ | ವಾಥರ್ವಣಾನಿ ಚ |
| 139 | 14 | ಸತ್ಯಾದಿ | ಪತ್ನ್ಯಾದಿ |
| 144 | 17 | ಣ | ಕ್ಷಣ |
| 144 | 22 | ನಿಥಿನಾ | ವಿಧಿನಾ |
| 157 | 18 | ಶ್ರುಕ | ಶ್ರುತ |
| 147 | 22 | ಪರಮಚಾರ್ಯ | ಪರಮಾಚಾರ್ಯ |
| 149 | 7 | ತದರ್ಥಾದರ್ಥ | ತದರ್ಥಾದರ್ಥಮೇವವಾ |
| 150 | 8 | ನೆಲ್ಲಿಕಾಯಿ | ಎಲಿಚಿಕಾಯಿ |
| 148 | 25 | ಹೊತ್ಸಿ | ಹೊತ್ತಿಸಿ |

ಶ್ರೀಃ

# ಶ್ರೀಮದ್ರಹಸ್ಯತ್ರಯಸಾರ ಸಂಗ್ರಹ

ಗುರುಭ್ಯಃ ತದ್ಗುರುಭ್ಯಶ್ಚ ನಮೋವಾಕಮಧೀಮಹೇ ।
ವೃಣೀಮಹೇಚತತ್ರಾದ್ಯೌ ದಂಪತೀ ಜಗತಾಂಪತೀ ॥
ಶ್ರೀಮಾನ್ ವೇಂಕಟನಾಥಾರ್ಯಃ ಕವಿತಾರ್ಕಿಕ ಕೇಸರೀ ।
ವೇದಾಂತಾಚಾರ್ಯವರ್ಯೋಮೇ ಸನ್ನಿಧತ್ತಾಂ ಸದಾ ಹೃದಿ ॥

ಸರ್ವೇಶ್ವರನಾದ ಭಗವಂತನೊಬ್ಬನುಂಟೆಂದು ನಂಬಿರುವ ಸಕಲ ದರ್ಶನಗಳಲ್ಲಿಯೂ. ಭಗವಂತನ ಅನುಗ್ರಹದಿಂದಲೇ ಎಲ್ಲಾ ಇಷ್ಟಗಳನ್ನೂ ಪಡೆಯಬೇಕೆಂಬುದರಲ್ಲಿ ವಿವಾದವಿಲ್ಲ. ಕೇವಲ ದಯಾಮಯನೂ ಜಗದ್ರಕ್ಷಕನೂ ಆದ ಭಗವಂತನ ಅನುಗ್ರಹವನ್ನು ಸಂಪಾದಿಸುವುದರಲ್ಲಿ ದೇಶ, ಜಾತಿ, ಕುಲ, ಗೋತ್ರ, ವರ್ಣ, ಆಶ್ರಮ ಮೊದಲಾದ ತಾರತಮ್ಯವಿಲ್ಲ.

ಅವನ ಅನುಗ್ರಹವನ್ನು ಸಂಪಾದಿಸುವುದಕ್ಕೆ ಅವನ ಪಾದಾರವಿಂದಗಳಲ್ಲಿ ಶರಣವರಣ ಮಾಡುವುದೇ ಸರ್ವಸುಲಭವಾದ ಮಾರ್ಗ. ಲೋಕದಲ್ಲಿ ಅಪರಾಧ ಮಾಡಿದವನು ಸ್ವಾಮಿಯ ಅನುಗ್ರಹವನ್ನು ಪಡೆಯಬೇಕಾದರೆ ಅವನ ಕಾಲುಗಳನ್ನು ಹಿಡಿಯುವುದಕ್ಕಿಂತ ಸುಲಭವಾದ ಮಾರ್ಗವಿಲ್ಲ, ಇದೇ ಪ್ರಪತ್ತಿ ಅಥವಾ ಶರಣಾಗತಿಯೆನ್ನುವುದು.

ಪ್ರಪತ್ತಿಯೆಂದರೆ ಮರೆಹೋಗುವುದು. ಲೋಕ ದೃಷ್ಟಿಯಿಂದಲೇ ಇದು ಮೂರು ಬಗೆಯಾಗಿದೆ.

1. ಪ್ರಪತ್ತಿಶಾಸ್ತ್ರಾರ್ಥವನ್ನು ಚೆನ್ನಾಗಿ ತಿಳಿದುಕೊಂಡು ಸಾಂಗವಾಗಿ ತನ್ನ ಅಭೀಷ್ಟಸಿದ್ಧಿಗಾಗಿ ಸರ್ವೇಶ್ವರನಲ್ಲಿ ಪ್ರಪತ್ತಿಮಾಡುವುದು ಒಂದು ವಿಧ. ಇದು ಸ್ವನಿಷ್ಠೆಯೆನಿಸುವುದು.

2. ದಾದಿ ಮೊದಲಾದವರು ಹೇಳಿಕೊಟ್ಟ ಮಾತುಗಳನ್ನು ಬಾಲನಾದ ಸಾಮಂತರಾಜಕುಮಾರನು ಸಾರ್ವಭೌಮನ ಬಳಿಯಲ್ಲಿ ಹೇಳಿ ಇಷ್ಟಾರ್ಥವನ್ನು

ಹೊಂದುವ ರೀತಿಯಲ್ಲಿ, ಸದಾಚಾರ್ಯರಿಂದ ಉಪದೇಶಮಾಡಲ್ಪಟ್ಟ ಮಂತ್ರ ಗಳಿಂದ ಭಗವಂತನಲ್ಲಿ ಶರಣಾಗತಿ ಮಾಡುವುದು ಮತ್ತೊಂದು ವಿಧ. ಇದು ಉಕ್ತಿನಿಷ್ಠೆಯೆನಿಸುವುದು.

3. ಮಹಾರಾಜರುಗಳಲ್ಲಿ ಅತ್ಯಂತ ಅಂತರಂಗಪ್ರೀತಿಪಾತ್ರರಾದ ಮಂತ್ರಿ ಮೊದಲಾದ ಪರಿಜನರ ಪ್ರಾರ್ಥನೆಯಿಂದ ಆಶ್ರಿತರುಗಳ ವಿಷಯದಲ್ಲಿ ಮಹಾರಾಜರ ಅನುಗ್ರಹ ಲಭಿಸುವ ರೀತಿಯಲ್ಲಿ, ಸದಾಚಾರ್ಯರುಗಳ ಸಮಾಶ್ರ ಯಣದಿಂದ ಭಗವದನುಗ್ರಹವನ್ನು ಸಂಪಾದಿಸುವುದು ಮೂರನೆಯ ವಿಧ. ಇದು ಆಚಾರ್ಯನಿಷ್ಠೆಯೆನಿಸುವುದು, ಈ ಆಚಾರ್ಯನಿಷ್ಠೆಯಿಂದ ಪಶು ಪಕ್ಷಿ ಮೃಗವೇ ಮೊದಲಾದ ಸಕಲ ಪ್ರಾಣಿಗಳೂ ಭಗವಂತನ ಅನುಗ್ರಹಕ್ಕೆ ಪಾತ್ರ ಗಳಾಗಬಹುದು.

ಈ ಮೂರರಲ್ಲಿ ಯಾವ ಬಗೆಯಿಂದಲಾದರೂ ಸರಿಯೇ, ಪ್ರಪನ್ನರಾದ ವರಿಗೆ ಮಾತ್ರವೇ ಮೋಕ್ಷವೆಂಬುದು ಶಾಸ್ತ್ರಾರ್ಥ, ಪೂರ್ವ ಪೂರ್ವಾಚಾ ರ್ಯೋಪದೇಶ ಪರಂಪರೆಯಿಂದ ಬಂದಿರುವ ಪ್ರಪತ್ತಿರೂಪ ಆಚಾರ್ಯನಿಷ್ಠೆಯೇ ಮಹಾವಿಶ್ವಾಸವುಳ್ಳವರಿಗೆ ಸಮೀಚೀನ ಮಾರ್ಗ ಇದಕ್ಕೆ

"ಸಿದ್ಧಿರ್ಭವತಿ ವಾನೇತಿ ಸಂಶಯೋಽಚ್ಯುತಸೇವಿನಾಂ ।
ಅಸಂಶಯಸ್ತು ತದ್ಭಕ್ತ ಪರಿಚರ್ಯಾರತಾತ್ಮನಾಂ ॥"

ಇತ್ಯಾದ್ಯನೇಕ ಪ್ರಮಾಣಗಳಿವೆ.

"ಪಾಪಿಷ್ಠಃ ಕ್ಷತ್ರಬಂಧುಶ್ಚ ಪುಂಡರೀಕಶ್ಚಪುಣ್ಯಕೃತ್ ।
ಆಚಾರ್ಯವತ್ತಯಾ ಮುಕ್ತೌ ತಸ್ಮಾದಾಚಾರ್ಯವಾನ್ ಭವೇತ್ ॥".

—ಎಂಬುದರಿಂದ ಆಚಾರ್ಯನೇ ಸರ್ವರಿಗೂ ಮೋಕ್ಷಕ್ಕೆ ಕಾರಣನೆಂಬುದು ಸ್ಪಷ್ಟ ಆದುದರಿಂದ ಮುಮುಕ್ಷುಗಳೆಲ್ಲರಿಗೂ ಮೊದಲು ಆಚಾರ್ಯವತ್ತೆಯು ಅತ್ಯಾವಶ್ಯಕ.

ಹೀಗೆ ಮೋಕ್ಷಕ್ಕಾಗಿ ಪ್ರಪತ್ತಿಯನ್ನು ಮಾಡತಕ್ಕ ಮನುಷ್ಯನು ಪ್ರಪತ್ತಿಯ ಸ್ವರೂಪವನ್ನೂ ಪರಿಕರಗಳನ್ನೂ, ಅದಕ್ಕೆ ಮೊದಲು ತನ್ನ ಸ್ಥಿತಿಯನ್ನೂ ಪ್ರಪತ್ತ್ಯನಂತರ ತನ್ನ ಕೃತ್ಯವನ್ನೂ, ಇತರ ಭಾಗವತರುಗಳ ವಿಷಯದಲ್ಲಿ ತಾನಿರಬೇಕಾದ ರೀತಿಯನ್ನೂ ಪ್ರಪತ್ತಿಕುಲದಲ್ಲಿ ಅನುಸಂಧಾನ ಮಾಡತಕ್ಕ

ಮಂತ್ರ ಮಂತ್ರಾರ್ಥಗಳ ನಿರ್ಣಯವನ್ನೂ ತಿಳಿದುಕೊಂಡಿರಬೇಕೆಂಬ ಅಂಶ ಗಳನ್ನು ಶ್ರೀಮದ್ರಹಸ್ಯತ್ರಯಸಾರವೆಂಬ ಶಾಸ್ತ್ರವು ಚೆನ್ನಾಗಿ ವಿಶದಪಡಿಸುತ್ತದೆ. ಇದು ಶ್ರುತಿ, ಸ್ಮೃತಿ, ಇತಿಹಾಸ, ಪುರಾಣ, ಆಗಮ, ದಿವ್ಯಪ್ರಬಂಧಗಳು ಮೊದಲಾದ ಸಕಲ ರಹಸ್ಯ ಗ್ರಂಥಗಳ ಸಾರಸರ್ವಸ್ವ.

ಪ್ರಪತ್ತಿಯೆಂದರೆ ತನ್ನ ಇಷ್ಟಪ್ರಾಪ್ತಿಗಾಗಿ ತಾನು ಮಾಡಬೇಕಾದ ಪ್ರಯತ್ನದ ಭಾರವನ್ನು ಪ್ರಾರ್ಥನಾಪೂರ್ವಕವಾಗಿ ಭಗವಂತನಲ್ಲಿ ಸಮರ್ಪಿ ಸುವುದು—ಅಂದರೆ. ನನ್ನ ಪ್ರಯತ್ನವಿಲ್ಲದೆಯೆ, ತಮ್ಮಿಂದ ನನ್ನ ಇಷ್ಟ ಸಿದ್ಧಿಸಬೇಕೆಂಬ ಭಾವನೆ. ಇದಕ್ಕೆ ಮಹಾವಿಶ್ವಾಸವೆಂಬುದು ಬಹು ಮುಖ್ಯ ಅಂಶ.

ವಿಶೇಷತಃ, ಮುಮುಕ್ಷುಗಳಾಗಿ ಅಕಿಂಚನರೂ ಆದ ನಮಗೆ ಪ್ರಪತ್ತಿಯೇ ಮೋಕ್ಷೋಪಾಯ, ಜ್ಞಾನಶಕ್ತ್ಯಾದಿ ಸರ್ವಾಕಾರಪರಿಪೂರ್ಣನಾದ ತಿರುಪತಿ ಶ್ರೀನಿವಾಸಸ್ವಾಮಿಯು ತನ್ನ ದಿವ್ಯ ಘಂಟೆಯನ್ನು ಶ್ರೀ ತೂಪ್ಪುಲ್ ನಿಗಮಾಂತ ಮಹಾದೇಶಿಕರಾಗಿ ಅವತಾರ ಮಾಡಿಸಿ ತನಗೇ ಅಸಾಧಾರಣವಾದ ಜ್ಞಾನ ಶಕ್ತ್ಯಾದಿಗಳನ್ನೂ ಉಂಟುಮಾಡಿ ಮುಮುಕ್ಷುಗಳು ಅವಶ್ಯ ತಿಳಿಯಬೇಕಾದ ಅರ್ಥವಿಶೇಷಗಳೆಲ್ಲವನ್ನೂ ಪ್ರಪದನಕಲಾಜನ್ಮಜಲಧಿಯಾದ **ಶ್ರೀಮದ್ರಹಸ್ಯ ತ್ರಯಸಾರ**ವೆಂಬ ಪ್ರಬಂಧ ರತ್ನದಲ್ಲಿ ಪ್ರಕಾಶಮಾಡಿಸಿದನು. ಅವಶ್ಯ ಅರಿಯ ಬೇಕಾದ ಪ್ರಪತ್ತಿಯ ಸ್ವರೂಪ, ಅಧಿಕಾರ, ಪರಿಕರಗಳೇ ಮುಂತಾದುವನ್ನು ಅರಿಯಲು ಈ ಮಹಾಪ್ರಬಂಧದ ಕಾಲಕ್ಷೇಪವನ್ನು ಬಿಟ್ಟು ಬೇರೆ ಸಾಧನವಿಲ್ಲ.

**ಗುರು ಪರಂಪರಾಸಾರ :**—ಈ ರಹಸ್ಯತ್ರಯಸಾರರೂಪ ಬ್ರಹ್ಮವಿದ್ಯೆ ಯನ್ನು ತಿಳಿಯಲಿಚ್ಛಿಸುವ ಮುಮುಕ್ಷುವು ಮೊದಲು ಸದಾಚಾರ್ಯ ಪರಂಪರೆ ಯನ್ನು, ಸ್ವಾಚಾರ್ಯರಿಂದ ಹಿಡಿದು ಪರಮಾಚಾರ್ಯನಾದ ಭಗವಂತನವರಿಗೂ ಅನುಸಂಧಾನಮಾಡಬೇಕು. ಆಚಾರ್ಯನಿಲ್ಲದವನಿಗೆ ಮೋಕ್ಷವಿಲ್ಲ. ಸಕಲ ಲೋಕಗಳಿಗೂ ಸರ್ವೇಶ್ವರನೇ ಪರಮಾಚಾರ್ಯ, ಹೇಗೆಂದರೆ, ಆ ಸರ್ವೇಶ್ವರನೇ ಎಲ್ಲರನ್ನೂ ಅನುಗ್ರಹಿಸುವಇಚ್ಛೆಯಿಂದ ಹಂಸ, ಮತ್ಸ್ಯ, ಹಯಗ್ರೀವ, ನರ-ನಾರಾಯಣ - ಗೀತಾಚಾರ್ಯ ಮೊದಲಾದ ರೂಪಗಳನ್ನೆತ್ತಿ ಸಾಕ್ಷಾತ್ತಾಗಿಯೂ ಚತುರ್ಮುಖ. ಸನಕ. ಸನತ್ಕುಮಾರ, ನಾರದ, ಪರಾಶರ, ವಾಲ್ಮೀಕಿ, ಶುಕ - ಶೌನಕರೇ ಮುಂತಾದವರ ಮೂಲಕ ಪರಂಪರೆಯಾಗಿಯೂ, ಈ ಮಹ

ತ್ತಾದ ಆಧ್ಯಾತ್ಮ ವಿದ್ಯೆಯನ್ನು ಪ್ರವರ್ತನಗೊಳಿಸಿದನು. ಅಲ್ಲದೆ, ಪರಾಂಕುಶ, ಪರಕಾಲ, ಮಧುರಕವಿ, ಈಶ್ವರಮುನಿ, ನಾಥಮುನಿ, ಯಾಮುನಮುನಿ, ಶ್ರೀ ರಾಮಾನುಜಮುನಿ ಪ್ರಭೃತಿ ಆಚಾರ್ಯರುಗಳ ಮೂಲಕ ಇವನ್ನು ಸುದೃಢವಾಗಿ ಸ್ಥಾಪಿಸಿದನು. ಆದ್ದರಿಂದ ಪ್ರಶಸ್ತತಮವಾದ ಈ ವಿದ್ಯೆಯು ಸದಾಚಾರ್ಯರುಗಳಿಂದ ಸಚ್ಛಿಷ್ಯರುಗಳಿಗೆ ಮಾತ್ರವೇ ಉಪದೇಶಿಸಲ್ಪಡತಕ್ಕದ್ದು. ಆ ಶಿಷ್ಯರೂ ಕೂಡ ಕೃತಜ್ಞತಮರಾಗಿದ್ದುಕೊಂಡು ಈ ಗುರುಪರಂಪರೆಯನ್ನು ಭಜಿಸಬೇಕು, ಸದಾ ಅನುಸಂಧಾನವನ್ನೂ ಮಾಡಬೇಕು. ಮುಂದೆ ಈ ಸದ್ಗ್ರಂಥವು 32 ಅಧಿಕಾರಗಳುಳ್ಳದ್ದಾಗಿದೆ.

## ೧. ಉಪೋದ್ಘಾತಾಧಿಕಾರ

ಶ್ರಿಯಃಪತಿಯಾದ ಸರ್ವೇಶ್ವರನಿಗೆ ಜೀವಾತ್ಮರು ಕೌಸ್ತುಭ ಸ್ಥಾನೀಯರಾಗಿದ್ದುಕೊಂಡು ಹೃದಯಂಗಮರಾಗಿ, ಕುಮಾರರೆಂದೂ, ಪುತ್ರರೆಂದೂ. ಶಿಷ್ಯರೆಂದೂ, ಪ್ರೇಷ್ಯರೆಂದೂ ಶೇಷಭೂತರೆಂದೂ, ದಾಸಭೂತರೆಂದೂ. ಆಯಾ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದ್ದಾರೆ. ಇವರೆಲ್ಲರಿಗೂ ಸ್ವಾಭಾವಿಕ ಶೇಷಿಯೂ, ದೋಷಗಂಧರಹಿತನೂ ಸಮಸ್ತ ಕಲ್ಯಾಣ ಗುಣಗಣ ಪರಿಪೂರ್ಣನೂ, ಉಭಯವಿಭೂತಿನಾಥನೂ ಆದ ಸರ್ವೇಶ್ವರನಾದ ಶ್ರೀಮನ್ನಾರಾಯಣನು ಶ್ರೀವೈಕುಂಠ ದಿವ್ಯಲೋಕದಲ್ಲಿ ದಿವ್ಯ ಮಹಿಷೀ - ಪರಿಜನ - ಪರಿಚ್ಛದ ವಿಶಿಷ್ಟನಾಗಿ ಶೇಷಪರ್ಯಂಕದಲ್ಲಿ ತಾನು ಬಾಳುವ ನಿರತಿಶಯಾನಂದ ರೂಪ ಬಾಳ್ವೆಯನ್ನು ಜೀವಾತ್ಮರೆಲ್ಲರೂ ಸದಾ ಅನುಭವಿಸಿಕೊಂಡು ಕೃತಾರ್ಥರಾಗಬೇಕೆಂಬ ಬಯಕೆಯುಳ್ಳವನಾಗಿದ್ದಾನೆ. ಅಂತಹ ಸಹೃದಯನ ಬಳಿ ಸೇರಿ ಅವನಿಗೆ ಸರ್ವದೇಶ - ಸರ್ವಕಾಲ - ಸರ್ವಾವಸ್ಥೆಗಳಿಗೂ ತಕ್ಕ ಸರ್ವವಿಧ ಕೈಂಕರ್ಯಗಳನ್ನೂ ನಿತ್ಯಸೂರಿಗಳಂತೆ ತಾವೂ ಮಾಡಿಕೊಂಡಿರಲು ಇವರೆಲ್ಲರೂ ಸ್ವರೂಪತಃ ಅರ್ಹರು.

ಆದರೂ ಅನಾದಿಮಾಯೆಗೆ ವಶರಾಗಿ ತತ್ತ್ವ - ಹಿತ - ಪುರುಷಾರ್ಥಗಳ ಯಥಾರ್ಥ ಜ್ಞಾನವಿಲ್ಲದೆ, ಬೇಟೆಯಲ್ಲಿ ಆಸಕ್ತನಾದ ರಾಜನಕಡೆಯಿಂದ ಕಾಡಿನಲ್ಲಿ ಎಲ್ಲಿಯೋ ತಪ್ಪಿಸಿಕೊಂಡು ಬೇಡರ ಕೈ ಸೇರಿ ಬೆಳೆಯುತ್ತಿರುವ ರಾಜಕುಮಾರನಂತೆ, ಇವರೂ ಸ್ವಾಭಾವಿಕವಾದ ಸ್ವಸ್ವರೂಪವನ್ನು ಮರೆತು ಔಪಾಧಿಕವಾದ ದೇವ, ಮರ್ತ್ಯ, ಮೊದಲಾದ ಸ್ವರೂಪವನ್ನು ತಮ್ಮಲ್ಲಿ ಆರೋಪಿಸಿ

ಕೊಂಡು ಪ್ರಕೃತಿಯೆಂಬ ಮರುಕಾಂತಾರದಲ್ಲಿ ಸುತ್ತಿ ದಿಕ್ಕು ಕಾಣದೆ ಅಲೆದಾಡು ತ್ತಿದ್ದಾರೆ.

ಈ ಸ್ಥಿತಿಯಲ್ಲಿ ರಾಜಕುಮಾರ ಲಕ್ಷಣಗಳನ್ನು ಕಂಡು ಜಾತಿ ವಿಶೇಷ ಗಳನ್ನು ಅರಿತ ಕೆಲವು ಕಾರುಣಿಕರು ಆ ರಾಜಕುಮಾರನಿಗೆ ಅವನ ಸತ್ಯಸ್ವರೂ ಪವನ್ನು ಹೇಗೆ ತಿಳಿಸುವರೋಹಾಗೆ, ಈ ಜೀವಾತ್ಮರಿಗೂ ಕೆಲವು ಧಾರ್ಮಿಕರು ಸದುಪದೇಶ, ಅನುಷ್ಠಾನ ಮೊದಲಾದುವುಗಳಿಂದ ಇವರ ನಿಜವಾದ ಸ್ವರೂಪ ವನ್ನು ತಿಳಿಸಿ, ಸ್ವರೂಪಕ್ಕೆ ಅನುರೂಪವಾದ ಅತಿಶಯಿತ ಪುರುಷಾರ್ಥದಲ್ಲಿ ರುಚಿಯನ್ನು ಹುಟ್ಟಿಸಿ, ಹೇಯೋಪಾದೇಯ ವಿಭಾಗಕ್ಷಮರನ್ನಾಗಿಯೂ ಮಾಡುತ್ತಾರೆ.

ಹೀಗೆ ಧಾರ್ಮಿಕರ ಮೂಲಕ ಉಂಟಾದ ಆಸ್ತಿಕ್ಯ, ಸ್ವಾಭಾವಿಕ ಭಗವ ಚ್ಛೇಷತ್ವಜ್ಞಾನವನ್ನೂ, ಯಾದೃಚ್ಛಿಕ-ಆನುಷಂಗಿಕ-ಪ್ರಾಸಂಗಿಕವೇ ಮೊದಲಾದ ಸುಕೃತ ವಿಶೇಷಗಳ ಮೂಲಕ ಭಗವಂತನ ಸಹಜ ಕರುಣಾಕಟಾಕ್ಷಕ್ಕೆ ವಿಷಯ ರಾಗಿರುವಿಕೆಯನ್ನೂ, ಇದಕ್ಕೆ ಅನುರೂಪವಾದ ಅದ್ವೇಷ, ಆಭಿಮುಖ್ಯ ಮುಂತಾದುವನ್ನೂ ಇವರಲ್ಲಿ ಕಂಡು ಪರಮಕಾರುಣಿಕನಾದ ಪರಮಶೇಷಿ ಯಿಂದ ಪ್ರೇರಿತರೂ, ಕಾರುಣಿಕೋತ್ತಮರೂ ಆದ ಕೆಲವು ಆಚಾರ್ಯರು ಇವ ರಿಗೆ ಸ್ವಾಭಾವಿಕವಾದ ಭಗವತ್ಸಂಬಂಧವನ್ನು ಉಪದೇಶಿಸಿ ಆ ಭಗವಂತನನ್ನು ಹೊಂದುವ ಉಪಾಯವನ್ನು ಅನುಷ್ಠಿಸುವುದರಲ್ಲಿ ಆಸೆಯನ್ನೂ ಹುಟ್ಟಿಸಿ ಅವರ ಪ್ರಯೋಜನವನ್ನೇ ತಮಗೆ ಪರಮ ಪ್ರಯೋಜನವನ್ನಾಗಿ ತಿಳಿದು, ಆಗ ತಾನೇ ಜನಿಸಿದ ಕರುಗಳಲ್ಲಿ ಧೇನುಗಳು ಹೇಗೋ ಹಾಗೆ ಪ್ರೀತಿಯುಳ್ಳವರಾಗಿ ಅಜ್ಞಾನ - ಸಂಶಯ - ವಿಪರ್ಯಯಗಳನ್ನು ನೀಗಿಸುವ ದಿವ್ಯ ಸುಭಾಷಿತಗಳನ್ನು ಉಪದೇಶಿಸುತ್ತಾರೆ. ಇವರು ಉಪದೇಶಿಸಿದ ಸುಭಾಷಿತಗಳನ್ನು ಅವಲಂಬಿಸಿ, ಈಶ್ವರನ ಮತ್ತು ಈಶಿತವ್ಯಗಳ ಸ್ವರೂಪ - ಸ್ವಭಾವ - ಸಂಬಂಧಗಳೂ, ಭೋಗಾಪವರ್ಗಗಳೂ, ತ್ಯಾಜ್ಯೋಪಾದೇಯಗಳಾದ ಇವುಗಳ ಉಪಾಯ ಗಳೂ, ಗತಿಪ್ರಕಾರಗಳೂ, ಮೋಕ್ಷವಿರೋಧಿ ಮುಂತಾದುವೂ ಮುಮುಕ್ಷುವಾದ ಈ ಆತ್ಮನಿಗೆ ಅವಶ್ಯ ತಿಳಿಯಬೇಕಾದುವು. ಈ ಅರ್ಥಗಳೆಲ್ಲವೂ ಅಧ್ಯಾತ್ಮ ವಿಷಯಕ ಶಬ್ದರಾಶಿಯಲ್ಲಿ ಸಾರತಮವಾದ ರಹಸ್ಯತ್ರಯದಲ್ಲಿ ಸಂಗ್ರಹಿ ಸಲ್ಪಟ್ಟಿವೆ.

## ೨. ಸಾರನಿಷ್ಕರ್ಷಾಧಿಕಾರ :

"ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್ ನಾಸ್ತ್ಯಕೃತಃ ಕೃತೇನ - ತದ್ವಿಜ್ಞಾನಾರ್ಥಂ ಸ ಗುರುಮೇವಾಭಿ - ಗಚ್ಛೇತ್ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ - ತಸ್ಮೈಸ ವಿದ್ವಾನ್ ಉಪಸನ್ನಾಯ ಸಮ್ಯಕ್ ಪ್ರಶಾಂತಚಿತ್ತಾಯ ಶಮಾನ್ವಿತಾಯ - ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಂ,"—"ಸಚಾಚಾರ್ಯವಂಶೋಜ್ಞೇಯಃ ಆಚಾರ್ಯಾದಸಾವಸಾವಿತ್ಯಾಭಗವತ್ತಃ,"—"ಆಚಾರ್ಯಾದ್ಧ್ಯೇವ ವಿದ್ಯಾ ವಿದಿತಾ ಸಾಧಿಷ್ಠಂ ಪ್ರಾಪತ್,"—ಇತ್ಯಾದಿ ಶ್ರುತಿ ಪ್ರಮಾಣಗಳಿಗೆ ಅನುಗುಣವಾಗಿ ಗುರುಪರಂಪರೋಪಸತ್ತಿಪೂರ್ವಕವಾಗಿಯೇ ತತ್ತ್ವಜ್ಞಾನವನ್ನು ಸಂಪಾದಿಸತಕ್ಕದ್ದು. ಅಂತಹ ತತ್ತ್ವಜ್ಞಾನವುಳ್ಳವರಿಗೇ ಮೋಕ್ಷಲಭಿಸುವುದೆನ್ನಲಾಯಿತು. ಇದರ ಮೇಲೆ ಆಕ್ಷೇಪ - "ಅನಂತಪಾರಂ ಬಹು ವೇದಿತವ್ಯಂ ಅಲ್ಪಶ್ಚಕಾಲೋ ಬಹವಶ್ಚ ವಿಘ್ನಾಃ" - "ಶಾಸ್ತ್ರಜ್ಞಾನಂ ಬಹುಕ್ಲೇಶಂ ಬುದ್ಧೇಶ್ಚಲನಕಾರಣಂ?" - "ಸೂಕ್ಷ್ಮಃ ಪರಮದುರ್ಜ್ಞೇಯಃ ಸತಾಂಧರ್ಮಃ ಪ್ಲವಂಗಮ" -ಇತ್ಯಾದಿಗಳಲ್ಲಿ ತತ್ತ್ವಜ್ಞಾನ ಸಂಪಾದನೆ ದುಷ್ಕರವೆಂದು ಕಂಡುಬರುವುದರಿಂದ ಯಾರಿಂದ ತಾನೇ ಮೋಕ್ಷವನ್ನು ಸಾಧಿಸುವುದು ಸಾಧ್ಯ ?—ಎಂಬುದು. ಇದಕ್ಕೆ ಉತ್ತರ ;—"ಯತ್ಸಾರಭೂತಂ ತದುಪಾದದೀತ ಹಂಸೋ ಯಥಾ ಕ್ಷೀರಮಿವಾಂಬುಮಿಶ್ರಂ ||"— "ಉಪದೇಶಾತ್ ಹರಿಂ ಬುದ್ಧ್ವಾ ವಿರಮೇತ್ ಸರ್ವಕರ್ಮಸು,"—ಎಂದಿರುವುದರಿಂದ, "ಅಸಾರಮಲ್ಪಸಾರಂ ಚ ಸಾರಂ ಸಾರತರಂತ್ಯಜೇತ್ | ಭಜೇತ್ಸಾರತಮಂ ಶಾಸ್ತ್ರೇ ರತ್ನಾಕರ ಇವಾಮೃತಂ ||" —ಎಂಬಂತೆ ಶಾಸ್ತ್ರಗಳಲ್ಲಿ ಅಸಾರವೂ. ಅಲ್ಪಸಾರವೂ. ಸಾರವೂ ಸಾರತರವೂ ಆದವುಗಳನ್ನು ಬಿಟ್ಟು, ಪರಮಾತ್ಮ ಪ್ರಾಪ್ತಿಯನ್ನೂ ಅದಕ್ಕೆ ಉಪಾಯಗಳನ್ನೂ ಬೋಧಿಸುವ ಸಾರತಮವಾದ ಅಂಶವನ್ನು ಮಾತ್ರವೇ ಮುಮುಕ್ಷುವಾದವನು ಗ್ರಹಿಸಬೇಕು—ಎಂಬುದು.

ಅಂದರೆ, ಶಾಸ್ತ್ರದಲ್ಲಿ, ಬಾಹ್ಯಕುದೃಷ್ಟಿಗಳ ಶಾಸ್ತ್ರ ಸಮುದಾಯ ಅಸಾರವಾದುದರಿಂದ ಅದು ತ್ಯಾಜ್ಯ. ವೇದದಲ್ಲಿಯೂ ಐಹಿಕ ಫಲ ಸಾಧನವಾದ ಕರ್ಮಭಾಗ ಅಲ್ಪಸಾರವಾದುದರಿಂದ ಅದೂ ತ್ಯಾಜ್ಯ. ಆ ಭಾಗದಲ್ಲಿಯೇ ಕೆಲವು ಕರ್ಮಗಳು ಐಹಿಕ ಸುಖಕ್ಕಿಂತ ಅತಿಶಯ ಸುಖವನ್ನು ಬೋಧಿಸಿದಾಗ್ಯೂ,

ಅದು ದುಃಖಮೂಲವೂ ದುಃಖಮಿಶ್ರವೂ ದುಃಖೋದರ್ಕವೂ ಆದುದರಿಂದ ಆ ಭಾಗವೂ ತ್ಯಾಜ್ಯ. ವೇದದ ಉತ್ತರ ಭಾಗದಲ್ಲಿಯೂ ಸ್ವಾತ್ಮಾನುಭವ ಮಾತ್ರವಾದ ಕೈವಲ್ಯ ಸಾಧನವು, ಸಾರತರವಾದಾಗ್ಗೂ, ನಿರತಿಶಯ ಸುಖವಾದ ಪರಮಾತ್ಮಾನುಭವವನ್ನು ಬಯಸುವವರಿಗೆ ಅದೂತ್ಯಾಜ್ಯ. ಆದುದರಿಂದ ಇವೆಲ್ಲವನ್ನೂ ಬಿಟ್ಟು ಮುಮುಕ್ಷುವಾದವನು ಪರಮಾತ್ಮ ಪ್ರಾಪ್ತಿಯನ್ನೂ ಅದಕ್ಕೆ ಉಪಾಯಗಳನ್ನೂ ಬೋಧಿಸುವ ಭಾಗವು ಸಾರತಮವಾದ್ದರಿಂದ, ಅದನ್ನು ಮಾತ್ರವೇ ಗ್ರಹಿಸಬೇಕು. ಇದರಲ್ಲಿಯೂ, ಕ್ರಮವಾಗಿ ತತ್ತ್ವ, ಹಿತ, ಪುರುಷಾರ್ಥಗಳನ್ನು ಪ್ರತಿಪಾದಿಸುವ ಶ್ರೀಮದಷ್ಟಾಕ್ಷರ, ದ್ವಯ, ಚರಮಶ್ಲೋಕ ರೂಪವಾದ ಶ್ರೀಮದ್ರಹಸ್ಯತ್ರಯವು ಅತ್ಯಂತ ಸಾರತಮವಾದ್ದರಿಂದ, ಇದು ಅತ್ಯಂತ ಆದರಣೀಯ. ಈ ಸಾರಾರ್ಥವನ್ನು ಶ್ರುತಿಪಥವಿಪರೀತಂ ಕ್ಷ್ವೇಳಕಲ್ಪಂ ಶ್ರುತೌಚ, ಪ್ರಕೃತಿ ಪುರುಷಭೋಗ ಪ್ರಾಪಕಾಂಶೋ ನಪಥ್ಯಃ । ಇತಿ ವಿಬುಧಗುಪ್ತಂ ಮೃತ್ಯುಭೀತಾ ವಿಚಿನ್ವಂ ತ್ಯುಪನಿಷದಮೃತಾಬ್ಧೇರುತ್ತಮಂ ಸಾರಮಾರ್ಯಾಃ ॥" —ಇತ್ಯಾದಿಯಿಂದ ಸಂಗ್ರಹಿಸಿದ್ದಾರೆ.

## ೩. ಪ್ರಧಾನ ಪ್ರತಿ ತಂತ್ರಾಧಿಕಾರ :

ಹೀಗೆ ತತ್ತ್ವ-ಹಿತ—ಪುರುಷಾರ್ಥಗಳನ್ನು ವಿಶದಪಡಿಸುವುದರಿಂದ ಶ್ರೀ ರಹಸ್ಯತ್ರಯವು ಅತ್ಯಂತ ಸಾರತಮವೆನ್ನಲಾಯಿತು. ಪ್ರತಿತಂತ್ರಗಳಾದ ಇವುಗಳ ಸ್ವರೂಪವನ್ನು ಮುಂದೆ ೨೯ ಅಧಿಕಾರಗಳಿಂದ ಕ್ರಮವಾಗಿ ಪ್ರದರ್ಶಿಸುವವರಾಗಿ, ಈ ಪ್ರತಿತಂತ್ರಗಳಲ್ಲಿಯೂ ಪ್ರಧಾನವಾದ ಶರೀರ—ಶರೀರಿ ಭಾವ ಸಂಬಂಧವನ್ನು ಈ ಅಧಿಕಾರದಲ್ಲಿ ಪ್ರತಿಪಾದಿಸಿದ್ದಾರೆ.

"ಸ್ವೋಜ್ಜೀವನೇಚ್ಛಾಯದಿತೇ ಸ್ವಸತ್ತಾಯಾಂ ಸ್ಪೃಹಾಯದಿ । ಆತ್ಮದಾಸ್ಯಂ ಹರೇಃ ಸ್ವಾಮ್ಯಂ ಸ್ವಭಾವಂ ಚ ಸದಾಸ್ಮರ ॥"— ಅಸ್ತಿಬ್ರಹ್ಮೇತಿ ಚೇದ್ವೇದ ಸನ್ತಮೇನಂ ತತೋ ವಿದುರಿತಿ ॥"—ಎಂದು ಹೇಳಿರುವಂತೆ ಚೇತನನಿಗೆ 'ಸತ್'—ಎನಿಸಿಕೊಳ್ಳಲು ಚೇತನಾಚೇತನಾತ್ಮಕ ಪ್ರಪಂಚಕ್ಕೂ ಇದಕ್ಕೆ ಈಶ್ವರನಾದ ಭಗವಂತನಿಗೂ ಇರುವ ಶರೀರಾತ್ಮ ಭಾವ ಸಂಬಂಧದ ಅರಿವು ಅತ್ಯಾವಶ್ಯಕವಷ್ಟೆ!

ಪ್ರತಿತಂತ್ರವೆಂಬುದು---ಇತರ ಸಿದ್ಧಾಂತಿಗಳು ಯಾರೂ ಅಂಗೀಕರಿಸದೆ ನಮ್ಮ ಸಿದ್ಧಾಂತಕ್ಕೇ ಅಸಾಧಾರಣವಾದ ಅರ್ಥ. ಈ ಅರ್ಥಗಳು ಯಾವುವೆಂದರೆ, ಚೇತನಾಚೇತನಗಳಿಗೂ ಈಶ್ವರನಿಗೂ ಇರುವ ಶರೀರಾತ್ಮಭಾವ ಸಂಬಂಧವೇ ಮೊದಲಾದುವು.

ನಿಯಮೇನ ಧಾರ್ಯವೂ ನಿಯಾಮ್ಯವೂ ಶೇಷಭೂತವೂ ಆಗಿರುವುದು ಶರೀರದ ಲಕ್ಷಣ. ಶರೀರಕ್ಕೆ ನಿಯಮೇನ ಧಾರಕನೂ, ನಿಯಂತೃವೂ ಶೇಷಿಯೂ ಆಗಿರುವುದು ಶರೀರಿಯ ಲಕ್ಷಣ. ಚೇತನಾಚೇತನಾತ್ಮಕ ಪ್ರಪಂಚವು ಈಶ್ವರನಿಂದ ನಿಯಮೇನ ಧಾರ್ಯವೂ, ನಿಯಾಮ್ಯವೂ, ಅವನಿಗೇ ಶೇಷಭೂತವೂ ಆದುದರಿಂದ ಇದು ಅವನಿಗೆ ಶರೀರ. ಇದಕ್ಕೆ ನಿಯಮೇನ ಧಾರಕನೂ, ನಿಯಂತೃವೂ, ಶೇಷಿಯೂ ಆದುದರಿಂದ ಇದಕ್ಕೆ ಅವನು ಶರೀರಿ. ಇದರಿಂದ ಈ ಪ್ರಪಂಚದ ಸತ್ತೆ, ಸ್ಥಿತಿ, ಪ್ರವೃತ್ತಿಗಳೆಲ್ಲವೂ ಶರೀರಿಯಾದ ಆ ಈಶ್ವರನಿಗೇ ಅಧೀನವೆಂದಹಾಗಾಯಿತು.

ಈಶ್ವರನು ತನ್ನ ಸ್ವರೂಪ ನಿರೂಪಕ ಮತ್ತು ನಿರೂಪಿತ ಸ್ವರೂಪ ಧರ್ಮಗಳನ್ನು ಹೇಗೋ ಹಾಗೆ ತನ್ನನ್ನುಳಿದು ಮತ್ತೆಲ್ಲಾ ದ್ರವ್ಯಗಳನ್ನೂ ಸಾಕ್ಷಾತ್ತಾಗಿ ಸ್ವರೂಪದಿಂದಲೇ ಧರಿಸಿದ್ದಾನೆ. ಆಯಾ ದ್ರವ್ಯಗಳಲ್ಲಿಯ ಗುಣಗಳನ್ನಾದರೋ - ಆಯಾ ದ್ರವ್ಯಗಳ ದ್ವಾರಾ ಧರಿಸಿದ್ದಾನೆ. ಆಯಾ ಜೀವರುಗಳು ಧರಿಸಿರುವ ಶರೀರಗಳನ್ನು ಆಯಾ ಜೀವದ ದ್ವಾರಾ ಧರಿಸಿದ್ದಾನೆ– ಸಾಕ್ಷಾತ್ತಾಗಿಯೂ ಧರಿಸಿದ್ದಾನೆಯೆಂದೂ ಕೆಲವರ ಮತ. ಹೀಗೆ ಈ ಎಲ್ಲ ವಸ್ತುಗಳೂ ಈಶ್ವರನ ಸ್ವರೂಪಕ್ಕೆ ಅಪೃಥಕ್ಸಿದ್ಧ ವಿಶೇಷಣಗಳಾದ್ದರಿಂದ ಇವೆಲ್ಲದರ ಸತ್ತಾ, ಸ್ಥಿತಿ, ಪ್ರವೃತ್ತಿಗಳೂ ಇವಕ್ಕೆ ಆಶ್ರಯವಾದ ಅವನ ಸತ್ತೆಗೇ ಅಧೀನ. ಈಶ್ವರನ ನಿಯಂತೃತ್ವವು ಅವನ ಸಂಕಲ್ಪದಿಂದ ಸರ್ವ ವಸ್ತುಗಳ ಸತ್ತಾ, ಸ್ಥಿತಿ, ಪ್ರವೃತ್ತಿಗಳಿಗೆ ಪ್ರಯೋಜಕವಾಗಿರುವುದು. ಇವುಗಳ ಸತ್ತೆ ಈಶ್ವರನ ಸಂಕಲ್ಪಾಧೀನವೆಂದರೆ, ಅನಿತ್ಯವಸ್ತುಗಳು ಅನಿತ್ಯೇಚ್ಛೆಯಿಂದ ಉತ್ಪನ್ನಗಳೆಂದೂ, ನಿತ್ಯವಸ್ತುಗಳು ನಿತ್ಯೇಚ್ಛಾಸಿದ್ಧಗಳೆಂದೂ ಅರ್ಥ. ಸತ್ತೆಯ ಅನುವೃತ್ತಿಯೇ ಸ್ಥಿತಿಯೆಂಬುದು. ಈ ಸ್ಥಿತಿಯೂ ಪ್ರವೃತ್ತಿಯೂ ಕೂಡ ಈಶ್ವರನ ಸಂಕಲ್ಪಕ್ಕೇ ಅಧೀನ. ಈಶ್ವರನ ಸಂಕಲ್ಪವು ಎಲ್ಲಾ ವಸ್ತುಗಳನ್ನೂ ಅವನ ಸ್ವರೂಪಕ್ಕೆ ಆಶ್ರಿತಗಳನ್ನಾಗಿ ಮಾಡುತ್ತದೆ. ಆದ್ದರಿಂದ ಎಲ್ಲದರ

ಸತ್ತಾ - ಸ್ಥಿತಿ - ಪ್ರವೃತ್ತಿಗಳೂ ಈಶ್ವರನ ಸಂಕಲ್ಪಾಧೀನವೂ ಸ್ವರೂಪಾಶ್ರಿತಗಳೂ ಆಗಿವೆ. ಲೋಕದಲ್ಲಿಯೂ ಕೂಡ ಶರೀರವು ಶರೀರಿಗೆ ಸ್ವರೂಪಾಶ್ರಿತವೂ ಸಂಕಲ್ಪಾಧೀನವೂ ಆಗಿರುವುದಷ್ಟೆ.! ತನ್ನೊಳಗೆ ಜೀವನಿರುವವರೆಗೂ ಇದ್ದು ಅವನು ಬಿಟ್ಟು ಹೋದ ಕೂಡಲೆ ಅದೂ ನಾಶವಾಗುವುದರಿಂದ ಶರೀರವು ಸ್ವರೂಪಾಶ್ರಿತ - ನಿದ್ರಾದ್ಯವಸ್ಥೆಗಳಲ್ಲಿ ಇದು ಸುಸ್ಪಷ್ಟ. ಆದ್ದರಿಂದ ಇದು ಸ್ವರೂಪಾಶ್ರಿತ. ಜಾಗ್ರದ್ದಶೆಯಲ್ಲಿ ಕೆಳಗೆ ಬೀಳದ ಹಾಗೆ ನೋಡಿಕೊಳ್ಳುವುದರಿಂದ ಶರೀರವು ಶರೀರಿಯ ಸಂಕಲ್ಪಾಧೀನವೆಂಬುದೂ ಸ್ಪಷ್ಟವಾಗಿದೆ. ಇಲ್ಲಿ ಸ್ವರೂಪಾಶ್ರಿತವೆಂದರೆ ಸ್ವರೂಪದ ಆಧಾರದಿಂದಲೇ ಶರೀರವಿರುವುದೆಂದೂ ಸಂಕಲ್ಪಾಧೀನವೆಂದರೆ ಶರೀರವು ಶರೀರಿಗೇ ನಿಯಾಮ್ಯವೆಂದೂ ಭಾವ. ಪರಮಾತ್ಮನ ಪ್ರಯೋಜನಕ್ಕಾಗಿಯೇ ಚೇತನಾಚೇತನಗಳೆಲ್ಲವೂ ಇರುವುದರಿಂದ ಇವು ಸರ್ವೇಶ್ವರನಿಗೇ ಶೇಷಭೂತಗಳೆನಿಸಿವೆ. ಇವುಗಳಿಂದಾಗುವ ಅತಿಶಯಕ್ಕೆ ಭಾಗಿಯಾಗಿರುವುದರಿಂದ ಸರ್ವೇಶ್ವರನು ಇವುಗಳಿಗೆ ಶೇಷಿಯೆನಿಸಿದ್ದಾನೆ.-

ಹೀಗೆ ಚೇತನನು ಅನನ್ಯಾಧಾರ. ಅನನ್ಯಪ್ರಯೋಜನ ಮತ್ತು ಅನನ್ಯ ಶರಣನೆಂಬುದು ಸಿದ್ಧ. ಶೇಷತ್ವ - ಶೇಷಿತ್ವಗಳು ಚೇತನಾಚೇತನಗಳೆರಡಕ್ಕೂ ಸಾಧಾರಣವಾದ ಧರ್ಮಗಳು. ಶೇಷತ್ವವೇ ತನಗೆ ಸ್ವರೂಪವೆಂಬ ಅರಿವಿಗೆ ಅರ್ಹತೆಯಿರುವುದು ಚೇತನನಿಗೇ ಹೊರತು ಅಚೇತನಕ್ಕಲ್ಲ. ಆದುದರಿಂದ ಇವುಗಳಲ್ಲಿಯ ವಿಶೇಷವಾದ ದಾಸತ್ವ - ಸ್ವಾಮಿತ್ವಗಳು ಚೇತನೈಕಾಂತಗಳು.

ತನಗೆ ಪರಮ ಪ್ರಯೋಜನವೂ ಸ್ವಪ್ರತಿಸಂಧಾನಕ್ಕೆ ಅರ್ಹವೂ ಆದ ಪರಗತಾತಿ ಶಯಾಧಾಯಕತ್ವವು ದಾಸತ್ವ. ಹಾಗೆಯೇ, ಶೇಷತ್ವಕ್ಕೆ ಅಭಿಮತವಾದ ಕೈಂಕರ್ಯದ ಪ್ರಯೋಜನ ಭೂತವಾದ ಅತಿಶಯಕ್ಕೆ ಭಾಗಿಯಾಗಿರುವುದು ಶೇಷಿತ್ವ. ಶೇಷಿತ್ವಕ್ಕೆ ಅಭಿಮತವೂ ಶೇಷನಿಗೆ ಪರಮ ಪ್ರಯೋಜನ ಭೂತವೂ ಆದ ಸ್ವಪುರುಷಾರ್ಥಾತಿಶಯಕ್ಕೆ ಭಾಗಿಯಾಗಿರುವುದು ಸ್ವಾಮಿತ್ವ ಪರಮೇಶ್ವರನು ನಿರುಪಾಧಿಕ ಶೇಷಿಯಾದ್ದರಿಂದ ಈ ಚೇತನನ ರಕ್ಷಣ ವಿಷಯದಲ್ಲಿ ಪ್ರಾಪ್ತನು ; ನಿರುಪಾಧಿಕನಿಯಂತೃವಾದ್ದರಿಂದ ಶಕ್ತನು. ಚೇತನನಾದರೋ - ನಿರುಪಾಧಿಕ ಶೇಷನಾದ್ದರಿಂದ ಸ್ವರಕ್ಷಣೆಯಲ್ಲಿ ಅಪ್ರಾಪ್ತ : ನಿರುಪಾಧಿಕ ನಿಯಾಮ್ಯನಾದ್ದರಿಂದ ಸ್ವತಃ ಅಸಮರ್ಥ, ಈಶ್ವರನು ಕರ್ಮವಶ್ಯರಾದ ಚೇತನರನ್ನು ಉಪಾಯ ವಿಶೇಷವೊಂದರಲ್ಲಿ ತೊಡಗಿಸಿಯೇ ರಕ್ಷಿಸುತ್ತಾನೆಂಬುದು ಅವನ ಸ್ವಂತ

ಸಂಕಲ್ಪ ನಿಯತವಾದ್ದರಿಂದ ಸರ್ವಮುಕ್ತಿ ಪ್ರಸಂಗ ಬಾರದು. ಈ ಮತದಲ್ಲಿ ಪ್ರಪಂಚಕ್ಕೂ ಬ್ರಹ್ಮಕ್ಕೂ ಸತ್ಯತ್ವವನ್ನು ಅಂಗೀಕರಿಸಿ ಇವೆರಡಕ್ಕೂ ಶರೀರಾತ್ಮ ಭಾವ ಸಂಬಂಧವನ್ನೂ ಒಪ್ಪಿಕೊಂಡಿರುವುದರಿಂದ ಲೋಕದಲ್ಲಿ ಶರೀರಕ್ಕೂ ಜೀವಾತ್ಮನಿಗೂ ಅತ್ಯಂತ ಭೇದವಿದ್ದಾಗ್ಯೂ, "ಚೈತ್ರಏಕಃ"—ಇತ್ಯಾದಿ ಏಕತ್ವ ವ್ಯವಹಾರವೂ ಇರುವಂತೆಯೇ ಚೇತನಾಚೇತನ ಶರೀರಕ ಬ್ರಹ್ಮಕ್ಕೂ ಏಕತ್ವ ವ್ಯಪದೇಶವೂ ಪರಸ್ಪರ ಸ್ವರೂಪ ಭೇದವೂ ಉಪಪನ್ನವಾಗುತ್ತದೆ.

"ಅಶೇಷಚಿದಚಿತ್ಪ್ರಕಾರಂ ಬ್ರಹ್ಮ ಏಕಮೇವ ತತ್ತ್ವಂ. ಇದಮೇವಚೇತ್ಥಂ ಭೂತಂ ಸಾಮಾನ್ಯತಃ ಪ್ರಮಾವಿಷಯತಯಾ, ವಿಶೇಷತಃ ಪ್ರಕರ್ಷೇಣ ಮೇಯು ತಯಾ ಚ ಪ್ರಮೇಯ ಮಿತ್ಯುಚ್ಯತೇ. ತತ್ರ ಪ್ರಕಾರಿಣಃ ಪ್ರಕಾರಾಣಾಂ ಚ ಮಿಥೋಽತ್ಯನ್ತ ಭೇದೇಽಪಿ ವಿಶಿಷ್ಟೈಕ್ಯಾದಿವಿವಕ್ಷಯಾ ಐಕ್ಯವ್ಯಪದೇಶಃ, ತದಿತರ ನಿಷೇಧಶ್ಚ."—ಎಂದು ಶ್ರೀಮದಾಚಾರ್ಯರು ಶ್ರೀ ನ್ಯಾಯಸಿದ್ಧಾಂಜನದಲ್ಲಿ ಅಪ್ಪಣೆ ಕೊಡಿಸಿದ್ದಾರೆ. ಇದರಿಂದ ಶ್ರೀ ವಿಶಿಷ್ಟಾದ್ವೈತವೆಂಬುದರ ಅರ್ಥವೂ ವಿವೃತ. ಅಶೇಷ ಚೇತನಾಚೇತನ ವಿಶಿಷ್ಟವಾದ ಬ್ರಹ್ಮವೊಂದೇ ಸತ್ಯ—ಎಂಬುದೇ ಇದರಲ್ಲಿಯ ತತ್ತ್ವ. ಈ ಮತದಲ್ಲಿ ಮತಾಂತರವಾದಿಗಳು ಅಂಗೀಕರಿಸದಿರುವ ಶ್ರೀನಿತ್ಯಸೂರಿಸದ್ಭಾವವೇ ಮುಂತಾದ ಅನೇಕ ಅರ್ಥಗಳಿದ್ದಾಗ್ಯೂ, ಈ ಶರೀರ-ಶರೀರಿಭಾವ ಸಂಬಂಧವೇ ಪ್ರಧಾನ ಪ್ರತಿಪಾದ್ಯವಾದುದರಿಂದ, "ಪ್ರಧಾನೇನ ವ್ಯಪದೇಶಾ ಭವನ್ತಿ",—ಎಂಬ ನ್ಯಾಯದಿಂದ, ಪ್ರಧಾನಪ್ರತಿತಂತ್ರವೆಂದು ಇದು ವ್ಯವಹೃತವಾಗಿದೆ. ಸರ್ವಶ್ರುತ್ಯರ್ಥತತ್ತ್ವವ ಬೋಧಕತ್ವ ಮತ್ತು ಸರ್ವವಾದಿ ವಿಜಯಾವಹತ್ವವೆಂಬವು ಈ ಶರೀರ-ಶರೀರಿಭಾವ ಸಂಬಂಧಕ್ಕಿರುವ ಪ್ರಧಾನವಾದ ಅರ್ಥಗಳು. ಈ ಅರ್ಥಗಳು :

(1) "ಆಧೇಯತ್ವ ಪ್ರಭೃತಿನಿಯಮೈರಾದಿಕರ್ತುಶ್ಶರೀರಂ,
ಸತ್ತಾಸ್ಥೇಮ ಪ್ರಯತನಫಲೇಷ್ವೇತದಾಯತ್ತಮೇತತ್ ।
ವಿಶ್ವಂ ಪಶ್ಯನ್ನಿತಿ ಭಗವತಿ ವ್ಯಾಪಕಾದರ್ಶದೃಷ್ಟೇ
ಗಂಭೀರಾಣಾಮಕೃತಕಗಿರಾಂಗಾಹತೇ ಚಿತ್ತವೃತ್ತಿಂ ॥"

(2) ಯದ್ಯೋತಂ ಯತಿಸಾರ್ವಭೌಮಕಥಿತಂ ವಿದ್ಯಾದವಿದ್ಯಾತಮಃ
ಪ್ರತ್ಯೂಷಂ ಪ್ರತಿತಂತ್ರಮಂತಿಮಯುಗೇ ಕಶ್ಚಿದ್ವಿಪಶ್ಚಿತ್ತಮಃ ।

ತತ್ರೈಕತ್ರ ಝುಡಿತ್ಯುಪೈತಿವಿಲಯಂ ತತ್ತನ್ಮತಸ್ಥಾಪನಾ ಹೇವಾಕ
ಪ್ರಥಮಾನಹೈತುಕಕಥಾ ಕಲ್ಲೋಲ ಕೋಲಾಹಲಃ ॥"

—ಎಂದು ಈ ಅಧಿಕಾರದಲ್ಲಿ ವರ್ಣಿತವಾಗಿವೆ. ಈ ಸರ್ವಶ್ರುತ್ಯರ್ಥತತ್ತ್ವಾವಬೋಧಕತ್ವವು ಮತ್ತೆ "ಮಿಥೋಭೇದಂ ತತ್ತ್ವೇಷ್ವಭಿಲಪತಿ ಭೇದಶ್ರುತಿರಥೋ, ವಿಶಿಷ್ಟೈಕ್ಯಾದೈಕ್ಯಶ್ರುತಿರಪಿಚ ಸಾರ್ಥಾಭಗವತೀ । ಇಮಾವರ್ಥೌಗೋಪ್ತುಂ ನಿಖಿಲಜಗದಂತರ್ಯಮಯಿತಾ ನಿರೀಶೋ ಲಕ್ಷ್ಮೀಶಃ ಶ್ರುತಿಭಿರಪರಾಭಿಃ ಪ್ರಣಿಪದೇ ॥"— ಎಂಬಲ್ಲಿಯೂ ವರ್ಣಿತವಾಗಿದೆ.

ಐಕ್ಯವ್ಯಪದೇಶಕ್ಕೆ ಯೋಗ್ಯವಾದ ಈ ಶರೀರ-ಶರೀರಿಭಾವವೆಂಬ ಸಂಬಂಧ ವಿಶೇಷವನ್ನು ಅಂಗೀಕರಿಸದುದರಿಂದ, "ನಿತ್ಯೋನಿತ್ಯಾನಾಂ ಚೇತ ನಶ್ಚೇತನಾನಾಂ ಏಕೋ ಬಹೂನಾಂಯೋ ವಿದಧಾತಿಕಾಮಾನ್,"—"ಜ್ಞಾಜ್ಞೌದ್ವಾವಜಾವೀಶನೀಶೌ," —ಇತ್ಯಾದಿ ಭೇದ ಶ್ರುತಿಗಳು,-"ಸರ್ವಂ ಖಲ್ವಿದಂ ಬ್ರಹ್ಮ" —"ತತ್ತ್ವಮಸಿ" —ಇತ್ಯಾದಿ ಅಭೇದ ಶ್ರುತಿಗಳು, "ಯ ಆತ್ಮನಿ ತಿಷ್ಠನ್ ಆತ್ಮನೋಽನ್ತರಃ ಯಸ್ಯಾತ್ಮಾಶರೀರಂ......" —ಇತ್ಯಾದಿ ಘಟಕ ಶ್ರುತಿಗಳು- ಎಂಬ ಈ ಮೂರು ಬಗೆಯ ಶ್ರುತಿಗಳಲ್ಲಿ, ಭೇದಶ್ರುತಿಗಳನ್ನು ಮಾತ್ರ ಅಂಗೀಕರಿಸಿ, ಅಭೇದ ಶ್ರುತಿಗಳು ಔಪಚಾರಿಕ ಅಥವಾ ಬಾಧಿತಾರ್ಥಗಳೆಂದು ದ್ವೈತಿಗಳೂ. ಭೇದಶ್ರುತಿಗಳು ಔಪಚಾರಿಕ ಅಥವಾ ಬಾಧಿತಾರ್ಥಗಳೆಂದು ಅಭೇದ ಶ್ರುತಿಗಳನ್ನು ಮಾತ್ರ ಅಂಗೀಕರಿಸಿದ ಅದ್ವೈತಿಗಳೂ, ಘಟಕಶ್ರುತಿಗಳು ಔಪಚಾರಿಕ ಅಥವಾ ಬಾಧಿತಾರ್ಥಗಳೆಂದು ಇವರೀರ್ವರೂ, ಹೇಳಿ ಮಿಕ್ಕ ಶ್ರುತಿಗಳನ್ನು ತಳ್ಳಿಹಾಕಿದ್ದಾರೆ. ಶ್ರೀ ವಿಶಿಷ್ಟಾದ್ವೈತ ದರ್ಶನಯಲ್ಲಿಯಾದರೋ— ಬ್ರಹ್ಮಕ್ಕೇ ಎಲ್ಲವೂ ಶರೀರವಾದ್ದರಿಂದ, ಲೋಕದೃಷ್ಟ ಶರೀರ—ಶರೀರಿ ನ್ಯಾಯವಂತೆ, ಶರೀರ—ಶರೀರಿಗಳಿಗೆ ಪರಸ್ಪರ ಭೇದವು ಅನುಭವಸಿದ್ಧವಾದುದರಿಂದ ಆ ಭೇದವನ್ನು ಬೋಧಿಸುವುದರಿಂದ ಭೇದಶ್ರುತಿಗಳೂ, "ಚೈತ್ರಏಕಃ,"—ಎಂಬಂತೆ ಶರೀರಿ ಒಬ್ಬನೇ ಆದುದರಿಂದ ಆ ಅಭೇದವನ್ನು ಬೋಧಿಸುವುದರಿಂದ ಅಭೇದ ಶ್ರುತಿಗಳೂ, ಶರೀರ—ಶರೀರಿಗಳಿಗೆ ಪರಸ್ಪರವಿರುವ ಇಂತಹ ಸಂಬಂಧವನ್ನು ಬೋಧಿಸುವುದರಿಂದ ಘಟಕಶ್ರುತಿಗಳೂ,—ಹೀಗೆ ಈ ಮೂರೂ ಬಗೆಯ ಶ್ರುತಿಗಳೂ ಮುಖ್ಯ ಮತ್ತು ಅಬಾಧಿತಗಳಾಗಿ ಅಂಗೀಕರಿಸಲ್ಪಟ್ಟಿವೆ.

ಜಗತ್ತಿಗೂ ಬ್ರಹ್ಮಕ್ಕೂ ಈ ರೀತಿಯ ಶರೀರಾತ್ಮ ಭಾವ್ಯೋಪದೇಶಕ್ಕೆ

ಇನ್ನೂ ಅನೇಕ ತಾತ್ಪರ್ಯಗಳಿರುವುವು. (i) ಸಕಲ ಪ್ರಪಂಚವೂ ಪರಮಾತ್ಮನಿಗೆ ಶರೀರವಾದರೆ, ಏಕ ದೇಹಾವಯವ ನ್ಯಾಯದಿಂದ ಸಕಲ ಪ್ರಾಣಿಗಳೂ ಪರಸ್ಪರ ಆನುಕೂಲ್ಯದಲ್ಲಿರಬೇಕು. ಕೈಕಾಲು ಮುಂತಾದ ಏಕ ದೇಹಾವಯಗಳಲ್ಲಿ ಪರಸ್ಪರ ವಿರೋಧ ಪ್ರದ್ವೇಷ ಮುಂತಾದವು ಇವೆಯೆ ? (ii) ಅದರಂತೆಯೇ ನಿರತಿಶಯ ಐಕಮತ್ಯದಿಂದ ಪರಮಾತ್ಮನ ಮುಖೋಲ್ಲಾಸದಲ್ಲಿಯೇ ಎಲ್ಲರೂ ವರ್ತಿಸಬೇಕು. (iii) ಹೀಗೆ ಪ್ರಪಂಚವೇ ಪರಮಾತ್ಮನಿಗೆ ರೂಪವಾದರೆ ಆ ರೂಪದ ಮೂಲಕವೇ ಅವನ ಸೇವೆಯನ್ನು ಮಾಡಬೇಕು. ಲೋಕದಲ್ಲಿಯೂ ಪರಸ್ಪರೋಪಚಾರವನ್ನು ದೇಹದ ಮೂಲಕವಾಗಿ ಆತ್ಮನನ್ನು ಉದ್ದೇಶಿಸಿ ಮಾಡುತ್ತಾರೆ. ಹೂವಿನ ಮಾಲೆಯನ್ನು ರಾಜನ ಕಂಠದಲ್ಲಿ ಸಮರ್ಪಿಸುತ್ತಾರೆ. ಅದಕ್ಕೂ ಆವರಣವಾಗಿರುವ ಕವಚದ ಮೇಲೆ ಸಮರ್ಪಿಸುತ್ತಾರೆ. ಹಾಗೆಯೇ ಪರಮಾತ್ಮನ ಸೇವೆಯನ್ನು ಪ್ರತ್ಯಕ್ಷ ರೂಪವಾದ ಲೋಕದ ಮೂಲಕ ಮಾಡಬೇಕೆಂದು ಉಪದೇಶಿಸುವುದಕ್ಕಾಗಿಯೇ ಈ ಶರೀರಾತ್ಮೋಪದೇಶ. ಈ ಅರ್ಥವನ್ನು, "ಚರಾಚರಾಣಿ ಭೂತಾನಿ ಸರ್ವಾಣಿ ಭಗವದ್ವಪುಃ। ಅತಸ್ತದಾನುಕೂಲ್ಯಂಮೇ ಕರ್ತವ್ಯಮಿತಿ ನಿಶ್ಚಯಃ ॥"—ಎಂದು ಅಹಿರ್ಬುಧ್ನ್ಯ ಸಂಹಿತೆಯಲ್ಲಿಯೂ ಹೇಳಿದೆ.

(vi) ಸಕಲಪ್ರಾಣಿಗಳಿಗೂ, ಆಯಾ ದೇಹದಲ್ಲಿ ನಿರತಿಶಯ ಪ್ರೀತಿ ಆ ದೇಹವು ಎಂತಹ ದುರವಸ್ಥೆಯಲ್ಲಿದ್ದಾಗ್ಯೂ, ಅದನ್ನು ಬಿಡಲಿಷ್ಟಪಡುವುದಿಲ್ಲ. ಆದ್ದರಿಂದ ದೇಹಕ್ಕಿಂತ ಪ್ರಿಯವಾದುದು ಪ್ರಪಂಚದಲ್ಲಿ ಯಾವುದೂ ಇಲ್ಲವೆಂಬುದು ಸರ್ವಾನುಭವಸಿದ್ಧ. ಹೀಗಾದರೆ, ಪ್ರಪಂಚ ಭಗವಂತನಿಗೆ ದೇಹವೆಂದು ಹೇಳುವ ಶಾಸ್ತ್ರವು ಪ್ರಪಂಚದಲ್ಲಿ ಭಗವಂತನಿಗೆ ಎಷ್ಟೊಂದು ಪ್ರೀತಿಯಿದೆಯೆಂಬುದನ್ನು ಸೂಚಿಸುತ್ತದೆ ! ಭಗವಂತನಿಗೆ ಇಷ್ಟು ನಿರತಿಶಯ ಪ್ರಿಯವಾದ ಪ್ರಪಂಚದ ವಿಷಯದಲ್ಲಿ ಅವನ ಭಕ್ತರು ಹೇಗೆ ನಡೆದುಕೊಳ್ಳಬೇಕೆಂಬುದನ್ನು ವಿಸ್ತರಿಸಬೇಕಾಗಿಲ್ಲ. ಹೀಗೆ ಸರ್ವ ಶ್ರುತಿ ಸಾಮಂಜಸ್ಯವುಳ್ಳದ್ದಾಗಿ, ಸರ್ವಾನುಕೂಲವೂ ಸರ್ವಾದರಣೀಯವೂ ಸರ್ವಜನೋಪಜೀವ್ಯವೂ ಆದ ಪ್ರಧಾನ ಪ್ರತಿ ತಂತ್ರವಿದು ! ರಾಗಾದಿ ದೋಷವರ್ಜನ ಇವೆಲ್ಲದರ ಮೂಲೋದ್ದೇಶವೆಂದೂ ವ್ಯಕ್ತವಾಗುತ್ತದೆ. "ಶಮಾರ್ಥಂ ಸರ್ವಶಾಸ್ತ್ರಾಣಿ ವಿಹಿತಾನಿ ಮನೀಷಿಭಿಃ । ತಸ್ಮಾತ್ ಸ ಸರ್ವಶಾಸ್ತ್ರಜ್ಞೋ ಯಸ್ಯ

ಶಾಂತಂ ಮನಸ್ಸದಾ ॥"—ಎಂಬ ಮಹಾಭಾರತ ಶ್ರೀ ಸೂಕ್ತಿಯೂ ಶಾಂತಿಯನ್ನೇ ಬೋಧಿಸುತ್ತದೆ.

## ೪. ಅರ್ಥಪಂಚಕಾಧಿಕಾರ

ಮೇಲ್ಕಂಡಂತೆ ನಾರಾಯಣಾದಿ ಶಬ್ದಗಳಲ್ಲಿ ವಿವಕ್ಷಿತವಾದ ಈಶ್ವರನಿಗೂ ಈಶಿತವ್ಯವಾದ ಜಗತ್ತಿಗೂ ಇರುವ ಶರೀರಾತ್ಮ ಭಾವರೂಪ ಸಂಬಂಧದಿಂದ ತನಗೆ ಸಂಭವಿಸುವ ಆಧೇಯತ್ವ, ವಿಧೇಯತ್ವ, ಅಪೃಥಕ್ಸಿದ್ಧತ್ವ, ಶೇಷತ್ವ, ಶರೀರತ್ವ, ವ್ಯಾಪ್ಯತ್ವ, ರಕ್ಷ್ಯತ್ವ, ಕಿಂಕರತ್ವ, ಭೋಗ್ಯತ್ವ, ಭೋಕ್ತೃತ್ವ ಲಕ್ಷಣವಾದ ದಶವಿಧ ಸಂಬಂಧ ಜ್ಞಾನದಿಂದ ಸತ್ತೆಯನ್ನು ಪಡೆದ ಮುಮುಕ್ಷುವಿಗೆ ಅವಶ್ಯ ತಿಳಿಯಬೇಕಾದ ಅರ್ಥಗಳು ಐದು. ಇವಕ್ಕೆ ಅರ್ಥ ಪಂಚಕವೆಂದು ಹೆಸರು. ಇವು "ಪ್ರಾಪ್ಯಸ್ಯ ಬ್ರಹ್ಮಣೋರೂಪಂ ಪ್ರಾಪ್ತುಶ್ಚ ಪ್ರತ್ಯಗಾತ್ಮನಃ । ಪ್ರಾಪ್ತ್ಯುಪಾಯಂ ಫಲಂಪ್ರಾಪ್ತೇಃ ತಥಾ ಪ್ರಾಪ್ತಿವಿರೋಧಿಚ ॥"—ಎಂಬಂತೆ ಪ್ರಾಪ್ಯ, ಪ್ರಾಪ್ತೃ, ಪ್ರಾಪ್ತ್ಯುಪಾಯ, ಪ್ರಾಪ್ತಿ, ಮತ್ತು ಪ್ರಾಪ್ತಿ ವಿರೋಧಿಗಳೆಂಬವು. ಇವುಗಳಲ್ಲಿ ;

(1) **ಪ್ರಾಪ್ಯನು**—ಅಖಿಲಜಗತ್ತುಗಳಿಗೂ ಅದ್ವಿತೀಯ ಕಾರಣನೂ, ಅಪರಿಮಿತ ಜ್ಞಾನಾನಂದೈಕಸ್ವರೂಪನೂ, ಅಖಿಲಹೇಯಪ್ರತ್ಯನೀಕನೂ, ಪ್ರಾಪ್ಯತ್ವ - ಪ್ರಾಪಕತ್ವಗಳಿಗೆ ಉಪಯುಕ್ತವಾದ ಜ್ಞಾನ ಶಕ್ತ್ಯಾದ್ಯನಂತ ಕಲ್ಯಾಣ ಗುಣಗಣ ಪರಿಪೂರ್ಣನೂ, ಶರೀರಭೂತವಾದ (ನಿತ್ಯ ವಿಭೂತಿ ಮತ್ತು ಲೀಲಾವಿಭೂತಿಗಳೆಂಬ) ಶುದ್ಧಾ ಶುದ್ಧ ವಿಭೂತಿ ದ್ವಯದಿಂದಕೂಡಿದವನೂ, ಪರ-ವ್ಯೂಹ-ಹಾರ್ದ-ವಿಭವ-ಅರ್ಚೆಗಳೆಂಬ ಪಂಚಪ್ರಕಾರವಾದ ದಿವ್ಯಮಂಗಳ ವಿಗ್ರಹಯುಕ್ತನೂ, ಸರ್ವಾವಸ್ಥೆಗಳಲ್ಲಿಯೂ ಸಹಧರ್ಮಚಾರಿಣಿಯಾದ ಶ್ರೀದೇವಿಯೊಂದಿಗೆ ಕೂಡಿಯೇ ಇರುವವನೂ, ಸರ್ವಲೋಕಗಳಿಗೂ ಶರಣ್ಯನೂ, ಶರಣಾಗತವತ್ಸಲನೂ, ಸರ್ವಪ್ರಕಾರಗಳಿಂದಲೂ ನಿರತಿಶಯ ಭೋಗ್ಯನೂ, ಪರಬ್ರಹ್ಮವೆನಿಸಿದವನೂ, ಪುರುಷೋತ್ತಮನೂ ಆದ ನಾರಾಯಣನು.

(2) **ಪ್ರಾಪ್ತೃವು**—ದೇಹೇಂದ್ರಿಯಾದಿಗಳಿಗಿಂತ ವಿಲಕ್ಷಣನೂ, ಸ್ವಯಂ ಪ್ರಕಾಶನೂ, ತನಗೆ ತಾನಾಗಿಯೇ ತೋರುವವನೂ, ಬದ್ಧ-ಮುಕ್ತ-ಸಾಧಾರಣಗಳಾದ, ಭಗವತ್ಕೈಂಕರ್ಯ ಸ್ವರೂಪ ಮತ್ತು ಯೋಗ್ಯತೆಯ ಜ್ಞಾನವನ್ನೀಯುವ

ಜ್ಞಾನತ್ವ-ಆನಂದತ್ವ-ಅಮಲತ್ವ-ಅಣುತ್ವಾದಿಗಳಿಂದಲೂ. ಉಪಾಯಾನುಷ್ಠಾನ ಯೋಗ್ಯತೆಯ ಜ್ಞಾನವನ್ನೀಯುವ ಶೇಷತ್ವ - ಪಾರತಂತ್ರ್ಯಾದಿ ರೂಪ ಧರ್ಮಗಳಿಂದಲೂ ಕೂಡಿ ಪರಶೇಷತ್ವೈಕರಸನೂ, ಪರಾಧೀನ ಸ್ವರೂಪಸ್ಥಿತಿ ಪ್ರವೃತ್ತಿಕನೂ, ಪರಿಪೂರ್ಣ ಭಗವದನುಭವಕ್ಕೆ ಯೋಗ್ಯನೂ, ಸ್ವರೂಪಾನು ಗುಣ ಸ್ವಚ್ಛಂದಕೈಂಕರ್ಯಾಭಿಲಾಷಿಯೂ ಆದ ಜೀವಾತ್ಮ.

**(3) ಪ್ರಾಪ್ತ್ಯುಪಾಯ**—ಇದು ಸಂಸಾರಸಾಗರದಿಂದ ದಾಟಿಸಬಲ್ಲದ್ದೂ ಸ್ವಬುದ್ಧಿಯಿಂದ ಅಪೇಕ್ಷಣೀಯವೂ, ಶಾಸ್ತ್ರ ಪ್ರತಿಪಾದಿತವೂ ಆದ ಅರ್ಥ ವಿಶೇಷ. ಇದರಲ್ಲಿ ಸಿದ್ಧೋಪಾಯ ಸಾಧ್ಯೋಪಾಯಗಳೆಂದು ಎರಡು ವಿಧ. (ಅ) ಸಿದ್ಧೋಪಾಯ—ನಿತ್ಯಸಿದ್ಧವಾದ ಸ್ವರೂಪ ಗುಣಗಳುಳ್ಳವನೂ, ಸರ್ವಜ್ಞ ನಾದ್ದರಿಂದ ಪರರ ಹಿತವನ್ನು ಬಲ್ಲವನೂ, ಸರ್ವಶಕ್ತನಾದ್ದರಿಂದ ಸರ್ವ ಅನಿಷ್ಟ ಗಳನ್ನೂ ನಿವರ್ತಿಸಲು ಶಕ್ತನೂ, ಸ್ವಭಾವದಿಂದಲೇ ಸರ್ವಭೂತಗಳಿಗೂ ಸುಹೃತ್ತೂ ಆದ್ದರಿಂದ ಸರ್ವರ ಸರ್ವ ಅನಿಷ್ಟಗಳನ್ನು ನಿವಾರಿಸುವುದರಲ್ಲಿ ಅಭಿ ಮುಖನೂ ಮತ್ತು ಅವಸರ ಪ್ರತೀಕ್ಷನೂ, ವ್ಯಾಜವಿಶೇಷಕ್ಕೆ ವಶವಾಗತಕ್ಕ ವನೂ, ಸಂಕಲ್ಪ ವಿಶೇಷದಲ್ಲಿ ಸಹಕಾರಿ ನಿರಪೇಕ್ಷನೂ. ಸ್ವಾರ್ಥ ಪ್ರವೃತ್ತನೂ. ಮೋಕ್ಷ ಪ್ರದಾನಕ್ಕೆ ನೇರ ಕಾರಣವಾದ ಸಂಕಲ್ಪಕ್ಕೆ ಆಶ್ರಯನೂ ಆದ ಶ್ರಿಯಃಪತಿ. (ಆ) ಸಾಧ್ಯೋಪಾಯ—ಸಾಮಾನ್ಯತಃ ಮನುಷ್ಯನಿಗೆ ಅನುಷ್ಠೇ ಯವಾಗಿ ಶಾಸ್ತ್ರದಲ್ಲಿ ವಿಹಿತವಾದ ಪುರುಷಾರ್ಥ ಸಾಧನ. ಮೋಕ್ಷೋಪಾಯ— (ರೂಪ) ಸಾಧ್ಯೋಪಾಯವಾದರೋ - ಭಕ್ತಿ - ಪ್ರಪತ್ತಿಗಳೆಂದು ಎರಡುವಿಧ. ಇವುಗಳಲ್ಲಿ (೧) ಭಕ್ತಿ—ಯೆಂಬುದು ಭಕ್ತಿಯೋಗ. ಉಪಾಸನ ಅಥವಾ ವೇದನವೆಂದೂ ಇದಕ್ಕೆ ಸಂಜ್ಞೆ. ಇದು ಕರ್ಮಯೋಗ - ಜ್ಞಾನಯೋಗಗಳಿಂದ ಸಂಸ್ಕೃತವಾದ ಅಂತಃಕರಣದಿಂದ ಸಾಧ್ಯ - ಅಷ್ಟಾಂಗ ಯೋಗಯುಕ್ತ ವರ್ಣಾಶ್ರಮ ಧರ್ಮಗಳಿದಕ್ಕೆ ಅಂಗ. ಇದು ತೈಲಧಾರೆಯಂತೆ ಅವಿಚ್ಛಿನ್ನ ಸ್ಮೃತಿ ಸಂತತಿರೂಪ, ದಿನದಿನವೂ ನಡೆಸುವ ಅಭ್ಯಾಸದಿಂದ ಮೇಲೆ ಮೇಲೆ ಅತಿಶಯಹೊಂದಬೇಕಾದ್ದು ; ಯಾವಜ್ಜೀವವೂ ಅನುವರ್ತಿಸಬೇಕಾದುದು. ಪ್ರಾರಬ್ಧವನ್ನುಳಿದು ಮಿಕ್ಕೆಲ್ಲ ಪುಣ್ಯಪಾಪಗಳನ್ನೂ ನಿವರ್ತಿಸತಕ್ಕದ್ದು. ಪ್ರಯತ್ನಸಾಧ್ಯವಾದ ಅಂತಿಮಸ್ಮೃತಿಯುಳ್ಳದ್ದು. (೨) ಪ್ರಪತ್ತಿಯಾದರೋ ಮಹಾವಿಶ್ವಾಸಾದಿ ಸಂಸ್ಕೃತವಾದ ಅಂತಃಕರಣದಿಂದ ಸಾಧ್ಯವಾಗಿ ಷಡಂಗ

ಯೋಗವೆಂಬ ಸಂಜ್ಞೆಯುಳ್ಳದ್ದು. ಉಪಾಯಾಂತರ ರಹಿತರೆಲ್ಲರೂ ಇದಕ್ಕೆ ಅಧಿಕಾರಿಗಳು. ಆನುಕೂಲ್ಯ—ಸಂಕಲ್ಪಾದಿ ಐದು ಅಂಗಗಳು ಹೊರತು ಮತ್ತೇನೂ ಇದಕ್ಕೆ ಬೇಕಿಲ್ಲ. ಆತ್ಮನಿಕ್ಷೇಪವೆಂಬುದೇ ಇದರಲ್ಲಿಯ ಅಂಗಿ. ಇದು ಸುಕರಕೃತ್ಯ. ಆಶುಕೃತ್ಯ. ಸಕೃತ್ಕೃತ್ಯ. ಅನಂತರಕಾಲದಲ್ಲಿ ಯಾವ ಜೀವವೂ ಇದಕ್ಕಾಗಿ ಅನುಷ್ಠಿಸಬೇಕಾದ ಕರ್ತವ್ಯ ವಿಶೇಷ ಯಾವುದೂ ಇಲ್ಲ. ಪ್ರಾರಬ್ಧ ಕರ್ಮಗಳನ್ನೂ ನಿವರ್ತಿಸಬಲ್ಲದ್ದಿದು. ಪ್ರಯತ್ನ ಸಾಧ್ಯವಾದ ಅಂತಿಮ ಸ್ಮೃತಿಯೆಂಬುದೂ ಇದಕ್ಕೆ ಬೇಕಿಲ್ಲ.

(4) **ಪ್ರಾಪ್ತಿ**—ಇದು ಮೇಲೆ ಹೇಳಿದ ಸ್ವಾಧಿಕಾರಾನುಗುಣ ವಶೀಕರಣ ವಿಶೇಷದಿಂದ ಉತ್ತರ ಪೂರ್ವಾಘಗಳು ನಷ್ಟವಾಗಿ ಬ್ರಹ್ಮನಾಡಿಯ ಮೂಲಕ ಸ್ಥೂಲ ಶರೀರದಿಂದ ನಿರ್ಗಮಿಸಿ, ಆತಿವಾಹಿಕರಿಂದ ಅರ್ಚಿರಾದಿ ಮಾರ್ಗದಿಂದ ಒಯ್ಯಲ್ಪಟ್ಟು ಪ್ರಕೃತಿ ಮಂಡಲವನ್ನು ಅತಿಕ್ರಮಿಸಿ, ಸೂಕ್ಷ್ಮ ಶರೀರವನ್ನೂ ಒದರಿ, ಅಪ್ರಾಕೃತ ದೇಶ ವಿಶೇಷವನ್ನು ಸೇರಿ, ಸ್ವಸ್ವರೂಪ ಆವಿರ್ಭೂತವಾಗಿ ಅಪಹತಪಾಪ್ಮತ್ವಾದಿ ಗುಣಾಷ್ಟಕ ವಿಶಿಷ್ಟವಾದ ಪುರುಷನಿಗೆ ದೇಶಕಾಲಸ್ವರೂಪಗಳಮಿತಿಯಿಲ್ಲದ ಸರ್ವವಿಧ ಕೈಂಕರ್ಯ ಪರ್ಯಂತವಾದ ಪರಿಪೂರ್ಣ ಬ್ರಹ್ಮಾನುಭವ.

(5) **ಪ್ರಾಪ್ತಿ ವಿರೋಧಿ**—ಇದು ಬೀಜಾಂಕುರ ನ್ಯಾಯದಂತೆ ಅನಾದಿ ಕಾಲದಿಂದ ಪ್ರವೃತ್ತವಾದ ಅಕೃತ್ಯಕರಣ, ಕೃತ್ಯಾಕರಣಗಳ ಪ್ರವಾಹದಿಂದ ಉಂಟಾಗಿ, ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದವರಿಗೆ ಮೀರಲಾಗದ ಫಲವುಳ್ಳದ್ದೂ, ಶಾಸ್ತ್ರ ಮಾತ್ರದಿಂದಲೇ ತಿಳಿಯಲ್ಪಡತಕ್ಕದ್ದೂ. ಉಪೇಕ್ಷಿಸಲಾಗದ ವಿಪಾಕಸಮಯವುಳ್ಳದ್ದೂ. ಆಬ್ರಹ್ಮಸ್ತಂಬಪರ್ಯಂತ ವ್ಯಾಪಿಸಿರುವುದೂ ಅತಿ ಘೋರವಾದ ನರಕಾದ್ಯನರ್ಥ—ಪರಂಪರೆಗೆ ಕಾರಣವಾದದ್ದೂ. ಚಕ್ರದಂತೆ ಪರಿವರ್ತಿಸುತ್ತಿರುವುದೂ, ಆದ ಭಗವನ್ನಿಗ್ರಹ.

ಈ ಭಗವನ್ನಿಗ್ರಹವು ಜ್ಞಾನಕ್ಕೆ ಸಂಕೋಚವುಂಟುಮಾಡುವ ತ್ರಿಗುಣಾತ್ಮಕ ಪ್ರಕೃತಿ ಸಂಸರ್ಗ ವಿಶೇಷವನ್ನು ಉತ್ಪಾದಿಸಿ, ಪ್ರಕೃತಿ ಪರಿಣಾಮ ವಿಶೇಷಗಳಾದ ಶರೀರಾದಿಗಳಲ್ಲಿ ಸೇರಿಸಿ ಚೇತನರನ್ನು ಅದಕ್ಕೆ ಪರವಶರನ್ನಾಗಿಸುತ್ತದೆ. ಆ ಅವಸ್ಥೆಯಲ್ಲಿಯೂ ಕೂಡ. ಶಾಸ್ತ್ರಾಧಿಕಾರವಿಲ್ಲದ ತಿರ್ಯಗಾದಿ ದಶೆಯಲ್ಲಿ

ಬಹುಕಾಲ ಇರಿಸುತ್ತದೆ. ಶಾಸ್ತ್ರಯೋಗ್ಯವಾದ ಮನುಷ್ಯಾದಿ ಜನ್ಮಗಳಲ್ಲಿಯೂ ಬಾಹ್ಯ—ಕುದೃಷ್ಟಿ ದೃಷ್ಟಿಗಳಿಂದ ವ್ಯಾಕುಲಗೊಳಿಸುತ್ತದೆ.

ಇಂತಹ ಮತಗಳಲ್ಲಿ ಪ್ರವೇಶಿಸದವರನ್ನಾದರೋ—ಮೂಲ ಪ್ರಕೃತಿ ಪ್ರಭೃತಿ ಮೋಹಪಿಂಛಿಕೆಯಿಂದ ತತ್ತ್ವವನ್ನರಿಯದವರನ್ನಾಗಿಯೂ, ವಿಪರೀತ ಜ್ಞಾನ—ವಿಷಯಪ್ರಾವಣ್ಯ ವಿಶಿಷ್ಟರನ್ನಾಗಿ ಮಾಡುತ್ತದೆ. ಮೋಹ ಪಿಂಛಿಕೆಯೆಂಬುದು ಇಂದ್ರಜಾಲಿಕನು (ಕಣ್ಣುಕಟ್ಟು ಮಾಡುವವನು) ಉಪಯೋಗಿಸುವ ನವಿಲು ಗರಿಗಳ ಕಟ್ಟು. ಸ್ವಭಾವದಿಂದಿರುವ ವಸ್ತುವನ್ನು ಮಂತ್ರದಿಂದ ಬೇರೆ ರೀತಿಯಾಗಿ ಕಾಣುವಂತೆ ಮಾಡಲು ಇದು ಅವನಿಗೆ ಸಾಧನ. ಅದರಿಂದಲೇ ಸುಖಲವಕ್ಕಾಗಿ ಅಕೃತ್ಯಕರಣಾದಿರೂಪ ಆಜ್ಞೋಲ್ಲಂಘನವನ್ನು ಮಾಡಿಸಿ ಪುನಃ ಅಪರಾಧ ಪರಂಪರೆಯಲ್ಲಿ ಇಳಿಸಿ, ಅದರ ಫಲವಾಗಿ ಗರ್ಭ—ಜನ್ಮ ಜರಾಮರಣ-ನರಕಾದಿ ಚಕ್ರದಲ್ಲಿ ಸುತ್ತಿಸಿ ಕ್ಷುದ್ರ ಸುಖಲವಸಾಧನಗಳಾದ ರಾಜಸ—ತಾಮಸ ಶಾಸ್ತ್ರಗಳ ಮೂಲಕ ದೇವತಾಂತರ ಭಕ್ತರನ್ನಾಗಿಸಿ ಆ ದೇವತಾಂತರಗಳು ಕೊಡುವ ಕ್ಷುದ್ರ ಪುರುಷಾರ್ಥಗಳಿಂದ ಕೃತಾರ್ಥರಾದಂತೆ ಮೋಹಗೊಳಿಸುತ್ತದೆ.

ಉಪಾಸನದಲ್ಲಿ ಪ್ರವೃತ್ತರಾದವರನ್ನೂ ಕೂಡ ಕ್ಷುದ್ರದೇವತೋಪಾಸನಗಳಲ್ಲಿಯೋ, ನಾಮಾದ್ಯಚೇತನೋಪಾಸನಗಳಲ್ಲಿಯೋ ಇಳಿಸಿ, ಕ್ಷುದ್ರಫಲಗಳಿಂದಲೇಸಫಲರನ್ನಾಗಿಸುತ್ತದೆ.

ಆತ್ಮೋಪಾಸನದಲ್ಲಿ ಪ್ರವೃತ್ತರನ್ನೂ ಕೂಡ (i) ಅಚಿನ್ಮಿಶ್ರನಾದ ತನ್ನಲ್ಲಿಯೇ ಬ್ರಹ್ಮ ದೃಷ್ಟಿಯಿಂದ ಉಪಾಸಿಸುವುದು. (ii) ಅಚಿನ್ಮಿಶ್ರ ಕೇವಲ ಸ್ವಾತ್ಮೋಪಾಸನ (iii) ಅಚಿತ್ತಿನಿಂದ ಬಿಡಲ್ಪಟ್ಟದ್ವಿಯುಕ್ತವಾದ ತನ್ನಲ್ಲಿ ಬ್ರಹ್ಮ ದೃಷ್ಟಿಯಿಂದ ಉಪಾಸನ. (iv) ಅಚಿದ್ವಿಯುಕ್ತ ಕೇವಲ ಸ್ವಾತ್ಮೋಪಾಸನಗಳೆಂಬ ನಾಲ್ಕು ವಿಧ ಪ್ರತೀಕೋಪಾಸನ (ಏಕದೇಶೋಪಾಸನ—ಉಪಾಸ್ಯಮಾನ ಜೀವ ವಿಶಿಷ್ಟ ಬ್ರಹ್ಮದಲ್ಲಿ ವಿಶೇಷಣಭೂತನಾದ ಜೀವ ಏಕದೇಶವಷ್ಟೆ !)ದಲ್ಲಿ ಇಳಿಸಿ· ಇವಕ್ಕೆ ಅಲ್ಪಭೋಗಗಳನ್ನು ಫಲವನ್ನಾಗಿ ಕೊಟ್ಟು ಪುನರ್ಜನ್ಮವೆತ್ತಿಸುವುದು.

ಬ್ರಹ್ಮನನ್ನು ಆತ್ಮವಾಗಿಯುಳ್ಳ ಸ್ವಾತ್ಮೋಪಾಸನದಲ್ಲಿ ಪ್ರವೃತ್ತರಾದವರನ್ನೂ ಸ್ವಾತ್ಮಶರೀರಕ ಬ್ರಹ್ಮೋಪಾಸನ ಪ್ರವೃತ್ತರನ್ನೂ ಕೂಡ ವಿಳಂಬಕ್ಕೆ

ಕಾರಣ ಸ್ವಾತ್ಮಾನುಭವದಿಂದಲೋ, ಅಷ್ಟೈಶ್ವರ್ಯಸಿದ್ಧಿಯಿಂದಲೋ, ವಸ್ವಾದಿಪದ ಪ್ರಾಪ್ತಿಯಿಂದಲೋ ಬ್ರಹ್ಮಕಾಯನಿಷೇವಣಾದಿಯಿಂದಲೋ, ರಾಜ್ಯಾಭಿಷೇಕಕ್ಕಾಗಿ ಕರೆತಂದ ರಾಜಕುಮಾರನಿಗೆ ಉಪಚಾರಕ್ಕಾಗಿ ಕೈ ನೀಡಿದ ದಾಸಿಯಲ್ಲಿ ಭೋಗಾಭಿಲಾಷೆಯುಂಟಾಗಿ ಅದರಿಂದ ಅವನಿಗೆ ಮುಹೂರ್ತಕ್ಕೆ ಗಮನ ವಿಳಂಬವಾಗುವ ಹಾಗೆ ಪ್ರಾರಬ್ಧ ಕರ್ಮದ ಫಲವಾದ ದೇಹೇಂದ್ರಿಯ ಗಳಲ್ಲಿಯೂ, ಅದಕ್ಕೆ ಸಂಬಂಧಪಟ್ಟ ಪರಿಗ್ರಹಗಳಲ್ಲಿಯೂ ಅಥವಾ ತನ್ಮೂಲ ಭೋಗಗಳಲ್ಲಿಯೂ, ಅಭಿಲಾಷೆಯುಂಟುಮಾಡಿ ಅನ್ಯ ಪರರನ್ನಾಗಿ ಮಾಡುತ್ತದೆ.

ಮೇಲ್ಕಂಡ ಬ್ರಹ್ಮಕಾಯನಿಷೇವಣವೆಂದರೆ— "ಉಷ್ಯತಾಂ ಮಯಿ ಚೇತ್ಯುಕ್ತ್ವಾ ವ್ಯಾದದೇ ಸ ತತೋ ಮುಖಂ । ಅಥ ತಸ್ಯ ವಿವೇಶಾಸ್ಯಂ ಬ್ರಹ್ಮಣೋ ವಿಗತಜ್ವರಃ"—ಎಂದು ಮೋಕ್ಷ ಧರ್ಮದಲ್ಲಿ ಹೇಳಿರುವಂತೆಯೇ ಚತುರ್ಮುಖನ ಕಾಯದಲ್ಲಿ ಪ್ರವೇಶಗೊಳಿಸಿ ಕೆಲವು ಕಾಲ ಅವನಿಗೆ ಸಮಾನವಾದ ಭೋಗವುಳ್ಳವನಾಗಿಸುವುದೆಂದರ್ಥ. ಇವು ವಿದ್ಯಾವಿಶೇಷ ನಿಯತಗಳಾದ ವಿಘ್ನಗಳು.

ಕರ್ಮಯೋಗಾದಿಗಳಲ್ಲಿ ಪ್ರವೃತ್ತನಾದವನಿಗೆ "ನೇಹಾಭಿಕ್ರಮನಾಶೋಽಸ್ತಿ..."— ಇತ್ಯಾದಿಯಾಗಿ ಹೇಳಿರುವಂತೆ ಅನುಷ್ಠಿತಾಂಶಕ್ಕೆ ವಿನಾಶವಿಲ್ಲವಾದ್ದರಿಂದ ಬ್ರಹ್ಮೋಪಾಸನದಲ್ಲಿ ತೊಡಗಿದವರಿಗೆ ಭಗವತ್ಪ್ರಾಪ್ತಿಗೆ ವಿರೋಧ ಹೇಗಾದೀತು ?—ಎಂದರೆ, ಇವರಿಗೂ ಯಾವಾಗಲಾದರೂ ಫಲ ದೊರಕಿಯೇ ದೊರಕುತ್ತೆ. ಉದಾಹೃತ ಶ್ಲೋಕದಲ್ಲಿಯೂ ಕಾಲ ವಿಶೇಷವು ಕಂಠೋಕ್ತವಾಗಿಲ್ಲವಷ್ಟೆ ! ಆದ್ದರಿಂದ ಕಲ್ಪಾಂತರ-ಮನ್ವಂತರ-ಯುಗಾನ್ತರ-ಜನ್ಮಾಂತರಾದಿಗಳಲ್ಲಿ—ಯಾವುದರಲ್ಲಿ ?—ಎಂದು ಹೇಳಲಾಗದು. ಮಿಗಿಲಾದ ಆನುಕೂಲ್ಯ ಸಂಪತ್ತುಳ್ಳ ವಸಿಷ್ಠಾದಿಗಳಿಗೂ ವಿಳಂಬ ಕಂಡು ಬಂದಿದೆ. ವೃತ್ರ-ಕ್ಷತ್ರಬಂಧು ಪ್ರಭೃತಿಗಳಿಗೂ ಶೀಘ್ರದಲ್ಲಿ ಮೋಕ್ಷ ಪ್ರಾಪ್ತವಾದುದಾಗಿ ಹೇಳಿದೆ. ಆದ್ದರಿಂದ ವಿಳಂಬ ರಹಿತಮೋಕ್ಷಕ್ಕೆ ಹೇತುಗಳಾದ ಸುಕೃತ ವಿಶೇಷಗಳು ಯಾರ ವಿಷಯದಲ್ಲಿವೆಯೆಂಬುದು ತಿಳಿಯದು. ವಿಳಂಬ ಹೇತುಗಳಾದ ದುಷ್ಕರ್ಮ ವಿಶೇಷಗಳೂ ಯಾರ ವಿಷಯದಲ್ಲಿವೆಯೆಂಬುದೂ ತಿಳಿಯದು.

ಈ ಅನಿಷ್ಟಗಳ ಪರಂಪರೆಗಳಿಗೆ ಮೂಲಗಳಾದ ಆಜ್ಞಾತಿಲಂಘನಗಳಿಂದ ಬಂದ ಭಗವನ್ನಿಗ್ರಹವಿಶೇಷವಾದ ಪ್ರಧಾನ ವಿರೋಧಿಗೆ ಮಾಡಬೇಕಾದ

ಪ್ರತಿಕಾರವನ್ನು "ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ" ಎಂದು ಕಠ ವಲ್ಲಿಯಲ್ಲಿ ವಶೀಕಾರ್ಯ ಪರಂಪರೆಯನ್ನು ಎತ್ತಿ ಹೇಳಿರುವ ಸಂದರ್ಭದಲ್ಲಿ ಶ್ರೀ ಭಾಷ್ಯಕಾರರು ಅಪ್ಪಣೆ ಕೊಡಿಸಿದ್ದಾರೆ.

ಈ ವಿರೋಧಿವರ್ಗವೆಲ್ಲವನ್ನೂ 'ಶ್ರೀ ರಹಸ್ಯತ್ರಯದಲ್ಲಿ' ವಿಧಿಸುವ **ಅರ್ಥಗಳ ತಳ್ಳಿಹಾಕುವ ಶಕ್ತಿ**ಯಿಂದಲೂ, ನಮಸ್ಸುಗಳಲ್ಲಿಯ '**ಮ**' ಕಾರದಲ್ಲಿ ರುವ ಷಷ್ಠೀ ವಿಭಕ್ತಿಗಳಿಂದಲೂ, 'ಸರ್ವಪಾಪ' ಶಬ್ದದಿಂದಲೂ ಅನುಸಂಧಾನ ಮಾಡಿ, ಸಂಸಾರದಲ್ಲಿ ಉಂಟಾಗುವ ಕಾಲಿನ ಸುಡುವಿಕೆಯಿಂದ ಭಗವತ್ಪ್ರಾಪ್ತ್ಯುಪಾ ಯಭೂತವಾದ ಮಾರ್ಗದಲ್ಲಿ ತ್ವರೆಪಡಬೇಕಾದುದು ಯುಕ್ತ. [ವಿಧಿಸಿದ ಅರ್ಥ ಗಳು ವಿಧಿಸದವುಗಳನ್ನು ತಳ್ಳಿಹಾಕುವುವು. ಪ್ರಣವದಲ್ಲಿ ಭಗವಚ್ಛೇಷತ್ವವು ವಿಧಿ ಸಲ್ಪಟ್ಟಿದೆ. ಇದರಿಂದ ಸ್ವಾತಂತ್ರ್ಯ-ದೇವತಾಂತರ ಶೇಷತ್ವಾದಿಗಳು ವ್ಯಾವೃತ್ತ. 'ಮ'ಕಾರದಲ್ಲಿ ಆತ್ಮನ ಜ್ಞಾನಸ್ವರೂಪಾದಿಯು ವಿಹಿತ. ಇದರಿಂದ ದೇಹವೇ ಆತ್ಮ ಎಂಬುದೇ ಮುಂತಾದ ಭ್ರಮವು ವ್ಯಾವೃತ್ತ.] ಇದನ್ನು ಶ್ರೀ ಶರಣಾಗತಿ ಗದ್ಯದಲ್ಲಿ "ಮದೀಯಾನಾದಿಕರ್ಮಪ್ರವಾಹ ಪ್ರವೃತ್ತಾಂ ಭಗವತ್ಸ್ವರೂಪ ತಿರೋಧಾನ ಕರೀಂ ವಿಪರೀತ ಜ್ಞಾನಜನನೀಂ ಸ್ವವಿಷಯಾಯಾಶ್ಚ ಭೋಗ್ಯಬು ದ್ಧೇರ್ಜನನೀಂದೇಹೇಂದ್ರಿಯತ್ವೇನ ಭೋಗ್ಯತ್ವೇನ......ಅವಸ್ಥಿತಾಂ ದೈವೀಂ ಗುಣಮಯೀಂ ಮಾಯಾಂ ದಾಸಭೂತಃ ಶರಣಾಗತೋಽಸ್ಮಿ...ಇತಿ ವಕ್ತಾರಂ ಮಾಂ ತಾರಯ" ಇತ್ಯಾದಿಯಾಗಿ ಶ್ರೀಭಾಷ್ಯಕಾರರು ಅನುಸಂಧಾನಮಾಡಿ ತೋರಿಸಿಕೊಟ್ಟಿದ್ದಾರೆ.

### ೫. ತತ್ತ್ವತ್ರಯ ಚಿಂತನಾಧಿಕಾರ :

ಮೇಲೆಹೇಳಿದ ಅರ್ಥಪಂಚಕದಲ್ಲಿ ಅಂತರ್ಗತವಾದ ತತ್ತ್ವತ್ರಯವನ್ನು ವಿಶೇಷವಾಗಿ ಈ ಅಧಿಕಾರದಲ್ಲಿ ಪ್ರದರ್ಶಿಸುತ್ತಾರೆ.

ಅತಿ ಕ್ರೂರಗಳಾದ ದೇಹವೇ ಆತ್ಮವೆಂಬ ಭ್ರಮೆ, ಆತ್ಮವು ಸ್ವತಂತ್ರವೆಂಬ ಭ್ರಮೆ, ನಿರೀಶ್ವರಮದದಲ್ಲಿ ರುಚಿ ಇವುಗಳು ತೊಲಗಬೇಕಾದುದರಿಂದ ಮುಮುಕ್ಷುವು ತತ್ತ್ವತ್ರಯವನ್ನು ಅವಶ್ಯ ತಿಳಿಯಬೇಕು. ಭೋಕ್ತೃ, ಭೋಜ್ಯ, ನಿಯಂತೃ – ಎಂಬ ಮೂರೂ ಸೇರಿ ತತ್ತ್ವತ್ರಯವೆನಿಸಿದೆ. ಇಲ್ಲಿ ಭೋಕ್ತೃವಾದವನು ಚೇತನ ; ಭೋಗ್ಯವೆಂಬುದು ಪ್ರಕೃತಿ ; ನಿಯಂತೃವಾದ ವನು ಈಶ್ವರ.

ಎಲ್ಲಾ ವಸ್ತುಗಳ ಸ್ವರೂಪ-ಸ್ಥಿತಿ-ಪ್ರವೃತ್ತಿಗಳು ಪ್ರಮಾಣಗಳಿಂದ ವ್ಯವ

ಸ್ಥಿತಗಳಾಗಿವೆ — ಸ್ವರೂಪವೆಂಬುದು - ತನಗೇ ಅಸಾಧಾರಣವಾದ ಧರ್ಮ ದಿಂದ ನಿರೂಪಿಸಲು ಯೋಗ್ಯವಾದ ಧರ್ಮಿ. ಇದೇ ಸತ್ತೆಯೆಂಬುದು ; ಸ್ಥಿತಿಯೆಂಬುದು - ಈ ಸತ್ತೆಯು ಕಾಲಾಂತರದಲ್ಲಿಯೂ ಅನುವರ್ತಿಸುತ್ತಿರುವುದು - ಇದು ಈಶ್ವರನ ಸಂಕಲ್ಪಕ್ಕನುಗುಣವಾಗಿ ನಿತ್ಯ ವಸ್ತುವಿಗೆ ನಿತ್ಯವೂ ಅನಿತ್ಯ ವಸ್ತುವಿಗೆ ಅನಿತ್ಯವೂ ಆದದ್ದು ; 'ಪ್ರವೃತ್ತಿ'ಯೆಂಬುದಾದರೋ-ಒಂದು ಕಾರ್ಯದಲ್ಲಿ ತೊಡಗುವುದು ಅಥವಾ ಬಿಡುವುದು. ಪ್ರಮಾಣವೆಂಬುದು-ಪ್ರಮಾ (ಜ್ಞಾನ) ಜನನ ಸಮಯದಲ್ಲಿ ವಸ್ತುವಿನ ಸ್ವರೂಪವನ್ನೂ ಸ್ವರೂಪ ನಿರೂಪಕ ಧರ್ಮಗಳನ್ನೂ ನಿರೂಪಿತ ಸ್ವರೂಪ ವಿಶೇಷಣಗಳನ್ನೂ ಅರ್ಥಕ್ರಿಯಾ ಕಾರಿತ್ವ ಲಕ್ಷಣವಾದ ವ್ಯಾಪಾರವನ್ನೂ ತಿಳಿಸತಕ್ಕದ್ದು. ಅದರಲ್ಲಿ ಸ್ವರೂಪವನ್ನು ಸ್ವರೂಪನಿರೂಪಕ ಧರ್ಮವಿಶಿಷ್ಟವನ್ನಾಗಿಯೇ ತಿಳಿಸುತ್ತದೆ. ಸ್ವರೂಪ ನಿರೂಪಕ ಧರ್ಮವನ್ನು ಮುಂದಿಟ್ಟಲ್ಲದೆ ಸ್ವರೂಪವನ್ನು ವ್ಯವಹರಿಸಲೂ ಸಾಧ್ಯವಿಲ್ಲ. ಅಂತಹ ಧರ್ಮವನ್ನು ಬಿಟ್ಟು ಸ್ವರೂಪವನ್ನು ತಿಳಿಯಲು ಇಚ್ಛಿಸುವುದಾದರೆ, ಆಗ ಸ್ವರೂಪವು ತುಚ್ಛ ಅಂದರೆ ಶಶವಿಷಾಣ ಪ್ರಾಯವಾಗುವುದು. ಆದ್ದರಿಂದ ಪ್ರಕೃತದಲ್ಲಿ ಚೇತನ ಸ್ವರೂಪವನ್ನು ಜ್ಞಾನತ್ವ-ಆನಂದತ್ವ-ಅಮಲತ್ವ-ಅಣುತ್ವಾದಿ ರೂಪ ಸ್ವರೂಪ-ನಿರೂಪಕ ಧರ್ಮಗಳಿಂದ ನಿರೂಪಿಸಿ, ಸತ್ಯ, ಜ್ಞಾನ, ಆನಂದ, ಅಮಲ, ಅಣು ಎಂಬ ಪ್ರಕಾರದಿಂದಲೇ ವ್ಯವಹರಿಸುವುದು ಯುಕ್ತ.

ಚೇತನಗತವಾದ, ಈಶ್ವರನ ವಿಷಯದಲ್ಲಿಯ ಶೇಷತ್ವವನ್ನಾದರೋ - ನಿರೂಪಿತ ಸ್ವರೂಪ ವಿಶೇಷಣವೆನ್ನುತ್ತಾರೆ,— ಏಕೆಂದರೆ ಇದು ನಿರುಪಾಧಿಕ ಸಂಬಂಧ ರೂಪವಾದ್ದರಿಂದ ಸಂಬಂಧಿಸ್ವರೂಪ ನಿರೂಪಣೆಯಿಲ್ಲದೆ ತಿಳಿಯಲು ಅಶಕ್ಯ. ಸ್ವರೂಪ ನಿರೂಪಕ ಧರ್ಮವೂ -- ಸ್ವರೂಪವನ್ನು ಮಾತ್ರ ತಿಳಿಸಲಿರತಕ್ಕದ್ದೆಂದೂ, ಸಜಾತೀಯ - ವಿಜಾತೀಯ ಸಕಲೇತರಗಳ ವ್ಯಾವೃತ್ತಿಯನ್ನು ತಿಳಿಸಲಿರತಕ್ಕದ್ದೆಂದೂ ಎರಡು ವಿಧ. ಶೇಷತ್ವವು ಸ್ವರೂಪವನ್ನು ಮಾತ್ರ ತಿಳಿಸುವುದಕ್ಕೋಸ್ಕರವಲ್ಲದಿದ್ದರೂ, ಅಣುತ್ವೇ ಸತಿ ಚೇತನತ್ವವೆಂಬಂತೆ ಸ್ವತಃ ಶೇಷತ್ವೇ ಸತಿ ಚೇತನತ್ವವು ಜೀವನ ಲಕ್ಷಣವಾಗುವುದರಿಂದ ಈ ಎರಡನೆಯ ಆಕಾರದ್ದಾಗಿ ಈ ಶೇಷತ್ವವನ್ನೂ ಸ್ವರೂಪ ನಿರೂಪಕವೆನ್ನಬಹುದು.

ಹೀಗೆಯೇ ವಿಭುತ್ವೇ ಸತಿ ಚೇತನತ್ವ. ಅನನ್ಯಾಧೀನತ್ವ. ನಿರುಪಾಧಿಕ ಶೇಷಿತ್ವ ಮುಂತಾದುವು ಈಶ್ವರನ ಲಕ್ಷಣ.

ಜೀವೇಶ್ವರರಿಬ್ಬರಿಗೂ ಆತ್ಮತ್ವವು ಸಮಾನವಾದುದರಿಂದ ಚೇತನತ್ವ-ಪ್ರತ್ಯಕ್ತ್ವಗಳೂ ಅವರಿಬ್ಬರಿಗೂ ಸಾಮಾನ್ಯ ಲಕ್ಷಣ.

ಚೇತನತ್ವವೆಂದರೆ ಜ್ಞಾನಾಶ್ರಯತ್ವ - ಪ್ರತ್ಯಕ್ತ್ವವೆಂದರೆ ತನಗೆ ತಾನು ತೋರುವುದು. ಹಾಗೆ ಪ್ರಕಾಶಿಸುವಾಗ ಧರ್ಮಭೂತ ಜ್ಞಾನದ ಅಪೇಕ್ಷೆಯಿಲ್ಲದೆಯೇ ಅಹಂ — ಎಂದು ತೋರುತ್ತದೆ.

ಈಶ್ವರವ್ಯತಿರಿಕ್ತವಾದ ಈ ಚೇತನರು — ಬದ್ಧ. ಮುಕ್ತ, ನಿತ್ಯ — ರೆಂದು ಮೂರು ವಿಧವಾಗಿದ್ದಾರೆ. ಇವರಲ್ಲಿ ಸಂಸಾರಿಗಳಾದ ಬ್ರಹ್ಮಾದಿಸ್ತಂಬ ಪರ್ಯಂತರಾದ ಚೇತನರೆಲ್ಲರೂ ಬದ್ಧರು. ಶಾಸ್ತ್ರದಲ್ಲಿ ಹೇಳಿರುವ ಉಪಾಯ ವಿಶೇಷದ ಅನುಷ್ಠಾನದಿಂದ ಉಂಟಾದ ಭಗವದನುಗ್ರಹಕ್ಕೆ ಪಾತ್ರರಾಗಿ ಸಂಸಾರದಿಂದ ಆತ್ಯಂತಿಕ ನಿವೃತ್ತಿ ಪಡೆದವರು ಮುಕ್ತರು. ಸಂಕೋಚರಹಿತಭಗವದನುಭವದಿಂದ ನಿರತಿಶಯವಾದ ಆನಂದವಂತರಿವರು, ನಿತ್ಯರಾದರೋ - ಅನಾದಿ ಕಾಲದಿಂದಲೂ ಜ್ಞಾನ ಸಂಕೋಚವಿಲ್ಲದೆಯೇ ಸಂಸಾರ ಸಂಬಂಧ ರಹಿತರಾಗಿ ನಿತ್ಯ ಕೈಂಕರ್ಯ ಮಾಡುತ್ತಿರುವವರಾದ ಅನಂತ ಗರುಡ ವಿಷ್ವಕ್ಸೇನರೇ ಮೊದಲಾದವರು.

ಈ ಎಲ್ಲಾ ಚೇತನರಿಗೂ ಸ್ಥಿತಿಯೆಂಬುದು ಸಮಾನ. ಪ್ರವೃತ್ತಿಯಾದರೋ ಪರಾಧೀನ — ಪರಾರ್ಥ - ಕರ್ತೃತ್ವ - ಭೋಕ್ತೃತ್ವಗಳೂ — ಏಕೆಂದರೆ, ಈಶ್ವರನು ತನ್ನ ಭೋಗಕ್ಕಾಗಿಯೇ ಈ ಚೇತನರಿಗೆ ಕರ್ತೃತ್ವ-ಭೋಕ್ತೃತ್ವಗಳನ್ನು ಉಂಟುಮಾಡುತ್ತಾನೆ.

ಬದ್ಧರಿಗೆ ನಿತ್ಯಮುಕ್ತರಿಗಿಂತ ಸ್ವರೂಪದಲ್ಲಿ ಇರುವ ವಿಶೇಷವು. ಅವಿದ್ಯಾ-ಕರ್ಮ-ವಾಸನಾ-ರುಚಿ-ಪ್ರಕೃತಿಸಂಬಂಧವುಳ್ಳೋಣ. ಪರಸ್ಪರರಿಗಿರುವ ವಿಶೇಷವು ಜ್ಞಾನ ಸುಖಾದಿ ತಾರತಮ್ಯದಿಂದ ಪ್ರತ್ಯಕ್ಷ ಸಿದ್ಧವಾಗಿದೆ.

ಈ ಬದ್ಧರು ತಮ್ಮ ತಮ್ಮ ಕರ್ಮಾನುಗುಣವಾಗಿ ಈಶ್ವರನು ಕೊಟ್ಟ ಶರೀರಗಳನ್ನು ಧರ್ಮಿ ಸ್ವರೂಪದಿಂದಲೂ, ಧರ್ಮಭೂತ ಜ್ಞಾನದಿಂದಲೂ ಧರಿಸಿದ್ದಾರೆ. ಇದರಲ್ಲಿ ಸ್ವರೂಪಸಾಧ್ಯವಾದ ಧಾರಣ ಶರೀರದ ಸತ್ತೆಗೆ ಉಪಯುಕ್ತವಾದುದು. ಧರ್ಮ—

ಭೂತ ಜ್ಞಾನದಿಂದ ಸಾಧ್ಯವಾದ ಧಾರಣವಾದರೋ – ಪುರುಷಾರ್ಥ ಮತ್ತು ಅದರ ಉಪಾಯಾನುಷ್ಠಾನದಲ್ಲಿಯೂ, ಕೃತಕೃತ್ಯರಾದವರಿಗೆ ಭಗವ ದನುಭವ ಕೈಂಕರ್ಯದಲ್ಲಿಯೂ, ಪಾಪಕೃತ್ತುಗಳಿಗಾದರೋ ಇದಕ್ಕೆ ವಿಪರೀತ ಫಲದಲ್ಲಿಯೂ ಉಪಯುಕ್ತವಾಗುತ್ತದೆಯೆಂಬುದು ವಿಶೇಷ.

ಬದ್ಧರಿಗೆ ನಿತ್ಯಮುಕ್ತರಿಗಿಂತ ಇರುವ ವಿಶೇಷ-ಮೋಕ್ಷ ದೊರಕುವವರಿಗೂ ಸಂಸಾರವೆಂಬ ಬಂಧವು ಅನುವರ್ತಿಸುವುದು. ಪ್ರವೃತ್ತಿಯಲ್ಲಿಯ ವಿಶೇಷ – ಪುಣ್ಯರೂಪ - ಪಾಪರೂಪ - ಪುಣ್ಯಪಾಪರೂಪ ವ್ಯಾಪಾರಗಳು. ಮುಕ್ತರಿಗೆ ಪ್ರತಿಬಂಧಕದ ನಿವೃತ್ತಿಯಿಂದ ಸ್ವರೂಪದ ಆವಿರ್ಭಾವವೆಂಬುದು ಸ್ವರೂಪ ದಲ್ಲಿಯ ವಿಶೇಷ. ಈ ಸ್ವರೂಪಾವಿರ್ಭಾವಕ್ಕೆ ಪೂರ್ವಾವಧಿಯುಂಟೇ ಹೊರತು ಉತ್ತರಾವಧಿಯೆಂಬುದಿಲ್ಲದಿರುವುದು ಸ್ಥಿತಿಯಲ್ಲಿ ವಿಶೇಷ. ಪರಿಪೂರ್ಣ ಭಗವ ದನುಭವದಿಂದುಂಟಾದ ಪ್ರೀತಿಯಿಂದ ಮಾಡಲ್ಪಟ್ಟ ಯಥಾಭಿಮತ ಕೈಂಕರ್ಯ ಪ್ರಾಪ್ತಿಯು ಪ್ರವೃತ್ತಿಯಲ್ಲಿರುವ ವಿಶೇಷ.

ನಿತ್ಯರಿಗೆ ಅನಾದಿಯಾಗಿ ಆವಿರ್ಭೂತಸ್ವರೂಪರಾಗಿದ್ದುಕೊಂಡು ಪರ ತಂತ್ರ ರೆಂಬುದು ಇತರರಿಗಿಂತ ಇರುವ ಸ್ವರೂಪ ವಿಶೇಷ. ಅನಾದಿಯಾಗಿ ಅನುಸರಿಸಿ ಬಂದಿರುವ ಭಗವದನುಭವವು ಸ್ಥಿತಿಯಲ್ಲಿರುವ ವಿಶೇಷ. ಅನಾದಿಗಳೂ ಪ್ರವಾಹತಃ ನಿತ್ಯಗಳೂ ಆದ ಕೈಂಕರ್ಯ ವಿಶೇಷಗಳು ಪ್ರವೃತ್ತಿಯಲ್ಲಿಯ ವಿಶೇಷ.

ಈ ಆತ್ಮರೆಲ್ಲರ ಧರ್ಮಭೂತಜ್ಞಾನವೂ ದ್ರವ್ಯ. ವಿಷಯಪ್ರಕಾಶ ದಶೆಯಲ್ಲಿ ಸ್ವಾಶ್ರಯಕ್ಕೆ ಸ್ವಯಂ ಪ್ರಕಾಶಿಸುತ್ತಿರುವುದು - ಇದರ ಸ್ವರೂಪ. ಇದು ಈಶ್ವರನಿಗೂ ನಿತ್ಯರಿಗೂ ನಿತ್ಯವೂ ವಿಭು. ಇತರರಿಗೆ ಸಂಸಾರಾವಸ್ಥೆ ಯಲ್ಲಿ ಕರ್ಮಾನುರೂಪ ಬಹುವಿಧ ಸಂಕೋಚ - ವಿಕಾಸ ವಿಶಿಷ್ಟವಾಗಿದೆ. ಮುಕ್ತಾವಸ್ಥೆಯಲ್ಲಿ ನೈಜ ವಿಕಾಸದಿಂದ ಎಂದೆಂದಿಗೂ ವಿಭು. ಸ್ಥಿತಿಯಾದರೋ ಸ್ವರೂಪತಃ ನಿತ್ಯವಾದುದರಿಂದ ನಿತ್ಯ. ಪ್ರವೃತ್ತಿಯಾದರೋ - ವಿಷಯ ಪ್ರಕಾಶಕತ್ವ, ಪ್ರಯತ್ನಾವಸ್ಥೆಯಿಂದ ಶರೀರಾದಿ ಪ್ರೇರಕತ್ವ. ಬದ್ಧದಶೆಯಲ್ಲಿ ಸಂಕೋಚ ವಿಕಾಸವತ್ತ್ವ, ಆನುಕೂಲ್ಯ ಪ್ರಾತಿಕೂಲ್ಯಗಳನ್ನು ಪ್ರಕಾಶಪಡಿಸು ವುದರ ಮೂಲಕ ಭೋಗರೂಪ ಅವಸ್ಥಾಯೋಗವೆಂಬುದು.

ಇವರೆಲ್ಲರಿಗೂ. ಸ್ವರೂಪವು ತಮಗೆ ತಾನಾಗಿಯೇ ಪ್ರಕಾಶಿಸುತ್ತದೆ. ಈ ಪ್ರಕಾಶಕ್ಕೆ ಎಂದೂ ಸಂಕೋಚ - ವಿಕಾಸಗಳೆಂಬುವು ಇಲ್ಲ. ಧರ್ಮಭೂತ

ಜ್ಞಾನವಾದರೋ - ವಿಷಯ ಪ್ರಕಾಶ ವೇಳೆಯಲ್ಲಿ ಮಾತ್ರವೇ ಸ್ವಾಶ್ರಯಕ್ಕೆ ತಾನೇ ಪ್ರಕಾಶಿಸುತ್ತದೆ. ಈ ಧರ್ಮ-ಧರ್ಮಿಗಳೆರಡಕ್ಕೂ ಜ್ಞಾನತ್ವವೂ ಸ್ವಯಂ ಪ್ರಕಾಶಕತ್ವವೂ ಸಾಧಾರಣ. ವಿಷಯಿತ್ವ ಪ್ರತ್ಯಕ್ತ್ವಗಳು ಯಥಾಕ್ರಮ ಅಸಾಧಾರಣ. ಅವರಲ್ಲಿ ಜ್ಞಾನತ್ವವೆಂಬುದು ಒಂದು ವಸ್ತು ಪ್ರಕಾಶಿಸುವಿಕೆ. ಇದು ತನಗೋ ಪರರಿಗೋ ಒಂದು ವಸ್ತುವಿನ ವ್ಯವಹಾರಕ್ಕೆ ಪ್ರಯೋಜಕವಾದ ಸಂಬಂಧ. ಧರ್ಮಿಗೆ ಇದು ತಾದಾತ್ಮ್ಯರೂಪ. ಧರ್ಮಕ್ಕೆ ಸಂಯೋಗಾದಿ ರೂಪ. ಜ್ಞಾನಾಂತರದ ಅಪೇಕ್ಷೆಯಿಲ್ಲದೆ ತಾನೇ ತನಗೆ ಪ್ರಕಾಶಿಸುವುದು ಸ್ವಯಂ ಪ್ರಕಾಶತ್ವ. ಹೀಗೆಯೇ ಧರ್ಮಿ ಸ್ವರೂಪದಲ್ಲಿರುವ ಪ್ರತ್ಯಕ್ತ್ವವೂ ಸ್ವಯಂ ಪ್ರಕಾಶ.

ಅಚೇತನವೂ — ಪ್ರಕೃತಿ, ಕಾಲ, ಶುದ್ಧಸತ್ತ್ವಗಳೆಂದು ಮೂರು ವಿಧ. ಈ ಮೂರರೂ ಪರರಿಗೆ ಮಾತ್ರವೇ ಭಾಸವಾಗುವುವು. ಅಚೇತನವೆಂಬುದು ಜ್ಞಾನಕ್ಕೆ ಅನಾಶ್ರಯವಾಗಿರುವುದು ; ಪರರಿಗೆ ಮಾತ್ರವೇ ಭಾಸವಾಗುವುದು. ಈ ಅಚೇತನಗಳಲ್ಲಿ ಪ್ರಕೃತಿ-ಕಾಲಗಳೆಂಬವೆರಡೂ ಜಡಗಳು. ಶುದ್ಧ ಸತ್ತ್ವವು ಅಜಡ. ಅಜಡವೆಂಬುದು ಸ್ವಯಂ ಪ್ರಕಾಶತ್ವ - ತದ್ಭಿನ್ನವು ಜಡ.

ಈ ತ್ರಿವಿಧ ಅಚೇತನಗಳ ಪ್ರವೃತ್ತಿಯು ಈಶ್ವರನ ಸಂಕಲ್ಪಾನುರೂಪವಾದ ವಿಚಿತ್ರ ಪರಿಣಾಮಾದಿಗಳು. ಸತತ ಪರಿಣಾಮಶೀಲವಾದ ತ್ರಿಗುಣದ್ರವ್ಯದ (ಪ್ರಕೃತಿಯ) ಸತ್ತ್ವ-ರಜಸ್ಸು-ತಮಸ್ಸುಗಳು ಮೂರೂ ಯಾವಾಗ ಸಮಸ್ಥಿತಿಯಲ್ಲಿವೆಯೋ ಆಗ ಪ್ರಳಯ. ಯಾವಾಗ ವಿಷಮಗಳಾಗುವುವೋ ಆಗ ಸೃಷ್ಟಿ ಸ್ಥಿತಿಗಳು. ಗುಣ ವೈಷಮ್ಯವಿಶಿಷ್ಟವಾದ ಪ್ರದೇಶದಲ್ಲಿ ಮಹತ್ ಮೊದಲಾದ ವಿಕಾರಗಳು – ಇಲ್ಲಿ ವಿಕೃತ-ಅವಿಕೃತಗಳಾದ ಪ್ರಕೃತಿ ಪ್ರದೇಶವನ್ನು ಒಂದಾಗಿ ಮಾಡಿ-ಪ್ರಕೃತಿ, ಮಹಾನ್, ಅಹಂಕಾರ. ಪಂಚ ತನ್ಮಾತ್ರೆಗಳು, ಪಂಚ ಭೂತಗಳು, ಹನ್ನೊಂದು ಇಂದ್ರಿಯಗಳು – ಎಂದು ಒಟ್ಟು ೨೪ ವಿಧವಾಗಿ ತತ್ತ್ವವಿಭಾಗವಾಗಿದೆ. ವಿವಕ್ಷೆಯಿದ್ದ ಹಾಗೆ ಈ ಸಂಖ್ಯೆಯಲ್ಲಿ ಸ್ವಲ್ಪ ಹೆಚ್ಚು ಕಡಿಮೆಮಾಡಿರುವುದೂ ಉಂಟು

ಈ ತತ್ತ್ವಗಳ ಅಭಿಮಾನಿ ದೇವತೆಗಳೂ ನಿತ್ಯಸೂರಿಗಳೂ ಸರ್ವೇಶ್ವರನಿಗೆ ಪರರೂಪದಲ್ಲಿ ಅಸ್ತ್ರಭೂಷಣಾದಿ ರೂಪದಿಂದ ಇದ್ದಾರೆ. ದ್ರವ್ಯಗಳು ಸ್ವರೂಪತಃ ನಿತ್ಯಗಳು. ಇವುಗಳ ನಾಮಾಂತರ ಭಜನಾರ್ಹವಾದ ಅವಸ್ಥೆಗಳು

ತನಿತ್ಯಗಳು.

ಸಜಾತೀಯವಾದ ಅವಸ್ಥಾನಸಂತತಿಯು ಅವಿಚ್ಛಿನ್ನವಾಗಿರುವುದರಿಂದ ಕೆಲವು ಪ್ರವಾಹತಃ ನಿತ್ಯಗಳು. ಇವೆಲ್ಲವುಗಳ ಸ್ವರೂಪ-ಸ್ಥಿತಿ-ಪ್ರವೃತ್ತಿಗಳೂ ಈಶ್ವರಾಧೀನಗಳು - ಅಂದರೆ, ಈಶ್ವರೇಚ್ಛೆಯಿಲ್ಲದಾಗ ಇವುಗಳು ಸತ್ತಾದಿ ಶೂನ್ಯಗಳೆಂದು ಭಾವ. ಇವೆಲ್ಲವುಗಳ ಆನುಕೂಲ್ಯವು ಸ್ವಭಾವ ಸಿದ್ಧವೆಂಬುದು ಈಶ್ವರನ ಸಂಕಲ್ಪಕ್ಕೆ ಅಧೀನ. ಆದ್ದರಿಂದ ಮುಕ್ತರಿಗೆ ಮತ್ತು ಈಶ್ವರನಿಗೆ ಸರ್ವವೂ ಸದಾ ಅನುಕೂಲವೇ. ಬದ್ಧರಿಗಾದರೋ, ಅವರವರ ಆಯಾ ಕರ್ಮಾನುಗುಣವಾಗಿ ಪುರುಷ ಭೇದದಿಂದಲೂ, ಕಾಲಭೇದದಿಂದಲೂ ಪ್ರತಿಕೂಲವೂ ಅನುಕೂಲವೂ ಆಗಿವೆ. ಆತ್ಮಸ್ವರೂಪಕ್ಕಾದರೋ. ಈಶ್ವರ ಸಂಕಲ್ಪದಿಂದ ಸರ್ವದಾ ಅನುಕೂಲವೇ.

ಆದ್ದರಿಂದಲೇ. ದೇಹವೇ ಆತ್ಮಾ ಎಂಬ ಭ್ರಮೆ ಉಳ್ಳವರಿಗೆ ಅತ್ಯಂತ ಹೇಯವಾದಾಗ್ಯೂ ಈ ಶರೀರವು ಕರ್ಮವಿಶೇಷದಿಂದ ಅನುಕೂಲವಾಗಿ ತೋರುತ್ತದ. ಮುಮುಕ್ಷುಗಳಿಗೆ ಔಪಾಧಿಕವಾದ ಪ್ರತಿಕೂಲ ರೂಪದಿಂದ ಹೇಯವಾಗಿರುತ್ತದೆ. ಮುಕ್ತರಿಗಾದರೋ. ಶರೀರವು ಸಾಭಾವಿಕವಾದ ಅನುಕೂಲ ರೂಪದಿಂದ ಗ್ರಾಹ್ಯವಾಗಿದೆ. ಆದ್ದರಿಂದ ಅಹಂಕಾರ-ಮಮಕಾರಯುಕ್ತನಿಗೆ ಸ್ವಾರ್ಥಕ್ಕಾಗಿ ಸ್ವೀಕರಿಸುವ ಸರ್ವವೂ ಪ್ರತಿಕೂಲ, ಸ್ವಸ್ವರೂಪ ಜ್ಞಾನವಂತನಾಗಿ ಸ್ವಾಮಿಶೇಷವೆಂದೂ ಬಲ್ಲವನಿಗೆ ಸರ್ವವೂ ಅನುಕೂಲವೇ.

ಸ್ವಾಧೀನಸತ್ತಾದಿಯುಳ್ಳ ಭಗವಂತನಿಗೆ ಸ್ವರೂಪವೂ ಕೂಡ ಸತ್ಯತ್ವಾದಿರೂಪ ಸ್ವರೂಪ ನಿರೂಪಕ ಧರ್ಮಕ್ಕೆ ಅಧೀನವಾದ ನಿರೂಪಣೆಯುಳ್ಳೋಣದರಿಂದ ಸತ್ಯ ಜ್ಞಾನ ಅನಂತ ಅಮಲ ಮೊದಲಾದ ಪದದಿಂದ ಹೇಳಲ್ಪಟ್ಟಿದೆ. ಅವನ ಅನಂತ ಗುಣಗಳಲ್ಲಿ ಜ್ಞಾನ ಶಕ್ತಿ ಬಲೈಶ್ವರ್ಯ ವೀರ್ಯ ತೇಜಸ್ಸುಗಳು ಪರತ್ವಕ್ಕೆ ಉಪಯುಕ್ತಗಳು. ಸೌಶೀಲ್ಯ ವಾತ್ಸಲ್ಯಾದಿಗಳು ಸೌಲಭ್ಯಕ್ಕೆ ಉಪಯುಕ್ತಗಳು. ಈ ಸಕಲ ಗುಣಗಳೂ ಸ್ವರೂಪಾಶ್ರಿತವೆಂದು ತಿಳಿಯಬೇಕು.

ಆ ಈಶ್ವರನ ಅನಂತವಾದ ಪರರೂಪವೊಂದೇ ಪರ - ವ್ಯೂಹ - ವಿಭವ - ಅರ್ಚಾ — ಅಂತರ್ಯಾಮಿ — ಗಳೆಂಬ ಐದು ಪ್ರಕಾರವಾಗಿವೆ. ಅದರಲ್ಲಿ ವ್ಯೂಹವು ವಾಸುದೇವ. ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧಗಳೆಂದು ನಾಲ್ಕು ವಿಧ. ಪರರೂಪಕ್ಕೂ ವ್ಯೂಹಾಂತರ್ಗತ ವಾಸುದೇವ ರೂಪಕ್ಕೂ

ಭೇದವಿಲ್ಲದುದರಿಂದ ವ್ಯೂಹವು ತ್ರಿವಿಧಗಳೆಂದೂ ಕೆಲವರೆನ್ನುತ್ತಾರೆ. ಈ ಮೂರು ರೂಪಗಳಲ್ಲಿ ಮೇಲೆ ಹೇಳಿದ ಜ್ಞಾನಾದಿ ಆರು ಗುಣಗಳಲ್ಲಿ ಎರಡೆರಡು ಉಪಾಸಕರ ಅನುಗ್ರಹಕ್ಕಾಗಿ ಆವಿಷ್ಕೃತವಾಗಿವೆ. ಕೇಶವಾದಿ ದ್ವಾದಶ ರೂಪಗಳೂ ವ್ಯೂಹಾಂತರಗಳು.

ಸ್ಥಿತಿಯಾದರೋ ನಿತ್ಯವೇ. ಪ್ರವೃತ್ತಿಯು—ಸಕಲಜಗತ್ಸೃಷ್ಟಿ-ಸ್ಥಿತಿ - ಸಂಹಾರ - ಮೋಕ್ಷ ಪ್ರದತ್ವ - ಅಂತಃಪ್ರವೇಶ ನಿಯಮನಾದಿ. ಈ ಈಶ್ವರನು ಸರ್ವಾವಸ್ಥೆಗಳಲ್ಲಿಯೂ ಲಕ್ಷ್ಮೀವಿಶಿಷ್ಟನೇ ಆಗಿದ್ದಾನೆ. ಅದರಲ್ಲಿ ಅವನ ದಂಡಧರತ್ವಾದಿಯು, ಶ್ರೀ ದೇವಿಯ ಪುರುಷಕಾರತ್ವಾದಿಯೂ ಆದ ವೈಷಮ್ಯವು ಉಭಯರ ಇಚ್ಛೆಗೆ ಅಧೀನವಾಗಿ ವ್ಯವಸ್ಥಿತವಾದುದು.

**೬. ಪರದೇವತಾ ಪಾರಮಾರ್ಥ್ಯಾಧಿಕಾರ :**

ಹೀಗೆ ಸಾಮಾನ್ಯತಃ ಪ್ರಕೃತಿ - ಪುರುಷ - ಈಶ್ವರರೆಂಬ ತತ್ತ್ವತ್ರಯ ವಿವೇಕವು ಸಿದ್ಧವಾದಾಗ್ಯೂ, ಪರದೇವತಾ ವಿಶೇಷದ ನಿರ್ಣಯವಿಲ್ಲದಿದ್ದಲ್ಲಿ ಪ್ರಯೋಜನಾಂತರವೈಮುಖ್ಯಸಹಿತ ದೇವತಾಂತರವೈಮುಖ್ಯರೂಪವಾದ ಪರಮೈಕಾಂತತ್ವವು ಸಿದ್ಧಿಸದು. ಪರಮೈಕಾಂತತ್ವವಿಲ್ಲದವರಿಗೆ ಮೋಕ್ಷವು ಬೇಗ ಸಿದ್ಧಿಸದು. ಆದ್ದರಿಂದ ಪರದೇವತಾವಿಶೇಷದ ನಿರ್ಣಯವು ಅವಶ್ಯಕ. ಅದಕ್ಕಾಗಿ—

"ಆತ್ಮೈಕ್ಯಂ ದೇವತೈಕ್ಯಂ ತ್ರಿಕಸಮಧಿಗತಾ ತುಲ್ಯತೈಕ್ಯಂ ತ್ರಯಾಣಾಂ
ಅನ್ಯತ್ರೈಶ್ವರ್ಯ ಮಿತ್ಯಾದ್ಯನಿಪುಣ ಫಣಿತೀ ರಾದ್ರಿಯನ್ತೇ ನ ಸನ್ತಃ ।
ತ್ರಯ್ಯನ್ತೈರೇಕ ಕಂಠ್ಯೈಃ ತದನುಗುಣ ಮನುವ್ಯಾಸ ಮುಖ್ಯೋಕ್ತಿಭಿಸ್ತು
ಶ್ರೀಮಾನ್ನಾರಾಯಣೋ ನಃ ಪತಿರಖಿಲತನುರ್ಮುಕ್ತಿದೋ ಮುಕ್ತಭೋಗ್ಯಃ"॥ —ಎಂದು ಆಚಾರ್ಯರು ಅಪ್ಪಣೆ ಕೊಡಿಸಿದ್ದಾರೆ.

ಚೇತನಾ ಚೇತನಗಳೊಳಗೆ ಭೇದವು ಅತ್ಯಂತ ಪ್ರಾಮಾಣಿಕವಾದ್ದರಿಂದ. ಸರ್ವಜಗತ್ತೂ ಪರಬ್ರಹ್ಮವೇ-ಎಂಬ ಪಕ್ಷ ಘಟಿಸದು. ಇದನ್ನು 'ಆತ್ಮೈಕ್ಯಂ' -ಇತ್ಯಾದಿಯಿಂದ ಸಂಗ್ರಹಿಸಿದ್ದಾರೆ.

ಜೀವರಿಗೂ ಈಶ್ವರನಿಗೂ, ದೇವಾದಿರೂಪ ಜೀವರೊಳಗೆ ಪರಸ್ಪರವೂ ಸ್ವಾಭಾವಿಕ ಭೇದವೆಂಬುದು ಸುಖದುಃಖಾದಿ ವ್ಯವಸ್ಥೆಯಿಂದ ಪ್ರಾಮಾಣಿಕವಾಗಿರುವುದರಿಂದ. ಬ್ರಹ್ಮರುದ್ರಾದಿ ದೇವತೆಗಳಿಗೆ ಈಶ್ವರನೊಂದಿಗೂ.

ಮತ್ತು ಅವರೊಳಗೆ ಪರಸ್ಪರವೂ ಭೇದವಿಲ್ಲವೆಂಬ ಪಕ್ಷವೂ ದುರ್ಘಟ.-ಇದು 'ದೇವತೈಕ್ಯಂ'-ಇತ್ಯಾದಿಯ ತಾತ್ಪರ್ಯ.

ಈ ದೇವತೆಗಳಲ್ಲಿಯೂ, ಪ್ರಧಾನರಾದ ಬ್ರಹ್ಮರುದ್ರಾದಿಗಳೂ ಕಾರ್ಯ ವರ್ಗಕ್ಕೆ ಸೇರಿದವರೂ, ಕರ್ಮವಶ್ಯರೂ ಎಂಬುದು ಸಿದ್ಧವಾಗಿರುವುದರಿಂದ, ಸ್ವೇಚ್ಛೆಯಿಂದ ಅವತೀರ್ಣನಾಗಿ ತ್ರಿಮೂರ್ತಿಗಳ ಮಧ್ಯೆ ಇರುವವನಾದ ಶ್ರೀ ವಿಷ್ಣುವೇ ಪೂರ್ವಾವಸ್ಥಾವಿಶಿಷ್ಟವೇಷದಿಂದ ಸರ್ವಜಗತ್ಕಾರಣನೂ, ನಿತ್ಯನೂ ಇತ್ಯಾದಿಯಾದವನೆಂದೂ ಸಿದ್ಧವಾಗಿರುವುದರಿಂದಲೂ, ತ್ರಿಮೂರ್ತಿಗ ಗಳೆಂಬ ಮೂವರೂ ಸಮವೆಂಬುದೂ, ತ್ರಿಮೂರ್ತಿಗಳೂ ಸೇರಿ ಒಂದೇ ತತ್ತ್ವ ವೆಂಬುದೂ, ತ್ರಿಮೂರ್ತ್ಯುತ್ತೀರ್ಣನು ಈಶ್ವರನೆಂಬುದೂ, ಇವರುಗಳೊಳಗೇ ಬ್ರಹ್ಮನೋ ರುದ್ರನೋ ಈಶ್ವರನೆಂಬುದೂ, ಆದ, ಸಾಮ್ಯ, ಐಕ್ಯ, ಉತ್ತೀರ್ಣರೆಂಬ ಪಕ್ಷಗಳು ಸಂಘಟಿಸವು.

ಈ ಬ್ರಹ್ಮರುದ್ರಮೊದಲಾದ ದೇವತೆಗಳೂ ಸರ್ವೇಶ್ವರನಾದ ನಾರಾಯಣನ ಕಾರ್ಯಭೂತರು, ಕರ್ಮವಶ್ಯರು, ಮಾಯಾಪರತಂತ್ರರು, ವಿಭೂತಿಭೂತರು, ಶರೀರಗಳು. ಜ್ಞಾನ ಸಂಕೋಚವಿಕಾಸವಂತರು, ಶುಭಾಶ್ರಯತ್ವವಿಲ್ಲದವರು ಮುಮುಕ್ಷುಗಳಿಗೆ ಅನುಪಾಸ್ಯರು.—ಎಂಬುದೂ, ಶ್ರೀಮನ್ನಾರಾಯಣನೊಬ್ಬನೇ ಸರ್ವಪ್ರಕಾರದಿಂದಲೂ ನಿಸ್ಸಮಾಭ್ಯಧಿಕ. ಸ್ವವ್ಯತಿರಿಕ್ತ ಸಕಲಜಂತುಗಳಿಗೂ ಉಪಾಸ್ಯ - ಎಂಬುದೂ 'ಸರ್ವಸಂಪ್ರತಿಪನ್ನ ಪ್ರಮಾಣ ಪ್ರಸಿದ್ಧವಾಗಿವೆ. ಶುಭಾಶ್ರಯವೆಂದರೆ - ಶುಭವಾಗಿದ್ದುಕೊಂಡು ಆಶ್ರಯವೂ ಆದವರೆಂದರ್ಥ. ಹಾಗಲ್ಲದವರು ಬ್ರಹ್ಮರುದ್ರಾದಿಗಳು.

ಬ್ರಹ್ಮರುದ್ರಾದಿಗಳೂ ಮೋಕ್ಷಕ್ಕೆ ಉಪಕಾರಕರೆಂದು ಕೆಲವೆಡೆಗಳಲ್ಲಿ ಹೇಳಿರುವುದೂ - ಆಚಾರ್ಯರೇ ಮೊದಲಾದವರಂತೆ ಇವರೂ ಜ್ಞಾನಕ್ಕೆ ಹೇತು ಭೂತರೆನ್ನುವುದಕ್ಕಾಗಿ ಮಾತ್ರ-ಸೂರ್ಯಾದಿ ದೇವತಾಂತರ ಭಕ್ತರುಗಳಲ್ಲಿಯೂ ಪರಾವರ ತತ್ತ್ವಗಳಲ್ಲಿ ಐಕ್ಯಬುದ್ಧಿ, ವ್ಯತ್ಯಯಬುದ್ಧಿ, ಸಮತ್ವಬುದ್ಧಿ-ಇತ್ಯಾದಿ ಗಳಿಲ್ಲದವರೂ ಆಸುರಸ್ವಭಾವರಹಿತರೂ ಆದವರು ಮಾತ್ರವೇ ಪರಂಪರೆಯಿಂದ ಭಗವಂತನಿಗೆ ಅನುಗ್ರಾಹ್ಯರಾದಾರು. ಈ ರೀತಿ ಯಿಲ್ಲದವರು ನಿಗ್ರಾಹ್ಯರೇ ಸರಿ.

ಆದ್ದರಿಂದಲೇ ಮೋಹಶಾಸ್ತ್ರಗಳಲ್ಲಿ ಹೇಳಿರುವ ಕರ್ಮಗಳಲ್ಲಿ ಕ್ಷಿಪ್ರವಾಗಿ ದೃಷ್ಟಫಲಸಿದ್ಧಿಪ್ರದರ್ಶನವೂ ಒಂದು ಭಗವನ್ನಿಗ್ರಹ ಪ್ರಕಾರವೇ. ಸತ್ಯಸಂಕಲ್ಪನಾದ ಭಗವಂತನ ನಿಗ್ರಹಕ್ಕೆ ಗುರಿಯಾದವನನ್ನು ಬ್ರಹ್ಮಾದಿಗಳಿಂದಲೂ ರಕ್ಷಿಸಲು ಸಾಧ್ಯವಿಲ್ಲ. ಹಾಗೆಯೇ ಅನುಗ್ರಹಪಾತ್ರರಾದವರನ್ನು ಭಗವಂತನು ತಾನೇ ಸಕಲವಿಧ ಆಪತ್ತುಗಳಿಂದ ರಕ್ಷಿಸುವನು.

ದೇವತಾಂತರ ಭಜನದಿಂದ ವಿಳಂಬವಾಗಿಯೂ ಮೋಕ್ಷದೊರಕದು - ಭಗವಂತನನ್ನು ಭಜಿಸುವುದರಿಂದಲಾದರೋ — ನಿ ರ ತಿ ಶ ಯೈ ಶ್ವ ರ್ಯಾ ದಿ ಸಿದ್ಧಿಯೂ ಕೂಡಿದೆ. ಈ ಭಜನವು ತಾಪನಿವೃತ್ತಿಗಾಗಿ ಮಾಡುವ ಗಂಗಾ - ಸ್ನಾನದಹಾಗೆ ಕ್ರಮೇಣ ರಜಸ್ತಮೋಗುಣಗಳನ್ನು ನೀಗಿಸಿ ಸತ್ವೋನ್ಮೇಷವನ್ನು ಉಂಟುಮಾಡಿ ಮೋಕ್ಷವನ್ನು ತರುವುದು. ಆದರೆ ಇದರಲ್ಲಿ ವಿಳಂಬವಾಗುತ್ತದೆ. ಮೋಕ್ಷರುಚಿಯಿಂದಲೇ ತನಗೆ ಶಕ್ಯವಾದ ಉಪಾಯದಲ್ಲಿ ಪ್ರವೃತ್ತನಾದವನಿಗಾದರೋ ವಿಳಂಬವೂ ಆಗದು. ಸ್ವತಂತ್ರ ಪ್ರಪತ್ತಿನಿಷ್ಠನಿಗಾದರೋ ಅವನ ಸಂಕಲ್ಪವೊಂದನ್ನು ಬಿಟ್ಟು ಮತ್ತೆ ಯಾವುದೂ ವಿಳಂಬಾವಿಳಂಬಗಳಿಗೆ ನಿಯಾಮಕವಲ್ಲ. ಈ ನಿಯಮಗಳು ಸ್ವತಂತ್ರೇಚ್ಛಾಸಿದ್ಧಗಳು - ಎಂಬುದು ಸರ್ವಪ್ರಮಾಣ ಸಂಮತವಾದುದು.

ರಾಜನು ಚಾರ್ವಾಕ ಸೇವಕನಾದನೊಬ್ಬನಿಂದ ಆರಾಧಿಸಲ್ಪಟ್ಟಾಗ್ಯೂ, ಶರೀರದೊಳಗಿರುವ ಜೀವಾತ್ಮನು ಸಂತೋಷಿಸುವ ಹಾಗೆಯೇ ಮೇಲೆ ಹೇಳಿದ ವಿವೇಕವಿಲ್ಲದವರಿಂದ ದೇವತಾಂತರಗಳು ಆರಾಧಿಸಲ್ಪಟ್ಟಾಗ್ಯೂ, ಅವರೊಳಗಿನ ಅಂತರಾತ್ಮನಾದ ಪರಮಾತ್ಮನು ಸಂತೋಷಗೊಳ್ಳುತ್ತಾನೆ. ಆದರೂ ಶಾಸ್ತ್ರಾರ್ಥದ ಕೊರತೆಯಿಂದ ಫಲದಲ್ಲಿ ಕೊರತೆಯೆಂಬುದು ಪ್ರಮಾಣನಿಯತ. ಅದೇ ದೇವತಾಂತರಗಳನ್ನು ಭಗವದಾತ್ಮಕತ್ವಜ್ಞಾನವುಳ್ಳವರಾಗಿ ಫಲಕಾಮನೆಯಿಂದ ಉಪಾಸಿಸುವವರಿಗೆ ಕ್ಷಿಪ್ರಫಲವುಂಟು. ಫಲಕಾಮನೆಯಿಂದಲಾದರೂ ಸರಿಯೇ ಭಗವಂತನನ್ನೇ ನೇರವಾಗಿ ಆಶ್ರಯಿಸುವವರಿಗೆ ಅದೇ ಫಲ ಇನ್ನೂ ಅತಿಶಯವಾಗಿ ಲಭಿಸುತ್ತದೆ. ಅದೇ ಭಗವಂತನನ್ನು ಅನನ್ಯಪ್ರಯೋಜನರಾಗಿ ಆಶ್ರಯಿಸುವವರಿಗಾದರೋ — ಆನುಷಂಗಿಕವಾದ ಶರೀರಾರೋಗ್ಯೈಶ್ವರ್ಯಾದಿ ಸಿದ್ಧಿಯು ಭಗವತ್ಸಂಕಲ್ಪನಿಯತವೂ, ವಿ ದ್ಯಾ ವಿ ಶೇ ಷ ರಾಗವಿಶೇಷಾದಿ ನಿಯತವೂ ಆದುದು.

ಅಂತಹ ಈ ಪರದೇವತಾವಿಶೇಷವಾದ ಮಹಾಪುರುಷನಿಗೆ ಶ್ರಿಯಃಪತಿತ್ವವು ಲಕ್ಷಣವಾದ್ದರಿಂದ ಮಿಕ್ಕವರಿಗಿಂತ ವಿಲಕ್ಷಣ, ಪ್ರಾಪ್ಯ ಮತ್ತು ಪ್ರಾಪಕ. ಅವನನ್ನು ಬಿಟ್ಟು ಬೇರೊಂದು ಪ್ರಾಪ್ಯವೂ ಶರಣ್ಯವೂ ಇಲ್ಲ.

## ೭. ಮುಮುಕ್ಷುತ್ವಾಧಿಕಾರಃ

ಹೀಗೆ ಹಿಂದಿನ ನಾಲ್ಕು ಅಧಿಕಾರಗಳಿಂದ ಶೇಷ - ಶೇಷಿ ಭಾವಾದಿ ಸಂಬಂಧ - ಅರ್ಥಪಂಚಕ - ತತ್ತ್ವತ್ರಯ – ಪರದೇವತೆಗಳ ಸ್ವರೂಪವನ್ನು ತಿಳಿಸಲಾಯಿತು. ಇದನ್ನು ತಿಳಿದುದರ ಫಲವು ಬಂಧದಲ್ಲಿ ಅಸಹ್ಯತಾನುಸಂಧಾನದಿಂದ ಕೂಡಿದ ಮುಮುಕ್ಷುತ್ವವೆಂಬುದನ್ನು ಸಹೇತುಕವಾಗಿ ಈ ಅಧಿಕಾರದಲ್ಲಿ, ಕೆಳಗಿನ.

"ಕಾಲಾವರ್ತಾನ್ ಪ್ರಕೃತಿವಿಕೃತೀಃ ಕಾಮಭೋಗೇಷು ದೋಷಾನ್
ಜ್ವಾಲಾಗರ್ತಪ್ರತಿಮ ದುರಿತೋದರ್ಕ ದುಃಖಾನುಭೂತಿಂ ।
ಯಾಥಾತಥ್ಯಂ ಸ್ವಪರನಿಯತಂ ಯಚ್ಚ ದಿವ್ಯಂ ಪದಂತತ್
ಕಾರಾಕಲ್ಪಂ ವಪುರಪಿ ವಿದನ್ ಕಸ್ತಿತಿಕ್ಷೇತಬನ್ಧಂ॥"—ಎಂಬ ಶ್ಲೋಕ

ದಿಂದ ಬೋಧಿಸುತ್ತಾರೆ. ಮೇಲೆ ನಾಲ್ಕು ಅಧಿಕಾರಗಳಿಂದ ಬೋಧಿಸಿದ ಅಧ್ಯಾತ್ಮಶಾಸ್ತ್ರಾರ್ಥವಿಶೇಷಗಳಜ್ಞಾನದಿಂದ, ಸ್ವಯಂಪ್ರಕಾಶತ್ವ-ಜ್ಞಾತೃತ್ವ-ಕರ್ತೃತ್ವ – ಭೋಕ್ತೃತ್ವ - ಶರೀರತ್ವ - ಅಣುತ್ವ - ನಿತ್ಯತ್ವ - ನಿರವಯತ್ವ - ಛೇಧನ ದಹನ ಕ್ಲೇದನ ಶೋಷಣಾದ್ಯನರ್ಹತ್ವ - ವೃದ್ಧಿಹ್ರಾಸ ರಹಿತತ್ವಾದಿ ರೂಪ ವಿಶೇಷಗಳಿಂದ, ವಿಶೇಷಣಗಳಾದ ದೇಹ, ಇಂದ್ರಿಯ, ಮನಸ್ಸು, ಪ್ರಾಣ, ಬುದ್ಧಿಗಳಿಗಿಂತ ತನಗಿರುವ ವೈಲಕ್ಷಣ್ಯವನ್ನು ಅರಿತು, ಪರಲೋಕ ಗಮನ, ದೇಹಾಂತರ ಪ್ರಾಪ್ತ್ಯರ್ಹತೆಗಳನ್ನು ನಿಶ್ಚಯಿಸಿ, ಸಾಮಾನ್ಯತಃ ಲೋಕೋತ್ತೀರ್ಣ ಪುರುಷಾರ್ಥಕ್ಕೆ ಯೋಗ್ಯರುಗಳಾಗಿ, ನರಕಪತನ, ಜನ್ಮಾಂತರ ಕ್ಲೇಶಗಳಿಗೆ ಅತಿಯಾಗಿ ಹೆದರಿ ಅವಕ್ಕೆ ಕಾರಣಗಳಾದ ಪಾಪಗಳಿಂದ ನಿವೃತ್ತರಾಗಿ, ಆಧೇಯತ್ವ, ವಿಧೇಯತ್ವ, ಶೇಷತ್ವ, ಅಲ್ಪಶಕ್ತಿತ್ವ, ಅಣುತ್ವ, ಅಜ್ಞಾನ, ಸಂಶಯ, ವಿಪರ್ಯಯ, ದುಃಖಾದಿಯೋಗತ್ವ, ಅಶುಭಾಶ್ರಯತ್ವ, ಮೊದಲಾದವುಗಳಿಂದ ಪರಮೇಶ್ವರನಿಗಿಂತ ವಿಲಕ್ಷಣವೆಂಬುದನ್ನು ನಿಶ್ಚಯಿಸಿಕೊಂಡು, ಸ್ವರೂಪಪ್ರಾಪ್ತ ಭಗವತ್ಕೈಂಕರ್ಯರೂಪ ಪರಮಪುರುಷಾರ್ಥಕ್ಕೆ ಯೋಗ್ಯರಾಗಿ, ಅಲ್ಪತ್ವ, ಅಸ್ಥಿರತ್ವ, ದುಃಖಮೂಲತ್ವ, ದುಃಖೋದರ್ಕತ್ವ ದುಃಖಿ ಮಿಶ್ರತ್ವ

ದೇಹಾತ್ಮಾಭಿಮಾನಮೂಲತ್ವ, ಸ್ವಾಭಾವಿಕಾನಂದವಿರುದ್ಧತ್ವಗಳೆಂಬ ಸಪ್ತ (7) ವಿಷಯಾನುಭವ ದೋಷಗಳನ್ನೂ, ಯಥಾಸಂಭವ ಆತ್ಮಮಾತ್ರಾನುಭವ ದೋಷಗಳನ್ನೂ, ಅವಕ್ಕೆ ಪ್ರತಿದ್ವಂದ್ವಿಗಳಾದ ಭಗವದನುಭವದಗುಣಗಳನ್ನೂ ಕೂಡ, ಅಪೇಕ್ಷಿತವಾದ ಸಕಲಾರ್ಥಗಳ ಸಂಗ್ರಹರೂಪವಾದ ಮಂತ್ರ ರತ್ನದ ಮೂಲಕ ಚಿಂತಿಸಿ, ಪ್ರವೃತ್ತಿ ಧರ್ಮಗಳಿಂದ ನಿವೃತ್ತರಾಗಿ, ನಿವೃತ್ತಿಧರ್ಮದಲ್ಲಿ ಇಲ್ಲಿಯ ಅಧಿಕಾರಿಗಳು ತೊಡಗುತ್ತಾರೆ. ಮೇಲೆ ಹೇಳಿದ ಪ್ರಕಾರ ಪರಾವರ ತತ್ತ್ವಗಳನ್ನು ತಿಳಿದೂ, ವೈರಾಗ್ಯಪೂರ್ವಕವಾಗಿ ಪರಮ ಪುರುಷಾರ್ಥೋಪಾಯದ ಅನುಷ್ಠಾನದಲ್ಲಿ ತೊಡಗದಿದ್ದಲ್ಲಿ, "ಶಮಾರ್ಥಂ ಸರ್ವಶಾಸ್ತ್ರಾಣಿ ವಿಹಿತಾನಿ ಮನೀಷಿಭಿಃ । ತಸ್ಮಾತ್ ಸ ಸರ್ವಶಾಸ್ತ್ರಜ್ಞಃ ಯಸ್ಯಶಾನ್ತಂ ಮನಸ್ಸದಾ॥"—ಎಂದಿರುವಂತೆ ಶಾಸ್ತ್ರ ಜ್ಞಾನದ ಫಲಗಳಾದ ಶಾನ್ತಿ, ಶೀಲ, ವೃತ್ತಗಳಿಂದ ರಹಿತರಾಗಿ, "ನಾಚ್ಛಾದಯತಿ ಕೌಪೀನಂ ನದಂಶಮಶಕಾಪಹಂ। ಶುನಃಪುಚ್ಛ ಇವಾನರ್ಥಂ ಪಾಂಡಿತ್ಯಂ ಧರ್ಮವರ್ಜಿತಂ॥"—ಎಂದಿರುವ ಹಾಗೆ ಅವರ ಪಾಂಡಿತ್ಯವು ನಾಯಿ ಬಾಲದಂತೆ ಎಂಬುದಾಗಿ ಹಾಸ್ಯಾಸ್ಪದರಾಗುತ್ತಾರೆ. ಹಾಗಿಲ್ಲದೆ, ಯಾರು; "ವಯಸಃ ಕರ್ಮಣೋಽರ್ಥಸ್ಯ ಶ್ರುತಸ್ಯಾಭಿಜನಸ್ಯಚ"—ಎಂಬಂತೆ ಶಾಸ್ತ್ರ ಶ್ರವಣಕ್ಕೆ ಅನುರೂಪವಾದ ತಮಗೆ ಉಚಿತವಾದ ಪರಮ ಪುರುಷಾರ್ಥೋಪಾಯವನ್ನು ಅನುಷ್ಠಿಸಲು ಅತಿಶಯ ತ್ವರೆಯುಳ್ಳವರೋ, ಅವರು "ತನ್ಕರುಮಮ್‌ತಾಮ್‌ಶೆಯ್ಯ ಪಿರರುಕನ್ದಾರ್"—ಎಂಬಂತೆ "ತಂದೇವಾ ಬ್ರಾಹ್ಮಣಂ ವಿದುಃ।"—"ಪ್ರಣಮಂತಿ ದೇವತಾಃ"—"ಪಾರೋರ್‌ಪುಕಳ್"—ಎಂಬಂತೆ ತಮ್ಮ ಅನುಷ್ಠಾನದಿಂದ ಇತರರಿಗೂ ಸಂತೋಷವುಂಟು ಮಾಡುವವರಾಗಿ ಅತಿಶಯ ಸಮೃದ್ಧಿಯನ್ನೂ ಪಡೆಯುವರು. "ಸ ಮಹಾತ್ಮಾಸುದುರ್ಲಭಃ" —ಎಂದಿರುವಂತೆ, ಇಂತಹ ಮುಮುಕ್ಷುವಾದ ಅಧಿಕಾರಿ ಸುದುರ್ಲಭವೆನ್ನುವುದಕ್ಕಾಗಿ—

"ವಿಷಮಧುಬಹಿಷ್ಕುರ್ವನ್ ಧೀರೋ ಬಹಿರ್ವಿಷಯಾತ್ಮಕಂ,
ಪರಿಮಿತರಸಸ್ವಾತ್ಮಪ್ರಾಪ್ತಿಪ್ರಯಾಸಪರಾಙ್ಮುಖಃ ।
ನಿರವಧಿ ಮಹಾನನ್ದ ಬ್ರಹ್ಮಾನುಭೂತಿ ಕುತೂಹಲೀ
ಜಗತಿಭವಿತಾ ದೈವಾತ್ ಕಶ್ಚಿತ್ ಜಿಹಾಸಿತ ಸಂಸೃತಿಃ ॥"

—ಎಂಬುದಾಗಿ ಈ ಅಧಿಕಾರವನ್ನು ನಿಗಮಿಸಿದ್ದಾರೆ, ಆಚಾರ್ಯರು.

ಇಷ್ಟು ಕಾಲವೂ ಬರದಿದ್ದ ಸಂಸಾರವೈರಾಗ್ಯಾದಿಗಳೂ. ಇದಕ್ಕೆ ಮೂಲವಾದ ಸದಾಚಾರ್ಯಪ್ರಾಪ್ತ್ಯಾದಿಗಳೂ ಈಗ ಯಾವನಿಗಾದರೂ ಹೇಗೆ ಬಂದಾವು ?—ಬರುವುದಾದರೆ ಎಲ್ಲರಿಗೂ ಬರದಿರುವುದೇಕೆ ?— ಪ್ರಕೃತಿ ಪುರುಷಭೋಗಗಳಲ್ಲಿ ದುಃಖ ಮಿಶ್ರತ್ವ ಅಲ್ಪತ್ವಾದಿ ದೋಷಗಳಿದ್ದಾಗ್ಯೂ. ಸುಖ ರೂಪತ್ವವೂ ಇರುವುದರಿಂದ ಅವುಗಳ ಪ್ರಯುಕ್ತ ಅವು ಗ್ರಾಹ್ಯವಾಗವೋ ?—ಇತ್ಯಾದಿ ಶಂಕೆಗಳನ್ನು ಮೇಲಣ ಶ್ಲೋಕದಲ್ಲಿಯು. "ದೈವಾತ್"—ಮೊದಲಾದ ಪದಗಳಿಂದ ಪರಿಹರಿಸಿದ್ದಾರೆ. "ದೈವಾತ್"— ಎಂದರೆ ಯಾದೃಚ್ಛಿಕ ಸುಕೃತಾದಿ ಮೂಲಪೂವ ಜಾಯಮಾನ ಕಟಾಕ್ಷ ರೂಪ ಭಗವದನುಗ್ರಹ ವಿಶೇಷದಿಂದ ಎಂದರ್ಥ. ಈ ವಿಧವಾದ ಭಗವದನು ಗ್ರಹ ವಿಶೇಷವಿಲ್ಲದ್ದರಿಂದ ಎಲ್ಲರಿಗೂ ಇಷ್ಟು ಕಾಲ ಸಂಸಾರದಲ್ಲಿ ವೈರಾಗ್ಯಾದಿಗಳು ಹುಟ್ಟಲಿಲ್ಲವಾದರೂ, ಜಗತ್ತಿನಲ್ಲಿ ಯಾವನಾದರೂ ಒಬ್ಬನಿಗಾದರೂ ಒಂದು ಕಾಲ ವಿಶೇಷದಲ್ಲಿ ಈ ಅನುಗ್ರಹ ಸಂಭವವಾದ್ದರಿಂದ ಅವನಿಗೆ ಸಂಸಾರ ವೈರಾಗ್ಯಾದಿಗಳು ಉಂಟಾಗ ಬಹುದೆಂದು ಭಾವ.

## ೮. ಅಧಿಕಾರಿ ವಿಭಾಗಾಧಿಕಾರ

ಹೀಗೆ ನಿವೃತ್ತಿ ಧರ್ಮಗಳಾದ ಪರಮಪುರುಷಾರ್ಥೋಪಾಯಗಳಲ್ಲಿ ಪ್ರವೃತ್ತರಾದ ಅಧಿಕಾರಿಗಳು ಎರಡು ಬಗೆ — ಅವರು ಅದ್ವಾರಕ ಪ್ರಪತ್ತಿ ನಿಷ್ಠರು ಮತ್ತು ಸದ್ವಾರಕ ಪ್ರಪತ್ತಿ ನಿಷ್ಠರೆಂಬುವರು. ಇವರೊಳಗೆ ಅದ್ವಾರಕ ಪ್ರಪತ್ತಿನಿಷ್ಠರಾದವರು. ಮೋಕ್ಷಕ್ಕೆ ಭಕ್ತಿಯನ್ನು ದ್ವಾರವಾಗಿ ಮಾಡಿಕೊಳ್ಳದೆ ಸ್ವತಂತ್ರವಾಗಿ ಪ್ರಪತ್ತಿಯನ್ನು ಅನುಷ್ಠಿಸುತ್ತಾರೆ. ಸದ್ವಾರಕರಾದರೋ – ಮೋಕ್ಷಕ್ಕಾಗಿ ಭಕ್ತಿಯನ್ನು ಸ್ವೀಕರಿಸಿ. ಅದಕ್ಕೆ ಅಂಗವಾಗಿ ಪ್ರಪತ್ತಿಯನ್ನು ಅನುಷ್ಠಿಸುತ್ತಾರೆ. ಹೀಗೆ ಸ್ವತಂತ್ರ ಪ್ರಪತ್ತಿ – ಅಂಗ ಪ್ರಪತ್ತಿಗಳಿಂದ ಇವರಿಬ್ಬರೂ ಪ್ರಪನ್ನರೇ. ಕ್ರಮವಾಗಿ ಫಲಭಕ್ತಿ-ಸಾಧನ ಭಕ್ತಿಗಳಿಂದ ಇವರೀರ್ವರೂ ಭಕ್ತರೂ ಹೌದು.

ಅದ್ವಾರಕ ಪ್ರಪತ್ತಿ ನಿಷ್ಠರಲ್ಲಿ — ಸ್ವನಿಷ್ಠರು. ಉಕ್ತಿನಿಷ್ಠರು, ಆಚಾರ್ಯ ನಿಷ್ಠರೆಂಬುದಾಗಿ ಮೂರುವಿಧ ಅವಾಂತರ ಭೇದಗಳುಂಟು.

ಹೀಗೆ ವಿಶದಜ್ಞಾನದೊಡನೆಯೋ, ಸಮುದಾಯ ಜ್ಞಾನದೊಡನೆಯೋ ಅಂಗವಾಗಿಯೋ - ಸ್ವತಂತ್ರವಾಗಿಯೋ, ತಾವೇಯೋ - ಉಕ್ತಿನಿಷ್ಠೆ ಅಥವಾ

ಆಚಾರ್ಯ ನಿಷ್ಠೆಯಿಂದಲೋ ಮಾಡುವ ಪ್ರಪತ್ತಿಗಲ್ಲದೆ ಮತ್ತೆ ಯಾವುದಕ್ಕೂ ಸರ್ವೇಶ್ವರನು ಪರಮ ಪುರುಷಾರ್ಥವನ್ನು ಕೊಡನೆಂಬುದು ಶಾಸ್ತ್ರಸಿದ್ಧ ಭಾಗವತಾಭಿಮಾನ - ಭಗವದ್ದೇಶ ವಾಸಾದಿಗಳೂ ಕೂಡ ಉಪಾಸನ ಅಥವಾ ಪ್ರಪದನದಲ್ಲಿ ಪ್ರವರ್ತನಗೊಳಿಸುತ್ತವೆ. ನಿಷ್ಪನ್ನೋಪಾಸಕರಿಗೆ ಉತ್ತರೋತ್ತರ ಉಪಚಯವುಂಟುಮಾಡುತ್ತವೆ. ಸ್ವತಂತ್ರ ಪ್ರಪತ್ತಿ ನಿಷ್ಠರಿಗೆ ಕೈಂಕರ್ಯವನ್ನು ಉಪಚಯಗೊಳಿಸುತ್ತವೆ.

ಇವರೊಳಗೆ ವ್ಯಾಸಾದಿಗಳಂತೆ ಉಪಾಯಾಂತರ ಸಮರ್ಥರಾಗಿ ಸದ್ವಾರಕ ಪ್ರಪತ್ತಿ ನಿಷ್ಠರೂ, ಆಕಿಂಚನ್ಯರಹಿತರೂ, ವಿಳಂಬ ಕ್ಷಮರೂ, ಅನನ್ಯಗತಿಕತ್ವ ರಹಿತರೂ ಆದವರಿಗೆ ಯಥಾವತ್ತಾಗಿ – ನಿಷ್ಪನ್ನವೂ, ಅಂತಿಮ ಪ್ರತ್ಯಯದವರಿಗಿನದೂ ಆದ ಉಪಾಸನಕ್ಕೆ ಪ್ರಾರಬ್ಧ ಕರ್ಮಾವಸಾನದಲ್ಲಿ ಮೋಕ್ಷ. ಇವರು ಅನುಷ್ಠಿಸುವ ಪ್ರಪತ್ತಿಯು ಭಕ್ತಿಗೆ ಅಂಗವಾದ್ದರಿಂದ ಇದಕ್ಕೆ 'ಅಂಗ ಪ್ರಪತ್ತಿ' ಎಂದು ಹೆಸರು. ಇದಕ್ಕೆ ವ್ಯತಿರಿಕ್ತರಾದವರು ಅದ್ವಾರಕ ಅಥವಾ ಸ್ವತಂತ್ರಪ್ರಪತ್ತಿನಿಷ್ಠರು. ಇವರಿಗೆ ಸ್ವಪ್ರಯತ್ನ ಸಾಧ್ಯವಾದ ಅಂತಿಮ ಸ್ಮೃತಿಯ ಅಗತ್ಯವಿಲ್ಲ. ಅಂತಿಮ ಕಾಲದಲ್ಲಿ ಇವರನ್ನು ಸ್ಮರಿಸಿಕೊಳ್ಳುವ ಭಾರ ಈಶ್ವರನದು. ಇವರಿಗೆ ಕೋರಿದ ಕಾಲದಲ್ಲಿ ಮೋಕ್ಷವು ಸಿದ್ಧ,

ಸರ್ವಾಧಿಕಾರವೂ, ಸರ್ವಾನಿಷ್ಟ ನಿವರ್ತನಕ್ಷಮವೂ, ಸರ್ವೇಷ್ಟ ಸಾಧಕವೂ, ಸುಕರವೂ, ಸಕೃತ್ಕರ್ತವ್ಯವೂ, ಕ್ಷಣಕೃತ್ಯವೂ, ಪ್ರತಿಬಂಧಾನರ್ಹವೂ, ಬ್ರಹ್ಮಾಸ್ತ್ರ ನ್ಯಾಯದಿಂದ ಸಹಕಾರಿ ಪ್ರಯೋಗವೊಂದನ್ನೂ ಸಹಿಸದ್ದೂ ಆದ ಸ್ವತಂತ್ರ ಪ್ರಪತ್ತಿಯನ್ನು ಅನುಷ್ಠಿಸಿದವರಿಗಾದರೋ ಫಲದ ಬಗ್ಗೆ ಯಾವ ಪ್ರತಿಬಂಧಕವೂ ಇಲ್ಲದ್ದರಿಂದ, ಈ ದೇಹದಿಂದ ಆಗುವಷ್ಟು ಕೈಂಕರ್ಯಾನುಭವಕ್ಕಾಗಿ ತಾವಾಗಿ ಅನುಮತಿಸಿ ನಿಲ್ಲಿಸಿಕೊಂಡಿರುವ ಈ ದೇಹದ ಅವಸಾನದಲ್ಲಿ ಪರಿಪೂರ್ಣ ಕೈಂಕರ್ಯ ಪ್ರಾಪ್ತಿ ರೂಪವಾದ ಮೋಕ್ಷವೇ ಫಲ.

ಹೀಗೆ ಸದ್ವಾರಕ – ಅದ್ವಾರಕ ಪ್ರಪತ್ತಿನಿಷ್ಠರುಗಳಿಬ್ಬರಿಗೂ ಪ್ರಭೂತ ಭಗವತ್ಕೈಂಕರ್ಯಾಪೇಕ್ಷೆಯು ಸಮಾನವಾದಾಗ್ಯೂ, ಈಗಿನ ದೇಹದಿಂದ ಮಾಡುವ ಕೈಂಕರ್ಯ ವೈಷಮ್ಯವು ಇಚ್ಛಾವೈಷಮ್ಯ ಪ್ರಯುಕ್ತವಾದುದು. ಈ ವೈಷಮ್ಯಕ್ಕೆ ಪ್ರಾರಬ್ಧಸುಕೃತದಲ್ಲಿರುವ ವೈಷಮ್ಯವೇ ನಿಬಂಧನ. ಅಂತಿಮ ಶರೀರಾನಂತರ ಬರುವ ಫಲಪ್ರಾಪ್ತಿಯಲ್ಲಾದರೋ ಸ್ವಲ್ಪವೂ ವೈಷಮ್ಯವಿಲ್ಲ.

ಪ್ರಾರಬ್ಧಭಂಗಕಾಮನಿಗೆ ನ್ಯಾಸದಲ್ಲಿ (ಪ್ರಪತ್ತಿವಿದ್ಯೆ) ಅಧಿಕಾರ, ಪ್ರಾರಬ್ಧಾಂತದಲ್ಲಿ ಮೋಕ್ಷಕಾಮನಿಗೆ ಭಕ್ತಿಯೋಗದಲ್ಲಿ ಅಧಿಕಾರವೆಂದು ವ್ಯವಸ್ಥಿತವಾಗಿದೆ. ಈ ವಿಧವಾದ ಅಧಿಕಾರ ಭೇದವು ಸಂಭವಿಸುವುದಾದರೆ-ಯಲ್ಲವೇ ಈ ವ್ಯವಸ್ಥೆಯು ಸಿದ್ಧಿಸುವುದು ? ತತ್ವವಿತ್ತುಗಳೂ, ದೋಷ ಸಪ್ತಕಾದ್ಯನುಸಂಧಾನಧಿಂದ ವೈರಾಗ್ಯಾದಿಶಾಲಿಗಳೂ. ಮುಮುಕ್ಷುಗಳೂ ಆದ ಅಧಿಕಾರಿಗಳಲ್ಲಿ ಕೆಲವರಿಗೆ ಪ್ರಾರಬ್ಧನಿವೃತ್ತಿಕಾಮನೆಗೂ, ಕೆಲವರಿಗೆ ಅದಿಲ್ಲ-ದುದಕ್ಕೂ ನಿಯಾಮಕವುಂಟೋ ? ಈ ಇಚ್ಛಾವೈಷಮ್ಯಕ್ಕೆ ಅವರವರ ಅದೃಷ್ಟವೇ ನಿಯಾಮಕವೆಂದರೆ – ಮೋಕ್ಷೋಪಾಯಕ್ಕೆ ಅಧಿಕಾರಿಯಾಗಿಸಿದ ಈ ಅದೃಷ್ಟವು ಏಕರೂಪವಾದ ಇಚ್ಛೆಯನ್ನುಂಟುಮಾಡದೆ ಹೀಗೆ ವಿಚಿತ್ರವಾಗಿ ಉಂಟುಮಾಡುವುದೇಕೆ ? – ಎಂದರೆ, " ನಿಯತ್ಯಾವೈಯಾತ್ಯಾತ್ " – ಎಂದಿದ್ದಾರೆ (ವೈಯಾತ್ಯ = ಧಾರ್ಷ್ಟ್ಯ – ದೈವಸಾಮರ್ಥ್ಯ ಅಂತಹದೆಂದರ್ಥ) ಇದನ್ನು ಈ ಅಧಿಕಾರದ ಆರಂಭ ಶ್ಲೋಕದಲ್ಲಿಯೇ ' ಮುಮುಕ್ಷುತ್ವೇ ತುಲ್ಯೇ ಸತೀಚ ಮಧುವಿದ್ಯಾದಿಷು ಯಥಾ ವ್ಯವಸ್ಥಾ ಸಂಸಿಧ್ಯತ್ಯಧಿಕೃತಿವಿಶೇಷೇಣ ವಿದುಷಾಂ । ವಿಕಲ್ಪೇತ ನ್ಯಾಸೇ ಸ್ಥಿತಿರಿತರ ವಿದ್ಯಾಸು ಚ ತಥಾ ನಿಯತ್ಯಾ ವೈಯಾತ್ಯಂ ನಿಯಮಯಿತುಮೇವಂ ಪ್ರಭವತಿ ॥ ' — ಎಂಬ ಶ್ಲೋಕದಿಂದ ತಿಳಿಸಿದ್ದಾರೆ.

**ಆಶಂಕೆಗಳು ಮತ್ತು ಪರಿಹಾರ :**

ಇಲ್ಲಿ ಮುಮುಕ್ಷುತ್ವವೊಂದೇ ಅಧಿಕಾರವಲ್ಲವೇ ? ಇದರಲ್ಲಿ ಅಧಿಕಾರ ಭೇದವೆಂಬುದು ಹೇಗೆ ? — ಎಂದರೆ ಮುಮುಕ್ಷುತ್ವವು ಸಮಾನವಾದಾಗ್ಯೂ ಮಧುವಿದ್ಯಾ, ಸದ್ವಿದ್ಯಾದಿಗಳಲ್ಲಿ ವಸುತ್ವಾದಿ ಪ್ರಾಪ್ತಿ ಪೂರ್ವಕವಾದ ಬ್ರಹ್ಮ ಪ್ರಾಪ್ತೀಚ್ಛೆ. ಸಾಕ್ಷಾತ್ತಾಗಿಯೇ ಬ್ರಹ್ಮ ಪ್ರಾಪ್ತೀಚ್ಛೆಯೇ ಮೊದಲಾದ ಪ್ರಕಾರಭೇದದಿಂದ ಹೇಗೆ ಅಧಿಕಾರ ವ್ಯವಸ್ಥೆಯೋ, ಹಾಗೆಯೇ ನ್ಯಾಸವಿದ್ಯೆಯಲ್ಲಿ ಪ್ರಾರಬ್ಧಭಂಗಕಾಮನಿಗೆ ಅಧಿಕಾರ, ಪ್ರಾರಬ್ಧಾಂತದಲ್ಲಿ ಮೋಕ್ಷ ಕಾಮನೆ ಇರುವವನಿಗೆ ಭಕ್ತಿವಿದ್ಯೆಯಲ್ಲಿ ಅಧಿಕಾರ – ಎಂಬ ಪ್ರಕಾರ ಭೇದದಿಂದ ಅಧಿಕಾರ ಭೇದ ಸಿದ್ಧಿಸುತ್ತದೆಂದರ್ಥ. ಇದರಲ್ಲಿ ಮೊದಲನೆಯವನು ಅದ್ವಾರಕ ಪ್ರಪತ್ತಿನಿಷ್ಠ, ಎರಡನೆಯವನು ಸದ್ವಾರಕ ಪ್ರಪತ್ತಿನಿಷ್ಠ.

**ಆಚಾರ್ಯನಿಷ್ಠನ ಬಗ್ಗೆ ಆಶಂಕೆ :**

ಸ್ವಯತ್ನವಿಲ್ಲದಿರುವಲ್ಲಿ ಅನ್ಯರ ಯತ್ನ ಮಾತ್ರದಿಂದ ಅತಿಶಯಿತ ಫಲ ಸಿದ್ಧಿಸುವುದು ಲೋಕದಲ್ಲಿ ಕಾಣದುದರಿಂದ ಇದನ್ನು ಹೇಗೆ ನಂಬುವುದು ? ಇವನಿಗೆ ಫಲಸಿದ್ಧಿಯುಂಟೆಂಬುದಕ್ಕೆ ಸಂಪ್ರದಾಯವಾದರೂ ಉಂಟೋ ? ಎಂದರೆ "ಒಂದು ಬೆಟ್ಟದಿಂದ ಮತ್ತೊಂದು ಬೆಟ್ಟಕ್ಕೆ ಹಾರುವ ಸಿಂಹದ ಶರೀರದಲ್ಲಿರುವ ಜಂತುಗಳಿಗೆ ಹೇಗೋ ಹಾಗೆ, ಶ್ರೀ ಭಾಷ್ಯಕಾರರು ಸಂಸಾರವನ್ನು ದಾಟಿದರೆ, ಅವರೊಂದಿಗಿರುವ ಸಹಜ ಸಂಬಂಧದಿಂದ ನಾವೂ ಉತ್ತೀರ್ಣರಾಗುವೆವು" ಎಂದು ಶ್ರೀ ಮುದಲಿಯಾಂಡಾರ್ ಹೇಳಿರುವುದೇ ಇದಕ್ಕೆ ಸಂಪ್ರದಾಯವಾಗಿದೆ. ನಮ್ಮ ಅಪೇಕ್ಷಾದಿಗಳು ಅಪ್ರಯೋಜಕಗಳು. ಆಚಾರ್ಯ ಸಂಬಂಧವೇ ಪ್ರಧಾನ ಕಾರಣವೆನ್ನುವುದಕ್ಕಾಗಿ ಇಲ್ಲಿ ಸಿಂಹಶರೀರದಲ್ಲಿಯ ಜಂತುವಿನ ದೃಷ್ಟಾನ್ತ ಉಕ್ತವಾಗಿದೆ. ಆಗ ಆ ಸಿಂಹ ದೃಷಾನ್ತದಿಂದ ಆಚಾರ್ಯನಿಗೆ ಶಿಷ್ಯೋತ್ತಾರಣದ ಅಪೇಕ್ಷೆಯೂ ಬೇಕಿಲ್ಲದೆಯೇ ಶಿಷ್ಯನು ಉತ್ತೀರ್ಣನಾಗಬಹುದಲ್ಲವೇ ? – ಎಂಬ ಶಂಕೆಯುಂಟಾದರೆ ಆಚಾರ್ಯನಿಷ್ಠನಿಗೆ ಅನುರೂಪವಾದ ಲೋಕದೃಷ್ಟಿಯನ್ನು ತೋರಿಸುವುದರ ಮೂಲಕ ಈ ಶಂಕೆಯ ವಾರಣಕ್ಕಾಗಿ – 'ಅಂಧೋಽಸಂಧ ಗ್ರಹಣವಶ ಗೋ ಯಾತಿ ರಂಗೇಶ ಯದ್ವತ್, ಪಂಗುರ್ನೌಕಾ ಕುಹರ ನಿಹಿತೋ ನೀಯತೇ ನಾವಿಕೇನ । ಭುಂಕ್ತೇ ಭೋಗಾನವಿದಿತನೃಪಸ್ಸೇವಕಸ್ಯಾರ್ಭಕಾದಿಃ, ತ್ವತ್ಸಂಪ್ರಾಪ್ತೌ ಪ್ರ ಭ ವ ತಿ ತ ಥಾ ದೇಶಿಕೋ ಮೇ ದಯಾಳುಃ' – ಎಂಬ ಶ್ರೀನ್ಯಾಸತಿಲಕದಲ್ಲಿಯ ಶ್ಲೋಕವನ್ನು ಉದಾಹರಿಸಿದ್ದಾರೆ.

'ಅಂಧಾದಿಗಳಿಗೆ ಚಕ್ಷುರಾದಿಗಳಲ್ಲಿದಿದ್ದಾಗ್ಯೂ ಗಮನಾದಿ ಫಲಪ್ರಾಪ್ತಿ ಹೇಗೋ, ಹಾಗೆಯೇ ನನಗೆ ನಿನ್ನನ್ನು ಹೊಂದಲು ಅಪೇಕ್ಷೆಯಿದೆ. ಇದಕ್ಕೆ ಸಮರ್ಥನಾದವನು ಆಚಾರ್ಯ' — ಎಂಬುದು ಈ ಶ್ಲೋಕದ ವಾಕ್ಯಾರ್ಥ ಇದರಲ್ಲಿ, ಪ್ರಪತ್ತ್ಯನುಷ್ಠಾನಕ್ಕೆ ಉಪಯುಕ್ತವಾದ ಜ್ಞಾನವಿಲ್ಲದುದಕ್ಕೆ — "ಅಂಧೋಽನಂಧಗ್ರಹಣವಶಗೋ ಯಾತಿ ರಂಗೇಶಯದ್ವತ್" ಎಂಬುದು ದೃಷ್ಟಾಂತ. ಶಕ್ತಿಯಿಲ್ಲದುದಕ್ಕೆ – "ಪಂಗುರ್ನೌಕಾಕುಹರ ನಿಹಿತೋ ನೀಯತೇ ನಾವಿಕೇನ," — ಎಂಬುದು ದೃಷ್ಟಾಂತ. ಜ್ಞಾನ, ಶಕ್ತಿಗಳೆರಡೂ ಇಲ್ಲದಿದ್ದರೂ ಫಲಪ್ರಾಪ್ತಿಯುಂಟೆನ್ನುವುದಕ್ಕೆ, "ಭುಂಕ್ತೇಭೋಗಾನವಿದಿತ ನೃಪಃ

ಸೇವಕಸ್ಯ ಅರ್ಭಕಾದಿಃ," – ಎಂಬುದು ದೃಷ್ಟಾಂತ. ಪ್ರಥಮ ದೃಷ್ಟಾಂತಕ್ಕೆ ವಿಷಯ – ಆಚಾರ್ಯನಿಂದ ಅನುಷ್ಠಾನ ಮಾಡಿಸಲ್ಪಟ್ಟ ಪ್ರಪತ್ತಿನಿಷ್ಠರು (ಉಕ್ತಿ ನಿಷ್ಠರು). ದ್ವಿತೀಯ ದೃಷ್ಟಾಂತಕ್ಕೆ ವಿಷಯ – ತಮ್ಮ ಪ್ರಾರ್ಥನೆಯ ಮೇರೆ ಆಚಾರ್ಯನು ಅನುಷ್ಠಿಸಿದ ಪ್ರಪತ್ತಿಯಲ್ಲಿನಿಷ್ಠರು. ತೃತೀಯ ದೃಷ್ಟಾಂತಕ್ಕೆ ವಿಷಯ - ತಾನು ಅಪೇಕ್ಷಿಸದೆಯೇ ಕೃಪಾಮಾತ್ರದಿಂದ ಆಚಾರ್ಯನು ಅನುಷ್ಠಿಸಿದ ಪ್ರಪತ್ತಿಗೆ ವಿಷಯರಾದವರು. ಇಲ್ಲಿ ಅಂಧ - ಜ್ಞಾನ ಶೂನ್ಯ, ಪಂಗು – ಶಕ್ತಿ ಶೂನ್ಯ ಅರ್ಭಕ - ಜ್ಞಾನ ಶಕ್ತಿಗಳೆರಡೂ ಇಲ್ಲದವನು. ಅರ್ಭಕ ಎನ್ನುವುದಕ್ಕೆ ಮಗು–ಎಂದರ್ಥ.

ಸಾಧನವು ಗುಣವತ್ತಾಗಿದ್ದರೇಯೇ ಫಲ ಸಿದ್ಧಿಯೆಂಬ ನಿಯಮವನ್ನೂ, "ಶಾಸ್ತ್ರಫಲಂಪ್ರಯೋಕ್ತರಿ." ಎಂಬ ನ್ಯಾಯವನ್ನೂ ಬಿಟ್ಟು ಆಚಾರ್ಯ ನಿಷ್ಠೆಯನ್ನಾಗಲಿ ಉಕ್ತಿನಿಷ್ಠೆಯನ್ನಾಗಲಿ ಆಶ್ರಯಿಸುವುದೇಕೆ ? — ಎಂದಲ್ಲಿ, "ಏದೇನು ಮೊರು ಪ್ರಕಾರಮಾಹವುಮಾಂ, ಆರೇನು ಮೊರುವರ್ ಅನುಷ್ಠಿಕ್ಕವುಮಾಂ, ಪ್ರಪತ್ತಿಕ್ಕಲ್ಲದು ಸರ್ವೇಶ್ವರನ್ ಪರಮ ಪುರುಷಾರ್ಥಂಕೊಡುಕ್ಕ ವಿರಂಗಾನ್ ....." ಎಂದಿದ್ದಾರೆ. "ಮಾಮೇವಯೇ ಪ್ರಪದ್ಯನ್ತೇ......" "ಭಕ್ತ್ಯಾಪರಮಯಾವಾಪಿ ಪ್ರಪತ್ತ್ಯಾವಾ..." — ಇತ್ಯಾದಿಯಾದ ಭಗವದುಕ್ತಿಯಿಂದ, ಪ್ರಪತ್ತಿಯಿಲ್ಲದೆ ಅಕಿಂಚನನಿಗೆ ಸಿದ್ಧೋಪಾಯನು ಮೋಕ್ಷಕೊಡನು ಆದ್ದರಿಂದ "ಸೋಮಾಭಾವೇಚಪೂತೀಕಗ್ರಹಣಂ" ಎಂಬ ನ್ಯಾಯದಿಂದ ಸೋಮಲತೆಯಿಲ್ಲದಾಗ ಪೂತೀಕವೆಂಬ ದ್ರವ್ಯಕ್ಕೆ ಸೋಮಾಭಾವ ನ್ಯೂನತೆಯಿಲ್ಲದಂತೆ ಮೇಲೆ ಹೇಳಿರುವುದರಲ್ಲಿಯೂ ಕೂಡ ಪ್ರಪತ್ತಿಗೆ ನ್ಯೂನತೆಯಿರುವುದಿಲ್ಲ. ತಂದೆಯು ಮಗುವಿಗೆ ಅನುಷ್ಠಿಸಿದ ಜಾತೇಷ್ಟಿಯಂತೆ ಆಚಾರ್ಯನು ಶಿಷ್ಯನಿಗಾಗಿ ಅನುಷ್ಠಿಸಿದ ಪ್ರಪತ್ತಿಗೂ ಫಲಕ್ಕೆ ಕೊರತೆಯಿಲ್ಲವೆಂದು ಭಾವ.

ಇದಿರಲಿ. ಭಕ್ತಿಪ್ರಪತ್ತಿರೂಪವಲ್ಲದ ಭಾಗವತಾಭಿಮಾನಾದಿಗಳಿಗೂ, "ಪಶುರ್ಮನುಷ್ಯಃಪಕ್ಷೀವಾ ಯೇಚವೈಷ್ಣವ ಸಂಶ್ರಯಾಃ। ತೇನೈವ ತೇ ಪ್ರಯಾಸ್ಯನ್ತಿ ತದ್ವಿಷ್ಣೋಃ ಪರಮಂ ಪದಂ॥" —ಎಂಬ ವಚನದಿಂದ, ಮೋಕ್ಷೋಪಾಯತ್ವವನ್ನು ಹೇಳಿರುವುದು ಸರಿಯೋ ? – ಎಂದಲ್ಲಿ, ಭಾಗವತಾಭಿಮಾನ, ಭಗವದ್ದೇಶವಾಸಿತ್ವವೇ ಮೊದಲಾದುವು ಸ್ವತಃ ಉಪಾಯಗಳಲ್ಲದಿದ್ದರೂ, ಬೇರೊಂದು ಪ್ರಕಾರದಿಂದ ಭಕ್ತಿ ಪ್ರಪತ್ತಿರೂಪ ಉಪಾಯಗಳಲ್ಲಿ ಯಾವುದಾದರೊಂದಿಗೆ ಅವಕ್ಕೆ ಸಂಬಂಧವುಂಟು. ದ್ವಯೋಚ್ಚಾರಣಾ

ರೂಪವಾದ ಉಕ್ತ್ಯಾದಿಗಳಿಗೆ ಪ್ರಪತ್ತಿಗರ್ಭತ್ವವಿರುವುದರ ಕಾರಣದಿಂದ ಉಪಾಯ ಸಂಬಂಧ ವುಂಟಾಗುವುದು ಇದಕ್ಕೆ ನಿದರ್ಶನ. ಮೇಲೆ ಹೇಳಿರುವ, "ವೈಷ್ಣವಸಂಶ್ರಯಾಃ," —ಎಂಬುದಕ್ಕೆ ಭಾಗವತರಿಂದ ತನ್ನವರು - ಎಂದೆನಿಸಿ ಕೊಳ್ಳುವ ಅಭಿಮಾನಕ್ಕೆ ಪಾತ್ರರೆಂದರ್ಥ.

(i) ಭಕ್ತನಾದವನು ಪ್ರಪತ್ತಿಯನ್ನು ಆದರಿಸದಿದ್ದಲ್ಲಿ ಅವನಿಗೆ ಹಾನಿ ಯೇನು ? (ii) ಸದ್ವಾರಕ ಮತ್ತು ಅದ್ವಾರಕ ಪ್ರಪತ್ತಿ ನಿಷ್ಠರಿಬ್ಬರೂ ಏಕರೂಪವಾದ ಪ್ರಪತ್ತಿಯನ್ನೇ ಆದರಿಸುವಲ್ಲಿ ಅವರಲ್ಲಿ ಭೇದಸಿದ್ಧಿಸುವುದು ಹೇಗೆ ? (iii) ಪ್ರಪತ್ತಿಯನ್ನು ಅವಲಂಬಿಸಿದವನು ಮತ್ತೆ ಭಕ್ತಿಯನ್ನು ಪರಿಗ್ರಹಿಸುವುದೇಕೆ ? (iv) ಪ್ರಪತ್ತಿಯೊಂದನ್ನೇ ಅವಲಂಬಿಸಿದವನಿಗಿರುವ ಅತಿಶಯವೇನು ? —ಎಂದಲ್ಲಿ ಇವಕ್ಕೆ ಕ್ರಮದಿಂದ ಉತ್ತರ ಹೇಳುತ್ತಾರೆ ;—

"ಪ್ರಪನ್ನಾದನ್ಯೇಷಾಂ ನ ದಿಶತಿಮುಕುಂದೋ ನಿಜಪದಂ, ಪ್ರಪನ್ನಶ್ಚ ದ್ವೇಧಾ ಸುಚರಿತ ಪರೀಪಾಕಭಿದಯಾ । ವಿಳಂಬೇನ ಪ್ರಾಪ್ತಿರ್ಭಜನಸುಖ ಮೇಕಸ್ಯ ವಿಪುಲಂ, ಪರಸ್ಯಾಶುಪ್ರಾಪ್ತಿಃ ಪರಿಮಿತರಸಾ ಜೀವಿತದಶಾ ॥" — ಎಂಬುದಾಗಿ. (i) ವಿಘ್ನಕಾರಿಯಾದ ಭಗವನ್ಮಾಯೆ ಪ್ರಬಲವಾದುದರಿಂದ ಅದರ ಉತ್ತರಣಕ್ಕಾಗಿ, "ಮಾಮೇವಯೇ ಪ್ರಪದ್ಯಂತೇ ಮಾಯಾಮೇತಾಂ ತರನ್ತಿ ತೇ," — ಎಂಬ ಭಗವದುಕ್ತಿಯ ಪ್ರಕಾರ, ಭಕ್ತನು ಪ್ರಪತ್ತಿಮಾಡದಿದ್ದಲ್ಲಿ ಅವನಿಗೆ ಮುಕುಂದನು ವೈಕುಂಠವನ್ನು ಕೊಡನು. (ii) ಪ್ರಪನ್ನನು ಸದ್ವಾರಕ-ಅದ್ವಾರಕನೆಂದು ದ್ವಿವಿಧ. (ಅಂದರೆ, ವಿಳಂಬಕ್ಷಮ-ಅವಿಳಂಬಕ್ಷಮ ಎಂದು ದ್ವಿವಿಧವೆಂದರ್ಥ.) ಸುಚರಿತದ ಅತ್ಯಂತ ಪರಿಪಾಕದಿಂದ ಪ್ರಪನ್ನನಾದವನು ಅದ್ವಾರಕ ಪ್ರಪನ್ನ. ಇವನಿಗೆ ಬೇಗ ಭಗವತ್ಪ್ರಾಪ್ತಿ. ಅದಿಲ್ಲದವನು ಸದ್ವಾರಕ ಪ್ರಪನ್ನ. ಇವನಿಗೆ ಪ್ರಾಪ್ತಿ ವಿಳಂಬಿತವಾಗುವುದರಿಂದ ಇವರಿಬ್ಬರ ಪ್ರಪತ್ತಿಯೂ ಏಕರೂಪವಾಗಿಲ್ಲವಾಗಿ ಭೇದಸಿದ್ಧಿಯುಂಟು. ಸದ್ವಾರಕನ ಗುರೂಪಾಯದಲ್ಲಿ ಪ್ರವೃತ್ತಿಯೂ ಸುಕೃತಮೂಲವೇ ಆದ್ದರೂ, ನಾನಾವಿಧ ಪ್ರವೃತ್ತಿ ಧರ್ಮಕ್ಕೆ ಪ್ರಾಪಕವಾದ ಸುಕೃತಗಳಲ್ಲಿ ಹೇಗೋ ಹಾಗೇ, ಮೋಕ್ಷೋ ಪಾಯಕ್ಕೆ ಪ್ರಾಪಕವಾದ ಸುಕೃತಗಳಲ್ಲಿಯೂ ಪ್ರಶ್ನಿಸಕೂಡದ್ದಾದ ಪರಿಪಾಕ ವೈಚಿತ್ರ್ಯವು ಸಂಭವಿಸುವಲ್ಲಿ ದೋಷವಿಲ್ಲ. (iii) ಪ್ರಪತ್ತಿಯನ್ನುಅ ವಲಂಬಿಸಿದ ಸದ್ವಾರಕನು ಮತ್ತೆ ಭಕ್ತಿಯನ್ನು ಪರಿಗಹಿಸುವುದು ವಿಪುಲವಾದ ಭಜನಸುಖ

ಕ್ಕಾಗಿ. (iv) ಪ್ರಪತ್ತಿಯೊಂದನ್ನೇ ಅವಲಂಬಿಸಿದ ಅದ್ವಾರಕನಿಗೆ ಇರುವ ಅತಿಶಯ - ಪರಿಪೂರ್ಣಬ್ರಹ್ಮಾನು ಭವಾತ್ಮಿಕವಾದ ಮುಕ್ತಿಯು ಬೇಗಲಭಿಸುವುದು. ಇವನಿಗೆ ಜೀವಿತ ದಶೆಯಲ್ಲಿಯು ರಸವು ಪರಿಮಿತವಾದರೂ, ಅದು ಇವನನ್ನು ಪ್ರಯೋಜನಾಂತರರಹಿತನನ್ನಾಗಿ ಮಾಡುವ ಭಗವತ್ಕೃಪೆಯ ಕಾರ್ಯವೇ ಆದುದರಿಂದ ಅತಿಶಯ ರೂಪವೇ ಸರಿ. ಸದ್ವಾರಕ ಪಪನ್ನನ ಬ್ರಹ್ಮಾನುಭವ ಭೋಗವೂ ಸಾಂಸಾರಿಕವಾದುದರಿಂದ ಅದಕ್ಕಿಂತ ಅದ್ವಾರಕ ಪ್ರಪನ್ನನು ಸರ್ವಥಾ ಶ್ರೇಷ್ಠನೆಂದು ಭಾವ.

## ೯. ಉಪಾಯವಿಭಾಗಾಧಿಕಾರ

ಮೇಲೆ ಹೇಳಿದ ಅಧಿಕಾರಭೇದವು ಪ್ರತಿಷ್ಠಿತವಾಗುವುದಕ್ಕಾಗಿ,

"ಉಪಾಯಃ ಸ್ವಪ್ರಾಪ್ತೇರುಪನಿಷದಧೀತ ಸ್ಸಭಗವಾನ್
ಪ್ರಸತ್ತ್ಯೈ ತಸ್ಯೋಕ್ತೇ ಪ್ರಪದನ ನಿದಿಧ್ಯಾಸನ ಸ್ಮೃತೀ ।
ತದಾರೋಹಃ ಪುಂಸಃ ಸುಕೃತಪರಿಪಾಕೇನ ಮಹತಾ
ನಿದಾನಂ ತತ್ರಾಪಿ ಸ್ವಯಮಖಿಲ ನಿರ್ಮಾಣನಿಪುಣಃ ॥"

—ಎಂಬುದಾಗಿ ಉಪಾಯ ಭೇದವು ನಿರೂಪಿಸಲ್ಪಡುತ್ತೆ. ಈ ಎರಡು ವಿಧವಾದ ಅಧಿಕಾರಿಗಳಿಗೂ ಅನುಷ್ಠೇಯವಾದ ಉಪಾಯವು ಜ್ಞಾನ ವಿಕಾಸ ವಿಶೇಷ. ಈ ಉಪಾಯದಿಂದ ಸಾಧ್ಯವಾದುದು ಉಪೇಯ. ಇದೂ ಒಂದು ಜ್ಞಾನ ವಿಕಾಸ ವಿಶೇಷ - ಇದರಲ್ಲಿ ಉಪಾಯವಾದ ಜ್ಞಾನ ವಿಕಾಸ ವಿಶೇಷವು ಕರಣಸಾಪೇಕ್ಷವೂ, ಶಾಸ್ತ್ರವಿಹಿತವೂ. ಸತ್ಯತ್ವ, ಜ್ಞಾನತ್ವ, ಆನಂದತ್ವ, ಅಪರಿಚ್ಛಿನ್ನತ್ವ, ಅಮಲತ್ವಗಳಾದ ಭಗವತ್ಸರೂಪ ನಿರೂಪಕ ಧರ್ಮಗಳೊಡಗೂಡಿದ್ದೂ ಆದುದು. ಆಯಾ ವಿದ್ಯಾ ವಿಶೇಷ ಪ್ರತಿನಿಯತ ಗುಣಾದಿಗಳಿಂದ ಬ್ರಹ್ಮವೇ ಇದಕ್ಕೆ ವಿಷಯ. ಉಪೇಯವಾದ ಜ್ಞಾನವಿಕಾಸ ವಿಶೇಷವು ಕರಣ ನಿರಪೇಕ್ಷ ಮತ್ತು ಸ್ವಭಾವಪ್ರಾಪ್ತ. ಗುಣ ವಿಭೂತ್ಯಾದಿಗಳೆಲ್ಲ ವರಿಂದಲೂ ಪರಿಪೂರ್ಣವಾದ ಪರಬ್ರಹ್ಮವೇ ಇದಕ್ಕೆ ವಿಷಯ. ತತ್ಕ್ರತು ನ್ಯಾಯದಿಂದ ಆಯಾ ವಿದ್ಯಾ ವಿಶೇಷಗಳಲ್ಲಿ ಹೇಳಿದ ಗುಣಗಳಿಂದ ನಿಯುತವಾದ ಬ್ರಹ್ಮವಷ್ಟೇ ಅಲ್ಲವೇ ಪ್ರಾಪ್ತವಾಗಬೇಕು ? ಪರಿಪೂರ್ಣ ಗುಣಗಳಿಂದ ಕೂಡಿದ ಬ್ರಹ್ಮ ಪ್ರಾಪ್ತವಾಗುವುದು ಹೇಗೆ ? — ಎಂದರೆ

'ಉಪಾಸಿತ ಗುಣಾದೇರ್ಯಾ ಪ್ರಾಪ್ತಾವಪ್ಯ ಬಹಿಷ್ಕ್ರಿಯಾ । ಸಾ ತತ್ಕ್ರತು ನಯಗ್ರಾಹ್ಯಾ ನಾಕಾರಾಂತರ ವರ್ಜನಂ ॥' ಎಂಬಂತೆ, ತತ್ಕ್ರತು ನ್ಯಾಯಕ್ಕೆ ಉಪಾಸನಕ್ಕೆ ವಿಷಯವಾದ ಗುಣಾದಿಗಳ ಅವರ್ಜನವೇ ಫಲ. ಉಪಾಸಿಸದ ಗುಣಗಳ ಅನುಭವ ಫಲವಲ್ಲ. ಆದರೂ ಫಲದಶೆಯಲ್ಲಿ ಎಲ್ಲಾ ಗುಣಗಳ ಅನುಭವಕ್ಕೆ ಇದರಿಂದ ಅಡ್ಡಿಯಿಲ್ಲ. 'ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ" —ಎಂದು ಶ್ರುತಿಯಿದೆ. ಅಯೋಗವ್ಯವಚ್ಛೇದವು ಮಾತ್ರ ಇಲ್ಲಿ ವಿವಕ್ಷಿತ. ಅಂದರೆ, ಉಪಾಸಿಸಿದ ಗುಣಗಳು ಫಲದಶೆಯಲ್ಲಿಯೂ ಬಂದೇ ಬರುವುದು - ಎಂದರ್ಥ.

ಪ್ರಾಪ್ತಿರೂಪವಾದ ಈ ಬ್ರಹ್ಮಾನುಭವದ ಪರೀವಾಹವು ಪ್ರಾಪ್ತ್ಯವಾದವನನ್ನು ಈ ಬ್ರಹ್ಮದ ಕೈಂಕರ್ಯದಲ್ಲಿ ಇಳಿಸುವುದು. ಆದ್ದರಿಂದ ಕೈಂಕರ್ಯವೂ ಪ್ರಾಪ್ಯ ಈ ಉಪಾಯ ರೂಪವೂ ಪ್ರಾಪ್ಯ ರೂಪವೂ ಆದ ಜ್ಞಾನಕ್ಕೆ ವಿಷಯವಾಗಿ ಫಲಪ್ರದನೂ ಪರಮ ಭೋಗ್ಯನೂ ಆದುದರಿಂದ ಈಶ್ವರ ಉಪಾಯ-ಉಪೇಯ [ಪ್ರಾಪಕ ಪ್ರಾಪ್ಯ] ಎರಡೂ ಆಗಿದ್ದಾನೆ. ಉಪಾಯನಾಗಿರುವುದರಿಂದ, ಅದ್ವಾರಕ ಪ್ರಪತ್ತಿ ನಿಷ್ಠನ ವಿಷಯದಲ್ಲಿ ಉಪಾಯಾಂತರ ಸ್ಥಾನದಲ್ಲಿಯೂ ತಾನೇ ನಿಂತು ರಕ್ಷಿಸುವನು. ಸದ್ವಾರಕ ಪ್ರಪತ್ತಿನಿಷ್ಠನ ವಿಷಯದಲ್ಲಿಯೂ ಪ್ರಪತ್ತಿವಶೀಕೃತನಾದ ಈಶ್ವರನು ಕರ್ಮಯೋಗಾರಂಭದಿಂದ ಹಿಡಿದು ಉಪಾಯ ಪೂರ್ತಿಯಾಗುವವರಿಗಿನ ಕರ್ತವ್ಯಗಳಲ್ಲಿ ಅತ್ಯಂತಾಶಕ್ಯವಾದ ಉಪಾಯಾಂತರ ಸ್ಥಾನಗಳಗಲ್ಲಿ ತಾನೇ ನಿಂತು ಪಾಪನಿವೃತ್ತಿ - ಸತ್ತ್ವೋನ್ಮೇಷಗಳನ್ನು ಉಂಟುಮಾಡಿ ಉಪಾಸನವನ್ನು ಫಲಪರ್ಯಂತವಾಗಿಸುವನು.

ಕರ್ಮಯೋಗವೆಂಬುದು—ಶಾಸ್ತ್ರದಿಂದ ಜೀವ-ಪರಮಾತ್ಮರ ಯಥಾವತ್ತಾದ ಜ್ಞಾನ ಹುಟ್ಟಿದರೆ, ಭಗವಂತನ ಪ್ರೀತಿಗಾಗಿ ಮಾತ್ರವೇ ತನಗೆ ಶಕ್ಯಗಳಾಗಿ ಫಲಸಂಗಾದಿರಹಿತವಾದ ಕಾಮ್ಯಕರ್ಮ ಗಳೊಡನೆಯೂ ನಿತ್ಯನೈಮಿತ್ತಿಕ ಕರ್ಮಗಳೊಡನೆಯೂ ನಿಯಮದಿಂದ ಪರಿಗ್ರಹಿಸಿ ನಡೆಸುವ ಕರ್ಮವಿಶೇಷ. ಇದರಲ್ಲಿಯ ಅವಾಂತರ ಭೇದಗಳು ಶ್ರೀಗೀತೆಯ ನಾಲ್ಕನೇ ಅಧ್ಯಾಯದಲ್ಲಿ, "ದೈವಮೇವಾಪರೇ ಯಜ್ಞಂ..." – ಇತ್ಯಾದಿಯಿಂದ ಹೇಳಲ್ಪಟ್ಟ ದೇವಾರ್ಚನ, ತಪಸ್ತೀರ್ಥ, ದಾನ, ಯಜ್ಞಾದಿಗಳು. ಅಧಿಕಾರಿ ಭೇದದಿಂದ ಪ್ರಪತ್ತಿಯು ಭಕ್ತಿಯ ಮೂಲಕವೂ, ನೇರವಾಗಿಯೂ

ಮೋಕ್ಷಕ್ಕೆ ಹೇತುವಾಗುವಂತೆ, ಈ ಕರ್ಮಯೋಗವೂ ಜ್ಞಾನಯೋಗದ ಮೂಲಕವೂ ನೇರವಾಗಿಯೂ ಯಮ, ನಿಯಮಾಸನಾದಿ ಪರಿಕರವುಳ್ಳ ಯೋಗದಿಂದ ಆತ್ಮಾವಲೋಕನ (ಸ್ವಸ್ವರೂಪಸಾಕ್ಷಾತ್ಕಾರ)ಕ್ಕೆ ಸಾಧನವಾಗುವುದು.

ಜ್ಞಾನಯೋಗವೆಂಬುದು – ಕರ್ಮಯೋಗದಿಂದ ಅಂತಃಕರಣವನ್ನು ಜಯಿಸಿದವನು ಪ್ರಕೃತ್ಯಾದಿ ವಿಲಕ್ಷಣವೂ, ಆಧೇಯತ್ವ - ವಿಧೇಯತ್ವ - ಶೇಷತ್ವಗಳಿಂದ ಪರಬ್ರಹ್ಮಕ್ಕೆ ಶರೀರವಾಗಿದ್ದುಕೊಂಡು ಅದಕ್ಕೆ ವಿಶೇಷಣವೂ ಆದ ಸ್ವಸ್ವರೂಪವನ್ನು ನಿರಂತರ ಧ್ಯಾನಿಸುವುದು.

ಹೀಗೆ ಕರ್ಮಯೋಗ - ಜ್ಞಾನಯೋಗಗಳಿಂದ ಸ್ವಸ್ವರೂಪ ಸಾಕ್ಷಾತ್ಕಾರವುಂಟಾದರೆ, ಶಬ್ದಾದಿ ವಿಷಯಗಳ ಸುಖದಲ್ಲಿ ವೈರಾಗ್ಯವುಂಟುಮಾಡುವ ಆತ್ಮಾನುಭವ ಸುಖವೆಂಬ ಆಕರ್ಷಕದಲ್ಲಿಯೇ ಪರ್ಯವಸಾನಹೊಂದದಿದ್ದಲ್ಲಿ, ರತ್ನವನ್ನೊಳಗೊಂಡ ಸೂಕ್ಷ್ಮವಸ್ತ್ರಗ್ರಂಥಿಯನ್ನು ಕಂಡಂತೆ, ಅಂತರ್ಯಾಮಿಯನ್ನೊಳಗೊಂಡು ಅವನಶರೀರವಾದ ಸ್ವಸ್ವರೂಪ ದರ್ಶನವು ಆ ಅಂತರ್ಯಾಮಿಯನ್ನು ನೋಡುವುದಕ್ಕೆ ಉಪಯುಕ್ತವಾಗಿದ್ದುಕೊಂಡು ಭಕ್ತಿಯೋಗಕ್ಕೆ ಅಧಿಕಾರ ಕೋಟಿಯಲ್ಲಿ ಈ ಯೋಗಿಯನ್ನು ಪರಿಸುವುದು.

ಭಕ್ತಿಯೋಗವೆಂಬುದು—ಅನನ್ಯನಿಷ್ಠನೂ, ಅನನ್ಯಾಧೀನನೂ, ಅನನ್ಯಶೇಷಭೂತನೂ ಆದ ಭಗವಂತನ ಸ್ವರೂಪಾದಿಗಳನ್ನು ನಿರತಿಶಯ ಪ್ರೀತಿಯಿಂದ ಧ್ಯಾನಿಸುವುದು. ಈ ಧ್ಯಾನವು ತೈಲದ ಧಾರೆಯಂತೆ ನಿರಂತರ ಸ್ಮೃತಿ ಸಂತತಿ ರೂಪವಾಗಿ ಭಗವತ್ಸರೂಪಾದಿಗಳನ್ನು ಕಣ್ಣೆದುರಿಗಿರುವಂತೆ ವಿಶದವಾಗಿ ಕಾಣಿಸತಕ್ಕದ್ದಾಗಬೇಕು. ಪರಮಪದಕ್ಕೆ ಹೊರಡುವವರೆಗೂ ನಿತ್ಯವೂ ಇದನ್ನು ಅನುಷ್ಠಿಸುತ್ತಾ ದಿನದಿನವೂ ಇದು ಮೇಲೆ ಮೇಲೆ ವೃದ್ಧಿಹೊಂದತಕ್ಕದ್ದಾಗಬೇಕು. ಇಂತಹ ಅಂತಿಮಸ್ಮೃತಿ ಪರ್ಯಂತವಾದ ಜ್ಞಾನ ಸಂತತಿ ವಿಶೇಷವೇ ಭಕ್ತಿಯೋಗ. ವಾಕ್ಕು ನಿಂತುಹೋದ ಮೇಲೆ, ಅದರೊಡನೆ ಕೂಡಿದ ಮನಸ್ಸೂ ಪ್ರಾಣದಲ್ಲಿ ಸೇರಿಕೊಳ್ಳುವುದಕ್ಕೆ ಮುಂಚೆ ಬರುವ ಭಗವದ್ವಿಷಯವಾದ ಜ್ಞಾನವು ಅಂತಿಮಸ್ಮೃತಿಯೆನಿಸುವುದು.

ವರ್ಣಾಶ್ರಮ ಧರ್ಮಗಳ ಅನುಷ್ಠಾನವು - ಮೇಲೆ ಹೇಳಿದ ಪ್ರತ್ಯಕ್ಷ ಸಮಾನಾಕಾರವಾದ ಜ್ಞಾನದ ವಿಕಾಸಕ್ಕೆ ಹೇತುವಾದ ಸತ್ತ್ವವಿವೃದ್ಧಿಗೆ

ಅಡ್ಡಿ ಬರುವ ರಜಸ್ತಮಸ್ಸುಗಳಿಗೆ ಮೂಲವಾದ ಪಾಪಗಳನ್ನು ಹೋಗಲಾಡಿಸಿ ಕೊಂಡು ಅನುಗ್ರಾಹಕವಾಗಿರುವುದು.

ಇಂತಹ ಲಕ್ಷಣವುಳ್ಳ ಭಕ್ತಿಯೋಗದಿಂದ ಸಂಸಾರಿಯಾವಯಾವನೂ ಮುಕ್ತನಾದುದನ್ನು ಕಣ್ಣಾರೆ ಕಾಣದುದರಿಂದ, ಮಂದವಿಶ್ವಾಸವುಳ್ಳವರಿಗೆ, ಇದು ಮೋಕ್ಷಸಾಧನವೆಂಬುದರಲ್ಲಿ ಸಂಶಯ ಹುಟ್ಟಬಹುದೆಂದು, ಆ ಸಂಶಯ ಹೋಗಿ ಇದರಲ್ಲಿ ನಂಬಿಕೆ ಹುಟ್ಟುವುದಕ್ಕಾಗಿ— "ಚತುರ್ವಿಧಾ ಭಜನ್ತೇಮಾಂ ಜನಾಃ ಸುಕೃತಿನೋಽರ್ಜುನ । ಆರ್ತೋಜಿಜ್ಞಾಸು ರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥", —ಇತ್ಯಾದಿಯಿಂದ ಭಕ್ತಿಯೋಗವು ಫಲಾಂತರಗಳಿಗೂ ಸಾಧನ ವಾಗಿ ವಿಹಿತವಾಗಿದೆ.

ಮೋಕ್ಷಕ್ಕೆ ಉಪಾಯವಾಗಿ ವಿಹಿತವಾದ ಇಂತಹ ಭಕ್ತಿಯೋಗವು ಪರಭಕ್ತಿಯೆನಿಸಿದೆ. ಇದಕ್ಕೆ ಹೇತುವಾಗಿ ಸಾತ್ವಿಕ ವಿಮರ್ಶನಾದಿಗಳಿಂದ ಜನ್ಯವಾದ ಭಗವದ್ವಿಷಯಕ ಪ್ರೀತಿ ವಿಶೇಷವು ಸರ್ವೇಶ್ವರನನ್ನು ವಿಶದವಾಗಿ ಅರಿಯಬೇಕೆಂಬ ಉತ್ಕಟವಾದ ಇಚ್ಛೆಗೆ ಕಾರಣವಾದ್ದರಿಂದ ಭಕ್ತಿಯೆನಿಸಿದೆ. ಇದರಿಂದುಂಟಾದ ಪರಭಕ್ತಿಯು ಸರ್ವೇಶ್ವರನ ಸಾಕ್ಷಾತ್ಕಾರದಲ್ಲಿ ಉತ್ಕಟ ವಾದ ಇಚ್ಛೆಯನ್ನು ಹುಟ್ಟಿಸಿ, "ಯೋಗೇಶ್ವರ ತತೋ ಮೇತ್ವಂ ದರ್ಶಯಾ ತ್ಮಾನಮವ್ಯಯಂ ॥" —"ಕಾಣುಮಾರರುಳಾಯ್," (ಕಾಣುಮಾರು = ಕಾಣು ವಂತೆ, ಅರುಳಾಯ್= ಕೃಪೆಮಾಡಬೇಕು) - "ಒರುನಾಳ್‌ಕಾಣವಾರಾಯೇ.' = (ಕಾಣುವಹಾಗೆ ಬಂದು ಕೃಪೆಮಾಡಬೇಕು) - ಎಂದು ಕೂಗಿಡುವಂತೆ ಮಾಡಿ ಇದರಿಂದುಂಟಾದ ಭಗವತ್ಪ್ರಸಾದ ವಿಶೇಷದಿಂದ ತಾತ್ಕಾಲಿಕವಾಗಿ ಪರಿಪೂರ್ಣ ಸಾಕ್ಷಾತ್ಕಾರವನ್ನು ಉಂಟುಮಾಡುವುದು. ಈ ಸಾಕ್ಷಾತ್ಕಾರವೇಪರ ಜ್ಞಾನವೆನಿಸುವುದು.

ಹೀಗೆ ನಿರತಿಶಯ ಭೋಗ್ಯರೂಪವಾದ ಭಗವತ್ಸ್ವರೂಪವು ಸಾಕ್ಷಾತ್ಕಾರ ವಾದನಂತರ ಉಂಟಾಗುವ ಪ್ರೀತ್ಯತಿಶಯವು ಪರಮಭಕ್ತಿ. ಇದು ಪರಿ ಪೂರ್ಣ ಬ್ರಹ್ಮಾನುಭವದಲ್ಲಿ ಕಾಲಸಂಕೋಚವಿಲ್ಲದೆ ಅನುಭವಿಸದಿದ್ದಲ್ಲಿ ಧರಿಸ ಲಾಗದ ತೀವ್ರ ಅಭಿನಿವೇಶವನ್ನು ಹುಟ್ಟಿಸಿ "ಮುನಿಯೇನಾನ್ಮುಹನೇ..."— ಎಂಬಲ್ಲಿಯಂತೆ ಒಡನೆಯೇ ಮೋಕ್ಷವನ್ನು ಕೊಡಲು ಭಗವಂತನನ್ನು ತ್ವರೆ ಗೊಳಿಸಿ, " ವಾಶಂ ಶೆಯ್‌ ಪೂಝ್ಹ್ಕುಳಲಾಳ್ ತಿರುವಾಣ್ಯೆ ..." —ಎಂಬಂತೆ

ಹೇಗೂ ಮೀರದಿರಲೆಂದು ಅವನ ಮೇಲೆ ಮಾತ್ರವೇ ಅಲ್ಲದೆ ಲಕ್ಷ್ಮಿಯ ಮೇಲೆಯೂ "ಇನಿನಾನ್ ಪೋಕಲೊಟ್ಟೇನ್..." —"ಮಾಯಂ ಶೆಯ್ಯೇಲೆ ನ್ನೈಯೇ..." —ಎಂಬಂತೆ ಅಲ್ಲಿಂದ ಹೋಗಗೊಡಿಸದ ಹಾಗೆ ನಿರ್ಬಂಧಿಸಿ ಕೂಗಿಡುವುದರಿಂದ, "ಅಪಾವತ್ತು ವೀಡು ಪೆತ್ತು..." —ಎಂಬಂತೆ ಕೈಂಕರ್ಯ ರೂಪಪರ್ಯಂತವಾದ ಭೋಗರೂಪ ಸಾಕ್ಷಾತ್ಕಾರದ ಅನುವೃತ್ತಿಯಲ್ಲಿ ಇವನ ತ್ರೀವ್ರ ತೃಷ್ಣೆಯು ಬೇಗ ಶಮನಾಗುವಹಾಗೆ ಮಾಡುವುದು.

ಇಲ್ಲಿಯ ಕಾರಣಕ್ರಮ ;—ಮೊದಲು ಸಾತ್ವಿಕಸಹವಾಸಾದಿಯಿಂದ ಭಗವಂತನಲ್ಲಿ ಪ್ರೀತಿ – ತರುವಾಯ ಶಾಸ್ತ್ರತಃ ತಿಳಿಯಲಿಚ್ಛೆ, – ಅನಂತರ ಶಾಸ್ತ್ರ ಜನಿತವಾದ ತತ್ತ್ವಜ್ಞಾನ - ಬಳಿಕ ಕರ್ಮಯೋಗಾದಿ ದ್ವಾರಾ ಉಪಾಯ ಭಕ್ತಿ, - ಅನಂತರ ಸಾಕ್ಷಾತ್ಕಾರದಲ್ಲಿ ಇಚ್ಛೆ - ಅದಾದನಂತರ, ಸಾಕ್ಷಾತ್ಕಾರ - ಅನಂತರ, ನಿರಂತರಾನುಭವದಲ್ಲಿ ಇಚ್ಛೆಯುಳ್ಳ ಪರಮಭಕ್ತಿ - ಅನಂತರ ಪ್ರಾಪ್ತಿಯಲ್ಲಿ ಅಭಿನಿವೇಶ - ಆಮೇಲೆ ಭಗವತ್ಪ್ರಸಾದದಿಂದ ಅವನಪ್ರಾಪ್ತಿ. "ಪರಭಕ್ತಿಃ ಪುರಾದೃಷ್ಟ ಪ್ರತ್ಯಕ್ಷಾಭಿನಿವೇಶನಂ । ಪರಜ್ಞಾನಂ ತುತಸ್ಯೈವ ಸಾಕ್ಷಾತ್ಕಾರಃ ಪರಿಸ್ಫುಟಃ ॥ ಪುನರ್ವಿಶ್ಲೇಷಭೀರುತ್ವಂ ಪರಮಾಭಕ್ತಿರುಚ್ಯತೇ॥" —ಎಂಬುದು ಪರಭಕ್ತಿ, ಪರಜ್ಞಾನ - ಪರಮಭಕ್ತಿಗಳ ನಿಷ್ಕೃಷ್ಟ ಲಕ್ಷಣ. ಪರಭಕ್ತಿ - ಪರಜ್ಞಾನಗಳಿಗೆ ಸಮೀಚೀನ ಲೌಕಿಕ ನಿದರ್ಶನವನ್ನು ಕೆಳಗಿನ ಶ್ಲೋಕದ ಮೊದಲೆರಡು ಪಾದಗಳಲ್ಲಿಯೂ, ಪರಮ ಭಕ್ತಿಗೆ ಉತ್ತರಾರ್ಧ ದಲ್ಲಿಯೂ

"ಅದರ್ಶನೇ ದರ್ಶನಮಾತ್ರಕಾಮಾ, ದೃಷ್ಟ್ವಾಪರಿಷ್ವಂಗಸುಖೈಕಲೋಲಾ ।
ಆಲಿಂಗಿತಾಯಾಂ ಪುನರಾಯತಾಕ್ಷ್ಯಾಂ ಆಶಾಸ್ಮಹೇ ವಿಗ್ರಹಯೋರಭೇದಂ ॥"

— ಕ್ರಮವಾಗಿ ಕಾಣಬಹುದು.

ಈ ವಿಧವಾದ ಭಕ್ತಿಯೋಗದಲ್ಲಿ ತ್ರೈವರ್ಣಿಕರಲ್ಲದವರಿಗೆ ಅಧಿಕಾರ ವಿಲ್ಲದ್ದರಿಂದಲೂ, ತ್ರೈವರ್ಣಿಕರೊಳಗೂ ಜ್ಞಾನ – ಶಕ್ತಿಗಳಿಲ್ಲದವರಿಗೂ, ವಿಳಂಬತಾಳಲಾರದ ತೀವ್ರಸಂವೇಗಶಾಲಿಗಳಿಗೂ ಅಧಿಕಾರವಿಲ್ಲದುದ ರಿಂದಲೂ, ಅದ್ವಾರಕ (ಸ್ವತಂತ್ರ) ಪ್ರಪತ್ತಿಯೇ ಮೋಕ್ಷಕ್ಕೆ ಉಪಾಯವಾಗಿ ಭಕ್ತಿಯೋಗಕ್ಕೆ ಬದಲಾಗಿ ವಿಧಿಸಲ್ಪಟ್ಟಿದೆ. ಭಕ್ತಿಯೋಗಿಗೆ ಪರಭಕ್ತ್ಯನಂತರ

ಬರುವ ದಶೆಯಂತೆ, ಸ್ವತಂತ್ರ ಪ್ರಪತ್ತಿ ನಿಷ್ಠನಿಗೆ ಅವನ ಅಪೇಕ್ಷಾನುಗುಣವಾಗಿ ಪ್ರಪತ್ತ್ಯನಂತರ ಬರುವ ಅನುಕೂಲಾವಸ್ಥೆಗಳೆಲ್ಲವೂ ಪ್ರಪತ್ತಿಯ ಫಲಭೂತವಾದುವುಗಳು.

ಹೀಗೆ ಪ್ರಪತ್ತಿಗೂ ಭಕ್ತಿಗೂ ಅಧಿಕಾರ ಭೇದದಿಂದ ತುಲ್ಯಫಲವಿರುವುದರಿಂದ ವಿಕಲ್ಪವನ್ನು ಹೇಳಿದೆ. ಈ ಪ್ರಪತ್ತಿಯು ವಾಚಿಕ ಕಾಯಿಕ ಮಾನಸಿಕ-ತ್ರೈಕರಣಿಕಗಳೆಂದು ನಾಲ್ಕು ಬಗೆ. ಇವೆಲ್ಲವೂ ಅಧಿಕಾರಾನುಗುಣವಾಗಿ ಫಲಪ್ರದಗಳು. ಮಾನಸ ವಾಚಿಕ–ಕಾಯಿಕ ವ್ಯಾಪಾರ ವಿಶೇಷಗಳು ಕೂಡಿದ ಪ್ರಪತ್ತಿಯಾದಲ್ಲಿ ಪ್ರಪತ್ತಿಪೂರ್ಣವೆಂದರಿಯಬಹುದೆಂದು ತಾತ್ಪರ್ಯ.

ಪ್ರಪತ್ತಿಯು ಸಾಕ್ಷಾತ್ತಾಗಿ ತಪವಿಲ್ಲದೆ ಸರ್ವಫಲಸಾಧನವಾದ್ದರಿಂದ ಉಪಾಯಾಂತರಗಳಿಗಿಂತ ಇದಕ್ಕೆ ಇರುವ ಆಧಿಕ್ಯವನ್ನು ಅರಿತವರಿಗೆ ಇದರಲ್ಲಿಯೇ ಉತ್ಕಟವಾದ ಇಚ್ಛೆಯುದಿಸುವುದೆಂದು ಕೆಳಗಿನ ಶ್ಲೋಕದಲ್ಲಿ ಹೇಳಿ ಈ ಅಧಿಕಾರವನ್ನು ನಿಗಮನ ಮಾಡಲಾಗಿದೆ :– –

> "ಕರ್ಮಜ್ಞಾನ ಮುಪಾಸನಂ ಚ ಶರಣವ್ರಜ್ಯೇತಿ ಚಾವಸ್ಥಿತಾನ್
> ಸನ್ಮಾರ್ಗಾನಪವರ್ಗಸಾಧನ ವಿಧೌ ಸದ್ವಾರಕಾದ್ವಾರಕಾನ್ ।
> ಏಕದ್ವ್ಯೈಕೃತಿಯೋಗಸಂಭೃತ ಪೃಥಗ್ಭಾವಾನುಭಾವಾನಿಮಾನ್
> ಸಮ್ಯಕ್ಪ್ರೇಕ್ಷ್ಯ ಶರಣ್ಯಸಾರಥಿಗಿರಾ ಮನ್ವೀರಮನ್ತ್ಯೇ ಬುಧಾಃ ॥"—

ಕರ್ಮಯೋಗ - ಜ್ಞಾನಯೋಗಗಳು ಸ್ವಸ್ವರೂಪ ಸಾಕ್ಷಾತ್ಕಾರವುಂಟುಮಾಡುವುದರ ಮೂಲಕ ಸಾಧನ ಭೂತವಾದ ಭಕ್ತಿ ಮಾತ್ರಕ್ಕೆ ಸಾಧನಗಳು. ಭಕ್ತಿಯೋಗವು ಮೋಕ್ಷಾದಿ ಪುರುಷಾರ್ಥಗಳಿಗೆ ಸಾಧನ, ಭರನ್ಯಾಸವು (ಪ್ರಪತ್ತಿ) ಮೋಕ್ಷಾದಿಪುರುಷಾರ್ಥಕ್ಕೂ ಅದಕ್ಕೆ ಸಾಧನವಾದ ಭಕ್ತ್ಯಾದಿಗೂ ಸಾಧನವೆಂಬ ಎರಡು ಆಕಾರಗಳುಳ್ಳದ್ದು—ಎಂಬುದಕ್ಕಾಗಿ. "ಏಕದ್ವ್ಯೈ ಕೃತಿಯೋಗ ಸಂಭೃತ ಪೃಥಗ್ಭಾವಾನುಭಾವಾನ್"—-ಎಂದಿದ್ದಾರೆ. ಈ ವಿಧವಾದ ಆಕಾರಯೋಗ ಪ್ರಯುಕ್ತವಾದ ಇವುಗಳಲ್ಲಿಯ ಪರಸ್ಪರ ವೈಲಕ್ಷಣ್ಯವನ್ನೂ ಉತ್ತರೋತ್ತರಾಧಿಕ್ಯವನ್ನೂ ಚೆನ್ನಾಗಿ ತಿಳಿದು ಚರಮಶ್ಲೋಕದ ಅರ್ಥಭೂತವಾದ ಭರನ್ಯಾಸದಲ್ಲಿ ವಿವೇಕಿಗಳು ನಿಷ್ಠರಾಗುತ್ತಾರೆ. ಇಲ್ಲಿ. "ಶರಣ್ಯಸಾರಥಿ" —ಎಂಬ ಪದವು ಪರಮಾಪ್ತತಮತ್ವ ಖ್ಯಾಪನಕ್ಕಾಗಿ. "ಶರಣ್ಯಸಾರಥಿ"—ಎಂಬುವನು ಶ್ರೀ ಕೃಷ್ಣ.

## ೧೦. ಪ್ರಪತ್ತಿಯೋಗ್ಯಾಧಿಕಾರ

ಹೀಗೆ ಉಪಾಯಗಳು ನಾಲ್ಕು ಬಗೆಯಾಗಿ ವಿಭಕ್ತಗಳಾಗಿವೆ. ಇದರಿಂದ ಅವುಗಳ ಅಧಿಕಾರವಿಭಾಗವೂ ಸಿದ್ಧ. ಮೋಕ್ಷಕ್ಕಾಗಿ ಮಾಡುವ ಭರನ್ಯಾಸದಲ್ಲಿ ಆಕಿಂಚನ್ಯವಿಶಿಷ್ಟವಾದ ಅನನ್ಯಗತಿತ್ವವೇ ಅಧಿಕಾರವೆಂದು ತೋರಿಸುವುದಕ್ಕಾಗಿ—ವಿಶೇಷಾಧಿಕಾರವುಳ್ಳದುದರಲ್ಲಿ ಸಾಮಾನ್ಯಾಧಿಕಾರದ ಅನುವೃತ್ತಿಯೂ ಆವಶ್ಯಕವಾದುದರಿಂದ, ಅರ್ಥಿತ್ವ ಸಾಮರ್ಥ್ಯಗಳು ಸಾಮಾನ್ಯಾಧಿಕಾರಗಳಾದುದರಿಂದ, ಆಕಿಂಚನ್ಯ ಅನನ್ಯಗತಿತ್ವಗಳಲ್ಲಿ ಅವುಗಳ ಅನುಗತಿಯನ್ನು ಕೆಳಗಿನ ಶ್ಲೋಕದಲ್ಲಿ ತೋರಿಸುತ್ತಾರೆ ;—

"ಅರ್ಥಿತ್ವೇನ ಸಮರ್ಥತಾ ತ್ರಿಕತನುಃ ಸಂಪಿಂಡಿತಾಧಿಕ್ರಿಯಾ, ಸಾಚಾಷ್ಟಾಂಗಷಡಂಗಯೋಗ ನಿಯತಾವಸ್ಥಾವ್ಯವಸ್ಥಾಪಿತಾ । ಶ್ರೌತೀ ಸರ್ವಶರಣ್ಯತಾ ಭಗವತಃ ಸ್ಮೃತ್ಯಾಪಿ ಸತ್ಯಾಪಿತಾ, ಸತ್ಯಾದಿಷ್ವಿವ ನೈಗಮೇಷ್ವಧಿಕೃತಿಃ ಸರ್ವಾಸ್ಪದೇ ಸತ್ಪಥೇ ॥

[ಅನ್ವಯ ;— ತ್ರಿಕತನುಃ, ಸಮರ್ಥತಾ, ಅರ್ಥಿತ್ವೇನ, ಸಂಪಿಂಡಿತಾ, ಅಧಿಕ್ರಿಯಾ; ಸಾಚ; ಅಷ್ಟಾಂಗ ಷಡಂಗಯೋಗನಿಯತಾವಸ್ಥಾ, ವ್ಯವಸ್ಥಾಪಿತಾ, ಭಗವತಃ ಸರ್ವಶರಣ್ಯತಾ, ಶ್ರೌತೀ (ಭಗವತಃ) ಸ್ಮೃತ್ಯಾ ಅಪಿ, ಸತ್ಯಾಪಿತಾ. (ಅತಃ), ಸರ್ವಾಸ್ಪದೇ. ಸತ್ಪಥೇ, ನೈಗಮೇಷು ಸತ್ಯಾದಿಷು ಇವ, ಅಧಿಕೃತಿಃ, (ಸಿದ್ಧಾ)]

ಅರ್ಥ :— [ತ್ರಿಕತನುಃ, ಸಮರ್ಥತಾ] = ತ್ರಿವಿಧ ಸಾಮರ್ಥ್ಯ, ಅಂದರೆ, (i) ಶಾಸ್ತ್ರ ವಿಹಿತವಾದ ಕರ್ಮಗಳನ್ನು ಯಥಾವತ್ತಾಗಿ ತಿಳಿಯುವಿಕೆ, (ii) ಅದನ್ನು ಅನುಷ್ಠಿಸುವ ಶಕ್ತಿ, (iii) ಶಾಸ್ತ್ರಾನುಮತ ಜಾತಿಗುಣಾದಿ ಯೋಗ್ಯತೆ ಈ ತ್ರಿವಿಧ ರೂಪವಾದ ಸಾಮರ್ಥ್ಯವು ; [ಅರ್ಥಿತ್ವೇನ, ಸಂಪಿಂಡಿತಾ] = ಕೂಡಿದ್ದಾಗಿ = ಉಪಾಯ ಮತ್ತು ಅದರ ಫಲದಲ್ಲಿ ಆಸೆಯಿಂದ ಕೂಡಿದ್ದಾಗಿ ; [ಅಧಿಕ್ರಿಯಾ] = ಅಧಿಕಾರ; ಸಂಪಿಂಡಿತಾ - ಎಂಬುದಕ್ಕೆ- ಅರ್ಥಿತ್ವ - ಸಾಮರ್ಥ್ಯಗಳೆರಡರ ಸಮುದಾಯವೇ ಅಧಿಕಾರವೆಂದು ಭಾವ. 'ತ್ರಿಕತನು' – ಎಂಬುದಕ್ಕೆ - ಮೇಲೆ ಹೇಳಿದ ಮೂರರ ಸಮುದಾಯವೇ ಸಾಮರ್ಥ್ಯ ಶಬ್ದದರ್ಥವೆಂದು ಭಾವ ; [ಸಾ, ಚ-] = ಆ ಅಧಿಕ್ರಿಯೆಯೂ, [ಅಷ್ಟಾಂಗ – ಷಡಂಗಯೋಗ ನಿಯತಾವಸ್ಥಾ] = ಭಕ್ತಿಯೋಗ–ಪ್ರಪತ್ತಿ

ಗಳೆಂಬುದಾಗಿ; [ನಿಯತಾವಸ್ಥಾ] = ಭಕ್ತಿ ವಿಷಯದಲ್ಲಿ ಸಕಿಂಚನತ್ವ,-ಸಗತಿಕತ್ವ, ಪ್ರಪತ್ತಿ ವಿಷಯದಲ್ಲಿ ಅಕಿಂಚನತ್ವ - ಅನನ್ಯಗತಿಕತ್ವ ವ್ಯಾಪ್ತವಾದ ಸ್ಥಿತಿಯುಳ್ಳದ್ದಾಗಿ; [ವ್ಯವಸ್ಥಾಪಿತಾ] = ನಿರ್ಣೀತವಾಗಿದೆ; [ಭಗವತಃ ಸರ್ವಶರಣ್ಯತಾ] = ಭಗವಂತನು ಸರ್ವರಿಗೂ ಶರಣವೆಂಬುದು; [ಶ್ರೌತೀ] = "ಸರ್ವಸ್ಯ ಶರಣಂ ಸುಹೃತ್," "ಮುಮುಕ್ಷುರ್ವೈಶರಣಮಹಂ ಪ್ರಪದ್ಯೇ,"—ಇತ್ಯಾದಿ ಶ್ರುತಿಯಿಂದ ಬೋಧಿತವಾದುದು; [ಭಗವತಃ, ಸ್ಮೃತ್ಯಾ, ಅಪಿ] = "ಸರ್ವಲೋಕಶರಣ್ಯಾಯ...ಸಕೃದೇವ ಪ್ರಪನ್ನಾಯ,"-ಇತ್ಯಾದಿಯಾಗಿ ಸ್ಮೃತಿಯಿಂದಲೂ; [ಸತ್ಯಾಪಿತಾ] = ದೃಢೀಕರಿಸಲ್ಪಟ್ಟಿದೆ—ವೇದೋಕ್ತಧರ್ಮದಲ್ಲಿ ಶೂದ್ರಾದಿಗಳಿಗೆ ಹೇಗೆ ಅಧಿಕಾರ ? - ಎಂದರೆ, [ಸರ್ವಾಸ್ಪದೇ] = ಬ್ರಾಹ್ಮಣ್ಯ-ಅಬ್ರಾಹ್ಮಣ್ಯ ಎಂಬ ವಿಭಾಗವಿಲ್ಲದೆಯೂ, ಸ್ತ್ರೀ-ಪುಂ ಎಂಬ ವಿಭಾಗವಿಲ್ಲದೆಯೂ ಎಲ್ಲರಿಗೂ ಆಚರಿಸಲು ಯೋಗ್ಯವಾದ; [ಸತ್ಪಥೇ] = ಭರನ್ಯಾಸರೂಪಸನ್ಮಾರ್ಗದಲ್ಲಿ; [ಸತ್ಯಾದಿಷು, ಇವ] = "ಸತ್ಯಂವದ, ಧರ್ಮಂಚರ,"—ಇತ್ಯಾದಿ ಶ್ರುತಿಸಿದ್ಧವಾದ ಸತ್ಯನುಡಿಯುವುದೇ ಮುಂತಾದುವುಗಳಲ್ಲಿ ಹೇಗೋ ಹಾಗೆ, (ಅಗ್ನಿವಿದ್ಯಾಪೇಕ್ಷೆಯಿಲ್ಲದ್ದರಿಂದ) ಶೂದ್ರಾದಿಗಳಿಗೂ; [ಅಧಿಕೃತಿಃ] = ಅಧಿಕಾರವು ಸಿದ್ಧವಾಗಿದೆಯೆಂದು ಭಾವ.

ಮುಂದೆ, ಭಕ್ತಿಯೋಗಕ್ಕೆ—ಸಾಂಗವಾಗಿ ಅನುಷ್ಠಿಸುವಶಕ್ತಿ, ಸಾಂಗವಾದ ಆ ಯೋಗದ ಸ್ವರೂಪ ನಿರ್ಧಾರಣ. ಶಾಸ್ತ್ರವಿಹಿತ ಜಾತಿಗುಣಾದಿಯೋಗ, ವಿಳಂಬವನ್ನು ಸಹಿಸುವಿಕೆ - ಈ ನಾಲ್ಕೂ ಕೂಡಿ ಅಧಿಕಾರ. ಇವುಗಳಿಲ್ಲದಿರುವುದು ಪ್ರಪತ್ತಿಗೆ ಅಧಿಕಾರ. ಇದು 15 ವಿಧ-ಈ ನಾಲ್ಕು ಅಧಿಕಾರಗಳಲ್ಲಿ ಒಂದೊಂದು ಇಲ್ಲದಲ್ಲಿ 4 ಅಧಿಕಾರ. ಎರಡೆರಡು ಇಲ್ಲದಲ್ಲಿ 6 ಅಧಿಕಾರಗಳು. ಮೂರು ಇಲ್ಲದಲ್ಲಿ 4 ಅಧಿಕಾರಗಳು. ನಾಲ್ಕೂ ಇಲ್ಲದಲ್ಲಿ 1 ಅಧಿಕಾರ - ಎಂಬುದನ್ನು, "ಏಕದ್ವಿತ್ರ್ಯಾದಿಯೋಗ ವ್ಯತಿಭಿದುರನಿಜಾಧಿಕ್ರಿಯಾ" ಎಂದಿದ್ದಾರೆ. ಹೇಗೆಂದರೆ; 1. ಸಾಂಗಾನುಷ್ಠಾನಶಕ್ತಿ, 2. ಸಾಂಗಯೋಗ ಸ್ವರೂಪ ನಿರ್ಧಾರಣ, 3. ಶಾಸ್ತ್ರವಿಹಿತ ಜಾತಿಗುಣಾದಿಯೋಗ 4. ವಿಳಂಬಸಹತ್ವ-ಈ ನಾಲ್ಕರಲ್ಲಿ:

1. ಮೊದಲ ಮೂರು ಇದ್ದು 4ನೆಯದಿಲ್ಲದಿರುವುದು—1 ಅಧಿಕಾರ
ಕಡೆಯ ಮೂರು ಇದ್ದು 1ನೆಯದಿಲ್ಲದಿರುವು ,,
ದೆಂಬುದು—1
ಒಂದು, ಮೂರು, ನಾಲ್ಕಿದ್ದು 2ನೆಯದಿಲ್ಲದಿರುವು
ದೆಂಬುದು—1 ,,
ಒಂದು, ಎರಡು, ನಾಲ್ಕಿದ್ದು 3ನೆಯದಿಲ್ಲದಿರುವು
ದೆಂಬುದು—1 ,,
} 4 ಅಧಿಕಾರಗಳು

2. ಒಂದು ಎರಡು ಸೇರಿ–ಮೂರು ನಾಲ್ಕು–ಇಲ್ಲವೆಂಬುದು —
1 ಅದಿಕಾರ
ಒಂದು ಮೂರು ಸೇರಿ–ಎರಡು + ನಾಲ್ಕು ಇಲ್ಲದ್ದು —1 "
ಒಂದು, ನಾಲ್ಕು ಸೇರಿ–ಎರಡು + ಮೂರು ಇಲ್ಲದ್ದು—1 "
ಎರಡು, ಮೂರು ಸೇರಿ-ಒಂದು + ನಾಲ್ಕು ಇಲ್ಲದ್ದು —1 "
ಎರಡು, ನಾಲ್ಕು ಸೇರಿ–ಒಂದು + ಮೂರು ಇಲ್ಲದ್ದು—1 "
ಮೂರು, ನಾಲ್ಕು ಸೇರಿ–ಒಂದು + ಎರಡು ಇಲ್ಲದ್ದು—1 "
} 6 ಅಧಿಕಾರಗಳು

3. ಮೊದಲನೆಯದಿದೆ–ಮಿಕ್ಕ ಮೂರಿಲ್ಲದಲ್ಲಿ 1 ಅಧಿಕಾರ
ಎರಡನೆಯದಿದೆ–ಒಂದು, ಮೂರು, ನಾಲ್ಕಿಲ್ಲದಲ್ಲಿ—1 "
ಮೂರನೆಯದಿದೆ–ಒಂದು, ಎರಡು, ನಾಲ್ಕಿಲ್ಲದಲ್ಲಿ—1 "
ನಾಲ್ಕನೆಯದಿದೆ–ಮೊದಲ, ಮೂರಿಲ್ಲದಲ್ಲಿ—1 "
} 4 ಅಧಿಕಾರಗಳು

4. ಮೇಲ್ಕಂಡ ನಾಲ್ಕರಲ್ಲಿ ಒಂದೂ ಇಲ್ಲದಿರುವಲ್ಲಿ 1 ಅಧಿಕಾರ

ಹೀಗೆ 4 + 6 + 4 + 1 = 15 ಒಟ್ಟು ಅಧಿಕಾರಗಳು

ಈ ವಿಧವಾದ 15 ಅಧಿಕಾರಗಳುಳ್ಳ ಬ್ರಹ್ಮನಿಷ್ಠರು ಶ್ರಿಯಃ ಪತಿಯಾದ ನಾರಾಯಣನನ್ನು ಸ್ವತಂತ್ರಪ್ರಪತ್ತಿಯಿಂದ ಶರಣಹೊಂದುತ್ತಾರೆಯೆಂದು, ಹೇಳುವವರಾಗಿ

"ಭಕ್ತ್ಯಾದೌ ಶಕ್ತ್ಯಭಾವಃ, ಪ್ರಮಿತಿರಹಿತತಾ, ಶಾಸ್ತ್ರತಃ ಪರ್ಯುದಾಸಃ
ಕಾಲಕ್ಷೇಪಾಕ್ಷಮತ್ವಂ ತ್ವಿತಿನಿಯತಿವಶಾದಾಪತದ್ಭಿಶ್ಚತುರ್ಭಿಃ ।
ಏಕದ್ವಿತ್ರ್ಯಾದಿಯೋಗವ್ಯತಿಭಿದುರ ನಿಜಾಧಿಕ್ರಿಯಾಸ್ಸಂಶ್ರಯನ್ತೇ
ಸನ್ತಃ ಶ್ರೀಶಂ ಸ್ವತಂತ್ರ ಪ್ರಪದನವಿಧಿನಾ ಮುಕ್ತಯೇ ನಿರ್ವಿಶಂಕಾಃ ॥"

—ಎಂಬ ಶ್ಲೋಕದಿಂದ ಈ ಅಧಿಕಾರವನ್ನು ನಿಗಮಿಸಿದ್ದಾರೆ.

## ೧೧. ಪರಿಕರವಿಭಾಗಾಧಿಕಾರ

ಮೇಲೆ ಪ್ರಪತ್ತ್ಯಧಿಕಾರಿ ಸ್ವರೂಪವನ್ನು ನಿರೂಪಿಸಲಾಯಿತು. ಪ್ರಪತ್ತಿಗೆ ಮತ್ತೊಂದರ ಅಪೇಕ್ಷೆಯಿಲ್ಲ ಎಂದ ಮೇಲೆ,ಅದಕ್ಕೆ ಪರಿಕರ (ಅಂಗ) ಗಳೂ ಬೇಕಿಲ್ಲವೆಂದಂತಾಯಿತು.

"ನ ಹಿತತ್ಕರಣಂ ಲೋಕೆ ವೇದೇ ವಾ ಕಿಂಚಿ ದೀದೃಶಂ ।
ಇತಿಕರ್ತವ್ಯತಾ ಲೋಕೇ ಯಸ್ಯನಾನುಗ್ರಹಾರ್ಥತಾ ॥"

—ಎಂಬಂತೆ - ಉಪಕಾರಕಗಳಾದ ಅಂಗಗಳೇ ಇಲ್ಲದಿದ್ದಲ್ಲಿ ಪ್ರಪತ್ತಿಯುಕರಣ (ಸಾಧನ, ಉಪಾಯ) ವೆಂಬುದು ಹೇಗೆ ? –ಎಂದು ಶಂಕಿಸಿದಲ್ಲಿ ಈ ಶಂಕೆಯನ್ನು ಪರಿಹರಿಸಲು ಪ್ರಪತ್ತಿಗೆ, ಆನುಕೂಲ್ಯಸಂಕಲ್ಪ, ಪ್ರಾತಿಕೂಲ್ಯವರ್ಜನ, ಕಾರ್ಪಣ್ಯ, ಮಹಾವಿಶ್ವಾಸ, ಗೋಪ್ತೃತ್ವವರಣಗಳೆಂಬ ಐದು ಅಂಗಗಳಿರುವುದನ್ನೂ ಆ ಅಂಗಗಳ ಸ್ವರೂಪವನ್ನೂ ಸಪ್ರಮಾಣವಾಗಿ ಈ ಅಧಿಕಾರದಲ್ಲಿ ನಿರೂಪಿಸಿದ್ದಾರೆ.

"ಇಯಾನಿತ್ಥಂ ಭೂತಃ ಸಕೃದಯಮವಶ್ಯಂ ಭವನವಾನ್,
ದಯಾದಿವ್ಯಾಂಭೋಧೌ ಜಗದನ್ತರ್ಯಾಮಯತಿ ।
ಭವಧ್ವಂಸೋದ್ಯುಕ್ತೇ ಭಗವತಿ ಭರನ್ಯಾಸವಪುಷಃ,
ಪ್ರಪತ್ತೇರಾದಿಷ್ಟಃ ಪರಿಕರ ವಿಶೇಷಃ ಶ್ರುತಿಮುಖೈಃ ॥"

—ಇತ್ಯಾದಿಯಾಗಿ.

"ಶಾಶ್ವತೀ ಮಮಸಂಸಿದ್ಧಿಃ ಇಯಂ ಪ್ರಹ್ವೀಭವಾಮಿಯತ್ ।
ಪುರುಷಂ ಪರಮುದ್ದಿಶ್ಯ ನ ಮೇ ಸಿದ್ಧಿಃ
ಇತೋಽನ್ಯಥಾ । ಇತ್ಯಂಗಮುದಿತಂ ಶ್ರೇಷ್ಠಂ ಫಲೇಪ್ಸಾ
ತದ್ವಿರೋಧಿನೀ ॥"—

ಎಂದು ಅಹಿರ್ಬುಧ್ನ್ಯರು ಹೇಳಿರುವ ಫಲತ್ಯಾಗರೂಪವಾದ ಅಂಗಾಂತರವು ಮೋಕ್ಷಾರ್ಥವಾದ ಆತ್ಮನಿಕ್ಷೇಪ (ಪ್ರಪತ್ತಿ) ದಲ್ಲಿ ನಿಯತವಾದದ್ದು. ಫಲಸಂಗ-ಕರ್ತೃತ್ವಾದಿ ತ್ಯಾಗವು ಕರ್ಮಯೋಗವೇ ಮುಂತಾದ ನಿವೃತ್ತಿ ಧರ್ಮಗಳೆಲ್ಲದರಲ್ಲಿಯೂ ಇರುವುದರಿಂದ, ಇದರ ಅನುಸಂಧಾನವು ಮುಮುಕ್ಷುವಿಗೆ ಸಾಂಗ ಸಮರ್ಪಣ ದಶೆಯಲ್ಲಿ ಅವಶ್ಯಕರ್ತವ್ಯ. ಈ ಪರಿಕರಗಳಲ್ಲಿ—

1 ಆನುಕೂಲ್ಯಸಂಕಲ್ಪ - ಎಂಬುದು - ಸ್ವಾಮಿಗೆ ಅಭಿಮತವಾದುದನ್ನು ಮಾಡಲು ಅನುಕೂಲವಾದ ಪಾರಾರ್ಥ್ಯ (ಶೇಷತ್ವ) ಜ್ಞಾನದಿಂದ ಇನ್ನು ಮುಂದೆ ಶಾಸ್ತ್ರವಿಹಿತವಾದುದರಲ್ಲಿಯೇ ಪ್ರವರ್ತಿಸುತ್ತೇನೆ ಅಂದರೆ "ಭಗವದಾನುಕೂಲ್ಯಂ ಕರಿಷ್ಯೇ"—ಎಂದು ಸಂಕಲ್ಪಿಸುವುದು.

2. ಪ್ರಾತಿಕೂಲ್ಯವರ್ಜನ-ಎಂಬುದು-ಸ್ವಾಮಿಗೆ ಅಭಿಮತವಾದುದನ್ನು ಮಾಡಲು ಅನುಕೂಲವಾದ ಪಾರಾರ್ಥ್ಯಶೇಷತ್ವಜ್ಞಾನದಿಂದ ಇನ್ನುಮುಂದೆ ನಿಷಿದ್ಧವಾದುದನ್ನು ಮಾಡುವುದಿಲ್ಲ ("ಭಗವತ್ಪ್ರಾತಿಕೂಲ್ಯಂ ನ ಕರಿಷ್ಯೇ")–ಎಂದು ಸಂಕಲ್ಪಿಸುವುದು. ಇವುಗಳಿಂದ-"ಆನುಕೂಲ್ಯೇತರಾಭ್ಯಾಂ ತು ವಿನಿವೃತ್ತಿರಪಾಯತಃ"–ಎಂಬಂತೆ ಅಪಾಯ ಪರಿಹಾರವು ಸಿದ್ಧ. ಇಲ್ಲಿ ಅಪಾಯವೆಂಬುದು ಆಜ್ಞಾತಿಲಂಘನ. ಸ್ವವಿಷಯವಾದ ಅಪಚಾರದಿಂದ ನಿವೃತ್ತವಾಗುವಂತೆಯೇ ಸರ್ವನಿಷಿದ್ಧಗಳಿಂದ ನಿವೃತ್ತವಾಗುವುದು ಭಗವಂತನಿಗೆ ಅಭಿಮತವಷ್ಟೆ! ಅಂದರೆ, "ಚರಾಚರಾಣಿಭೂತಾನಿ ಸರ್ವಾಣಿ ಭಗವದ್ವಪುಃ। ಅತಸ್ತದಾನುಕೂಲ್ಯಂ ಮೇ ಕರ್ತವ್ಯಮಿತಿ ನಿಶ್ಚಯಃ॥"—ಎಂದಿರುವಂತೆ, ಮುಮುಕ್ಷುವಾದ ನಾನು "ಸರ್ವಭೂತಾನುಕೂಲ್ಯರೂಪ ತ್ವದಾನುಕೂಲ್ಯೇ ವರ್ತಿಷ್ಯೇ, ಸರ್ವಭೂತಪ್ರಾತಿಕೂಲ್ಯರೂಪ ತ್ವತ್ಪ್ರಾತಿಕೂಲ್ಯಾತ್ ನಿವೃತ್ತಶ್ಚ" —ಎಂದು ಆನುಕೂಲ್ಯ ಸಂಕಲ್ಪ ಪ್ರಾತಿಕೂಲ್ಯವರ್ಜನಗಳೆಂಬ ಅಂಗಗಳೆರಡೂ ಸಿದ್ಧಿಸಿದಲ್ಲಿ ವಿಹಿತದ ತ್ಯಾಗ ನಿಷಿದ್ಧದ ಆಚರಣೆಗಳೆಂಬ ಅಪಾಯಗಳಿಂದ ನಿವೃತ್ತಿಯೂ ಸಿದ್ಧಿಸುವುದೆಂದರ್ಥ.

3. ಕಾರ್ಪಣ್ಯ - ವೆಂಬುದು - ಕರುಣಾಜನಕ ಕೃಪಣವೃತ್ತಿ - ಅಥವಾ ಉಪಾಯಾಂತರದಲ್ಲಿ ಅಸಾಮರ್ಥ್ಯ. ಪ್ರಯೋಜನಾಂತರವೈಮುಖ್ಯ, ಶರಣ್ಯಾಂತರವೈಮುಖ್ಯಗಳ ಅನುಸಂಧಾನ. ಇದು ಶರಣ್ಯನ ಕಾರುಣ್ಯೋತ್ತಂಭನಕ್ಕೆ ಪ್ರಯೋಜಕ. "ಕಾರ್ಪಣ್ಯೇನಾಪ್ಯುಪಾಯಾನಾಂ ವಿನಿವೃತ್ತಿರಿಹೇರಿತಾ," —ಎಂದಿರುವಂತೆ ಉಪಾಯಾಂತರವಿಲ್ಲವೆಂಬುದಕ್ಕೂ ಉಪಯುಕ್ತ.

4. ಮಹಾವಿಶ್ವಾಸಃ—ಅನುಕೂಲರಾದ ನಮ್ಮನ್ನು ಭಗವಂತ ರಕ್ಷಿಸುವನೆಂಬ ಸುದೃಢ ನಂಬಿಕೆ. ಇದು ಎಲ್ಲಾ ಶಂಕೆಗಳನ್ನೂ ಹೋಗಲಾಡಿಸಿ - "ಸಂಸಾರಾವರ್ತವೇಗಪ್ರಶಮನಶುಭದೃಗ್ದೇಶಿಕಪ್ರೇಕ್ಷಿತೋಽಹಂ ಸಂತ್ಯಕ್ತೋಽನ್ಯೈರುಪಾಯೈರನುಚಿತಚರಿತೇಷ್ವದ್ಯಶಾಂತಾಭಿಸಂಧಿಃ। ನಿಶ್ಶಂಕಃ

ತತ್ತ್ವದೃಷ್ಟ್ವಾ ನಿರವಧಿಕದಯಂ ಪ್ರಾಪ್ಯ ಸಂರಕ್ಷಕಂ ತ್ವಾಂ ನ್ಯಸ್ಯತ್ವತ್ಪಾದ ಪದ್ಮೇವರದನಿಜಭರಂ ನಿರ್ಭರೋ ನಿರ್ಭಯೋಽಸ್ಮಿ ॥"—ಎಂದಿರುವಂತೆ ಭರಸಮರ್ಪಣೆಯಾದನಂತರ ಲೇಶಮಾತ್ರವೂ ಸ್ವರಕ್ಷಣ ವ್ಯಾಪಾರದಲ್ಲಿ ತನಗೆ ಅನ್ವಯವಿಲ್ಲವೆಂಬ ನಿರ್ಭರತ್ವಕ್ಕೆ ಪ್ರಯೋಜಕ.

5. ಗೋಪ್ತೃತ್ವವರಣ :—ಎಂಬುದಾದರೋ—ಸ್ವಾಭಿಪ್ರಾಯವನ್ನು ಅರಿಕೆ ಮಾಡುವುದು, "ಅಪ್ರಾರ್ಥಿತೋ ನ ಗೋಪಾಯೇತ್ –" ಎಂದಿದೆಯಷ್ಟೆ ಒಳ್ಳೆಯದು ಯಾವುದನ್ನೂ ಚೇತನನು ಪ್ರಾರ್ಥಿಸದೆಯೇ ಕೊಟ್ಟಲ್ಲಿ ಅದು ಪುರುಷಾರ್ಥ ಕೊಟ್ಟಂತಾಗುವುದಿಲ್ಲವಾಗಿ ಇಲ್ಲಿ ಗೋಪ್ತೃತ್ವವರಣವೂ ಅಪೇಕ್ಷಿತ. ಭಗವಂತನಿಗೆ ಫಲಪ್ರದಾನದಲ್ಲಿ ಇಚ್ಛೆಯುಂಟುಮಾಡಲು ಇದು ಉಪಯುಕ್ತವಾಗುತ್ತದೆ.

ಪ್ರಪತ್ತಿಯನ್ನು ಅನುಷ್ಠಿಸುವ ವೇಳೆಯಲ್ಲಿ ಇವು ಐದು ಅಂಶಗಳೂ ಉಪಯುಕ್ತವಾದ್ದರಿಂದ ಇವು ಪ್ರಪತ್ತಿಯೊಂದಿಗೆ ಸೇರಿಯೇ ಇರುವುವು.

ಇವೆಲ್ಲವನ್ನೂ 'ಸೀತೆಯನ್ನು ಶರಣುಹೊಂದಲು ಬನ್ನಿ' – ಎಂದು ಸಾತ್ವಿಕ ಸ್ವಭಾವದ ತ್ರಿಜಟೆಯು ರಾಕ್ಷಸಿಯರಿಗೆ ಹೇಳಿದ ವಾಕ್ಯದಲ್ಲಿಯೂ ಶ್ರೀ ವಿಭೀಷಣನು ಶ್ರೀ ರಾಮನಲ್ಲಿ ಶರಣ ಹೊಂದಲು ಬಂದ ಸಂದರ್ಭದಲ್ಲಿಯ ವೃತ್ತಾಂತದಲ್ಲಿಯೂ ಕಾಣಬಹುದು.

ಮೇಲ್ಕಂಡ ಮಹಾ ವಿಶ್ವಾಸದಿಂದ ಹೋಗತಕ್ಕ ಶಂಕೆಗಳು ಐದು-ಇವು ಶಂಕಾಪಂಚಕವೆನಿಸಿವೆ. ಅವು—

(i) ಸರ್ವಜ್ಞನೂ ಸರ್ವ ಶಕ್ತಿಯುಕ್ತನೂ ಆದ ಭಗವಂತನು ಕರ್ಮಯೋಗಾದಿಗಳಿಗೆ ಅನರ್ಹತೆಯುಂಟು ಮಾಡತಕ್ಕ ಅನಂತ ಅಪರಾಧ ಗಳನ್ನು ಮಾಡಿದವನಾದ ನನ್ನನ್ನು ಹತ್ತಿರ ಸೇರಿಸಿಯಾನೆ ?

(ii) ಆಯಾ ಕರ್ಮಾನುಗುಣ ಫಲಪ್ರದನಾದ ಅವನು ವಿಧಿ-ಶಿವ-ಸನಕಾದಿಗಳಿಗೂ ಕೂಡ ದುರ್ಲಭವಾದ ಗುರುತರ ಫಲವನ್ನು (ಅಕಿಂಚನನಾದ) ನನಗೆ ಹೇಗೆ ಕೊಟ್ಟಾನು ?

(iii) ಯಾವ ಉಪಕಾರವನ್ನೂ ಅಪೇಕ್ಷಿಸದ ಭಗವಂತನು, ಕಾಯ ಕ್ಲೇಶ - ಅರ್ಥವ್ಯಯ - ಕಾಲದೈರ್ಘ್ಯಗಳಿಲ್ಲದೆ ಒಂದು ಸಲ ಅನುಸಂಧಾನ

ಮಾಡುವಮಾತ್ರಕ್ಕೆ ಅಥವಾ ಸಮುದಾಯಜ್ಞಾನ ಪೂರ್ವಕವಾಗಿ ಒಂದು ಸಲ ಉಚ್ಚಾರಣ ಮಾಡುವ ವ್ಯಾಪಾರಕ್ಕೇ ಹೇಗೆ ಪ್ರಸನ್ನನಾದಾನು ?

(iv) ಕ್ಷುದ್ರ ದೇವತೆಯ ಹಾಗೆ ಕ್ಷಿಪ್ರಫಲ ಕೊಡುವ ಸ್ವಭಾವದವನಲ್ಲ-ವಾದ್ದರಿಂದ ವಿಲಂಬವಿಲ್ಲದೆ ಕ್ಷಿಪ್ರವಾಗಿ ಫಲವನ್ನು ಹೇಗೆ ಕೊಟ್ಟಾನು ?

(v) ಸಮಾಧಿಕ ದರಿದ್ರನಾದ ಸರ್ವೇಶ್ವರನು ತಾರತಮ್ಯವನ್ನು ವಿಚಾರಿಸದೆ ಜನ್ಮ ವೃತ್ತ ಮೊದಲಾದುವುಗಳಿಂದ ಅತಿ ನೀಚನಾದ ನನಗೆ ಹೇಗೆ ಅಪರಿಮಿತ ಫಲವನ್ನು ಕೊಟ್ಟಾನು ? — ಎಂಬವು.

ಈ ಶಂಕಾಪಂಚಕಕ್ಕೆ ಕ್ರಮವಾಗಿ ನಿವರ್ತಕವಾದವುಗಳು—ಪುರುಷಕಾರ–ಸಂಬಂಧ – ಗುಣ – ವ್ಯಾಪಾರಗಳು.

(i) ಪುರುಷಕಾರವೆಂದರೆ — ಅಭಿಮತವನ್ನು ಕೊಡಬಲ್ಲ ಪುರುಷನ ಹತ್ತಿರಕ್ಕೆ ಹೋಗಲು ಸಹಾಯಕ್ಕಾಗಿ ನಾವು ವರಿಸಲು ಸಮರ್ಥನಾದ ಮತ್ತೊಬ್ಬ ಚೇತನವಿಶೇಷ ಇವರಲ್ಲಿಯ ವಿಶೇಷ – ಇವನ ಮಾತನ್ನು ಹೇಗೂ ಈಶ್ವರ ತಳ್ಳಿಹಾಕಲಾಗದಿರುವುದು. ಇಂತಹ ಚೇತನನ ಪುರುಷಕಾರ ವಿಶೇಷದಿಂದ ಈಶ್ವರನು ಸರ್ವಜ್ಞನೂ ಸರ್ವಶಕ್ತನೂ ಉದರೂ ಕೂಡ ಅಂತಃಪುರದ ಜನರಿಗೆ ಹೇಗೋ ಹಾಗೆ ನಮ್ಮ ಅನಂತಾಪರಾಧಗಳನ್ನೂ ಕ್ಷಮಿಸಿ ನಾವು ಸಮೀಪಿಸುವಂತಾಗುವನು.

(ii) ಸಂಬಂಧವೆಂಬುದು ಅವನಿಗೂ ನಮಗೂ ಇರುವ— ಸ್ವಾಮಿತ್ವ-ದಾಸತ್ವರೂಪ. ಇದರ ವಿಶೇಷ – ಹೇಗೂ ನಮ್ಮನ್ನು ತಳ್ಳಿಹಾಕಲಾಗದಿರುವಿಕೆ. ಈ ಸಂಬಂಧವಿಶೇಷದಿಂದ, ಕರ್ಮಾನುರೂಪ ಫಲಪ್ರದನಾದಾಗ್ಯೂ ಪ್ರಪತ್ತಿರೂಪ ನೆಪದಿಂದ ಪ್ರಸನ್ನನಾಗಿ ನಮಗೆ ಸ್ವತಃ ಪ್ರಾಪ್ತವಾದ ಅಪರಿಮಿತ ಫಲವನ್ನು ಭಗವಂತ ಕೊಡುತ್ತಾನೆ.

(iii) ಗುಣ — ನಿರ್ಹೇತುಕವಾದ ವಾತ್ಸಲ್ಯ - ಸೌಶೀಲ್ಯಾದಿಗಳು. ಈ ನಿರ್ಹೇತುಕ ವಾತ್ಸಲ್ಯಾದಿಯಿಂದ, ಅವಾಪ್ತ ಸಮಸ್ತಕಾಮನಾದಾಗ್ಯೂ ಸರ್ವೋಪಕಾರನಿರಪೇಕ್ಷನಾದಾಗ್ಯೂ ಈ ನಮ್ಮಿಂದ ಮಾಡಲ್ಪಟ್ಟ ಯಾವುದಾದರೊಂದು ಉಪಕಾರವನ್ನು ಪರಮೋಪಕಾರವೆಂಬುದಾಗಿ ಶಿರಸಾ ಸ್ವೀಕರಿಸಿ ಕೃತಜ್ಞನಾಗಿ ಉಪಕರಿಸುತ್ತಾನೆ.

(iv) ವ್ಯಾಪಾರ ಎಂಬುದು–ಸಂಕಲ್ಪ. ಇದರ ವಿಶೇಷವು ಮತ್ತೊಂದರ ಸಹಕಾರವನ್ನು ಅಪೇಕ್ಷಿಸದಿರುವುದು. ಈ ನಿರಪೇಕ್ಷ ಸಂಕಲ್ಪದಿಂದ ಯಜನ-ಭಜನಾದಿಗಳಿಗೆ ವಿಲಂಬದಿಂದ ಫಲಪ್ರದನಾದಾಗ್ಯೂ ಗತ್ಯಂತರರಹಿತವಾದ ಪ್ರಪದನಕ್ಕೆ ನಾವು ಕೋರಿದ ಸಮಯದಲ್ಲಿಯೇ ಫಲವನ್ನು ಕೊಡುವನು.

(v) ಪ್ರಯೋಜನ ಎಂಬುದಾದರೋ –– ಫಲ. ಆಶ್ರಿತ ಪ್ರಯೋಜನವನ್ನೇ ಸ್ವಪ್ರಯೋಜನವಾಗಿ ಭಾವಿಸುವುದು ಇದರ ವಿಶೇಷ. ಸಮಾಧಿಕರಿಲ್ಲದವನಾದಾಗ್ಯೂ ನಿರಂಕುಶ ಸ್ವತಂತ್ರನಾದ್ದರಿಂದಲೂ, ಆಶ್ರಿತ ಪ್ರಯೋಜನವನ್ನೇ ಸ್ವಪ್ರಯೋಜನವಾಗಿಯುಳ್ಳವನಾದ್ದರಿಂದಲೂ, ತಾರತಮ್ಯವನ್ನು ವಿಚಾರಮಾಡದೆ ಅಪರಿಮಿತವಾದ ಫಲವನ್ನೂ ಕೂಡ ಕೊಟ್ಟೇ ಕೊಡುತ್ತಾನೆ.

ಇಂತಹ ವಿಶಿಷ್ಟ ಪುರುಷಕಾರಾದಿ ಐದನ್ನೂ ಸದಾಚಾರ್ಯಕಟಾಕ್ಷ ವಿಶೇಷದಿಂದ ಚೆನ್ನಾಗಿ ಅರಿತವರಿಗೆಯೇ ಈ ವಿಧವಾದ ಮಹಾ ವಿಶ್ವಾಸವು ಉದಿಸುವುದು. ಇವೆಲ್ಲವೂ ಅನುಷ್ಠಾನವೇಳೆಯಲ್ಲಿ ಪ್ರಪತ್ತಿಯ ಕರಣಮಂತ್ರದಲ್ಲಿ ನಾವು ಅನುಸಂಧಾನ ಮಾಡಬೇಕಾದುವುಗಳು.

## ೧೨. ಸಾಂಗಪ್ರಪದನಾಧಿಕಾರ :

ಹೀಗೆ ಅಂಗಗಳನ್ನು ಅವುಗಳ ಪ್ರಯೋಜನ ಸಹಿತ ನಿರೂಪಿಸಿ ಅಂಗಿ ಸ್ವರೂಪವನ್ನೂ ಅದರ ಲಕ್ಷಣ ಸಹಿತ ನಿಷ್ಕರ್ಷಿಸಿ ಈ ಅಧಿಕಾರದಲ್ಲಿ,

"ಅಭೀಷ್ಟೇ ದುಸ್ಸಾಧೇ ಸ್ವತ ಇತರತೋ ವಾ ಕ್ವಚನ ತತ್ ಭರನ್ಯಾಸಂ ಯಾಚ್ಞಾನ್ವಿತಮಭಿವದಂತಿ ಪ್ರಪದನಂ । ಇತಃ ಪಶ್ಚಾದಸ್ಮದ್ಯತನ ನಿರಪೇಕ್ಷೇಣ ಭವತಾ, ಸಮರ್ಥ್ಯೋಽಸಾವರ್ಥಸ್ತ್ವಿತಿ ಮತಿವಿಶೇಷಂ ತದವಿದುಃ ॥"

—ಎಂಬುದಾಗಿ—ತೋರಿಸಿದ್ದಾರೆ ಅಂದರೆ ಈ ಶಾಸ್ತ್ರಾರ್ಥದಲ್ಲಿ ಯಥಾವಸ್ಥಿ –ತಾತ್ಮನಿಕ್ಷೇಪವೇ ಅಂಗಿ ಸುಖವೋ ದುಃಖ ನಿವೃತ್ತಿಯೋ ಅಥವಾ ಅದರ ಸಾಧನವೋ ನಮ್ಮ ಅಭೀಷ್ಟವಾಗಿರುವುದು. ನಾವೋ ಆಕಿಂಚನರೂ ಅನನ್ಯಗತಿಕರೂ ಆಗಿದ್ದೇವೆ. ಆಕಿಂಚನರಾದ್ದರಿಂದ ನಮ್ಮಿಂದ ಅದನ್ನು ಸಾಧಿಸಲಾರೆವು. ಅನನ್ಯಗತಿಕರಾದ್ದರಿಂದ ಪ್ರಪತ್ತವ್ಯನಾದ ಸರ್ವೇಶ್ವರನನ್ನು ಬಿಟ್ಟು ಬೇರೆ ಯಾರಿಂದಲೂ ಸಾಧಿಸಿಕೊಳ್ಳಲಾರೆವು. ಇಂತಹ ಸಂದರ್ಭದಲ್ಲಿ "ತ್ವಮೇವಮೇ ಉಪಾಯ ಭೂತಃಭವ," — ಅಂದರೆ. "ನೀನೇ ಉಪಾಯ ಸ್ಥಾನದಲ್ಲಿದ್ದು

ಇದನ್ನು ನಡೆಸಿಕೊಡಬೇಕು," — ಎಂದು ಇದನ್ನು ನಡೆಸಿಕೊಡಲು ಸಮರ್ಥನಾದ ಸರ್ವೇಶ್ವರನಲ್ಲಿಯೇ, ಇದನ್ನ ನಡೆಸಿಕೊಡುವ ಭಾರವನ್ನು ಪ್ರಾರ್ಥನಾ ಪೂರ್ವಕವಾಗಿ ಇಡುವುದೇ ಪ್ರಪದನವೆಂಬುದು. ಹೀಗೆ "ನನ್ನ ರಕ್ಷಣ ಭಾರವು ನಿನ್ನದೇ" — ಎಂಬ ವಾಕ್ಯೋಚ್ಚಾರಣವೇ ಪ್ರಪದನ ಅಥವಾ ಭರನ್ಯಾಸವೆಂಪಲ್ಲಿ, ಇದು ಜ್ಞಾನಮಾತ್ರವೇ ಉಪಾಯವೆಂದು ಬೋಧಿಸುವ ಶ್ರುತಿಗೆ ವಿರೋಧವಲ್ಲವೆ ? — ಎಂದರೆ, — ಇನ್ನು ಮುಂದೆ ನಮ್ಮ ವ್ಯಾಪಾರವೇನೂ ಇಲ್ಲದೆಯೇ ಅವನಿಂದಲೇ ನಮ್ಮ ಅಭೀಷ್ಟವು ಸಾಧಿಸಲ್ಪಡತಕ್ಕದ್ದು — ಎಂಬ ಇದೂ ಒಂದು ಜ್ಞಾನ ವಿಶೇಷವೇ ಆದುದರಿಂದ, ಜ್ಞಾನ ಮಾತ್ರಕ್ಕೇ ಉಪಾಯತ್ವವನ್ನು ಹೇಳುವ ಶ್ರುತಿಗೆ ಈ ರೀತಿಯ ಭರನ್ಯಾಸವು ವಿರುದ್ಧವಲ್ಲ. ಸರ್ವರಕ್ಷಕನೂ ಸರ್ವಶೇಷಿಯೂ ಆದ ಸರ್ವೇಶ್ವರನ ವಿಷಯದಲ್ಲಿ ಅತ್ಯಂತ ಪಾರತಂತ್ರ್ಯ ವಿಶಿಷ್ಟವಾದ ಶೇಷತ್ವವನ್ನು ಅನುಸಂಧಾನ ಮಾಡುವುದೆಂದು ಭಾವ. ಆದುದರಿಂದ ಇದೂ ಒಂದು ಜ್ಞಾನರೂಪವೇ ಎಂದಹಾಗಾಯಿತು.

ಈ ಅನುಸಂಧಾನ ವಿಶೇಷದ ವಿಶಿಷ್ಟಾಕಾರವಾದರೋ — ಶೇಷಿಯೂ ಸ್ವತಂತ್ರನೂ ಆದ ಸರ್ವೇಶ್ವರನಿಗೆ ಸ್ವಪ್ರಯೋಜನಕ್ಕಾಗಿ ತಾನಾಗಿಯೇ ಸಂರಕ್ಷಿಸುವುದಕ್ಕೆ ಅನುಗುಣವಾದ ಅನನ್ಯಾರ್ಹನೂ ಅನನ್ಯಾಧೀನ ಶೇಷಭೂತನೂ ಅತ್ಯಂತ ಪರತಂತ್ರನೂ ಆದ ನಾನು ನನಗೆ ಶೇಷನಾಗಲು ಯೋಗ್ಯನಲ್ಲ, ಪಶುಪುತ್ರಾದಿ ಯಾವುದರ ವಿಷಯದಲ್ಲಿಯೂ ನಿರುಪಾಧಿಕ ಶೇಷಿಯಾಗಲು ಯೋಗ್ಯನೂ ಅಲ್ಲ. "ಸ್ವಯಂ ಮೃತ್ಪಿಂಡ ಭೂತಸ್ಯ ಪರತಂತ್ರಸ್ಯ ದೇಹಿನಃ। ಸ್ವರಕ್ಷಣೇಽಪ್ಯಶಕ್ತಸ್ಯ ಕೋ ಹೇತುಃ ಪರರಕ್ಷಣೇ"? ಎಂದಿರುವಂತೆ, ನನ್ನನ್ನೂ ನನ್ನದೆಂದೆನಿಸಿರುವುದನ್ನೂ ನಾನೇ ಸ್ವತಂತ್ರನಾಗಿಯೂ, ಸ್ವಾಧೀನ ಕರ್ತೃವಾಗಿಯೂ ರಕ್ಷಿಸಿಕೊಳ್ಳಲು ಯೋಗ್ಯನೂ ಅಲ್ಲ. "ಆತ್ಮಾ ರಾಜ್ಯಂ ಧನಂ ಚೈವ ಕಳತ್ರಂ ವಾಹನಾನಿ ಚ । ಏತದ್ಭಗವತೇ ಸರ್ವಂ ಇತಿ ತತ್ಪ್ರೇಕ್ಷಿತಂ ಸದಾ ॥"–ಎಂದು ವಿವೇಕಿಗಳು ಅನುಸಂಧಿಸಿರುವ ಕ್ರಮದಲ್ಲಿ ನಾನು ನನ್ನದೆಂಬುದೆಲ್ಲವೂ ಅವನಿಗೇ ಶೇಷಭೂತ. "ಆತ್ಮಾತ್ಮೀಯ ಭರನ್ಯಾಸೋಹ್ಯಾತ್ಮನಿಕ್ಷೇಪ ಉಚ್ಯತೇ ।"—ಎಂದಿರುವುದರಿಂದ, ಇದನ್ನು ರಕ್ಷಿಸುವ ಭಾರವೂ, "ನಹಿ ಪಾಲನಸಾಮರ್ಥ್ಯಂ ಋತೇ ಸರ್ವೇಶ್ವರಂ ಹರಿಂ ॥"–ಎಂಬಂತೆಯೇ, ಸರ್ವರಕ್ಷ

ನಾದ ಅವನದೇ. "ತೇನ ಸಂರಕ್ಷ್ಯಮಾಣಸ್ಯ ಫಲೇ ಸ್ವಾಮ್ಯನಿಯುಕ್ತತಾ । ಕೇಶವಾರ್ಪಣ ಪರ್ಯನ್ತಾಹ್ಯಾತ್ಮನಿಕ್ಷೇಪ ಉಚ್ಯತೇ ॥"—ಎಂದಿರುವಂತೆಯೇ ರಕ್ಷಣ ಫಲವೂ ಪ್ರಧಾನಫಲಿಯಾದ ಅವನದೇ—ಎಂದು ಭಾವಿಸುವುದು.

ಪ್ರಪತ್ತಿಯೆಂಬುದು ಭರನ್ಯಾಸಾತ್ಮಕವಾದ್ದರಿಂದ -ರಕ್ಷಾಭರಸಮರ್ಪಣವು ಪ್ರಪತ್ತಿಯೊಂದನ್ನು ಬಿಟ್ಟು ಬೇರೆ ಉಪಾಯದಲ್ಲಿ ಶಕ್ತಿಯಿಲ್ಲದವರೆಲ್ಲರಿಗೂ ಸಮಾನ. ಇವರಲ್ಲಿ ಪ್ರಯೋಜನಾಂತರಕ್ಕಾಗಿ ಭರನ್ಯಾಸಮಾಡತಕ್ಕವರಿಗೆ ಸ್ವರೂಪ ಮತ್ತು ಫಲದ ಸಮರ್ಪಣ ಬೇಕಿಲ್ಲ. ಸಕಿಂಚನರಾಗಲಿ - ಅಂಕಿಚನ ರಾಗಲಿ ಮುಮುಕ್ಷುಗಳೆಲ್ಲ ರಿಗೂ ಸ್ವರೂಪ ಮತ್ತು ಫಲಗಳ ಸಮರ್ಪಣ ಸಮಾನ. ಆಕಿಂಚನ (ಭಕ್ತಿಗೆ ಅನಧಿಕಾರಿ) ನಿಗೆಯಾದರೋ ಆತ್ಮ ರಕ್ಷಾಭರ ನ್ಯಾಸವು ಅಧಿಕ - ಇದು ಪ್ರಧಾನವಾಗಿ ಅಂಗಿಯಾಗಿದ್ದುಕೊಂಡಿದೆಯೆಂದು— "ಮುಮುಕ್ಷು ಮಾತ್ರಸಾಮಾನ್ಯಂ ಸ್ವರೂಪಾದಿ ಸಮರ್ಪಣಂ । ಅಂಕಿಚನೇ ಭರನ್ಯಾಸಸ್ತ್ವಧಿಕೋಽಂಗಿತಯಾಸ್ಥಿತಃ ॥ ಅತ್ರ ರಕ್ಷಾಭರನ್ಯಾಸಃ ಸಮಃ ಸರ್ವ ಫಲಾರ್ಥಿನಾಂ । ಸ್ವರೂಪ ಫಲನಿಕ್ಷೇಪಸ್ತ್ವಧಿಕೋ ಮೋಕ್ಷಕಾಂಕ್ಷಿಣಾಂ ॥" —ಎಂಬ ಪ್ರಮಾಣಗಳಿಂದ ಸಿದ್ಧ.

ಹೀಗೆ ಅಂಗಪಂಚಕವಿಶಿಷ್ಟವಾದ ಅಂಗಿ(ಭರನ್ಯಾಸ)ಯ ವಿಚಾರ ಮಾಡುವಾಗ - ಅಂಗಗಳನ್ನು ಪ್ರತ್ಯೇಕವಾಗಿ ಅನುಸಂಧಾನ ಮಾಡುವುದಾದಾಗ್ಯೂ, ವಿಶಿಷ್ಟವಾಕ್ಯಾರ್ಥ ಪ್ರತಿಪತ್ತಿದಶೆಯಲ್ಲಿ ಸಾಂಗವಾದ ಅಂಗಿಯು ಏಕ ಬುದ್ಧಿಗೆ ಆರೂಢವಾಗುವುದರಿಂದ "ಸಕೃದೇವ ಹಿ ಶಾಸ್ತ್ರಾರ್ಥಃ"—ಎಂಬಂತೆ ಸಕೃತ್ಕರ್ತವ್ಯತ್ವವು ಸಿದ್ಧಿಸುತ್ತದೆ. ಅಭ್ಯಾಸ ಪಾಟವವುಳ್ಳ ಧಾನುಷ್ಕನ ಲಕ್ಷ್ಯವೇಧನವು ಅನೇಕ ವ್ಯಾಪಾರಸಾಧ್ಯವಾದರೂ ಬಾಣವನ್ನು ಬಿಡುವುದು ಕ್ಷಣಕೃತ್ಯವಾಗಿರುವುದು ಹೇಗೋ ಹಾಗೆ ಈ ಸಾಂಗಪ್ರಪದನವೂ ಕ್ಷಣ ಕೃತ್ಯ ವೆಂಬುದೂ ಸಿದ್ಧ. ಇದನ್ನು—

ಪ್ರಣವೋ ಧನುಃ ಶರೋಹ್ಯಾತ್ಮಾ ಬ್ರಹ್ಮತಲ್ಲಕ್ಷ್ಯಮುಚ್ಯತೇ ।
ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥"

—ಎಂಬುದಾಗಿ ಶ್ರುತಿಯೂ ದೃಷ್ಟಾಂತೀಕರಿಸಿದೆ. ಸಾಂಗ ಪ್ರಪದನದ ಅನುಷ್ಠಾನ ಕ್ರಮವಾದರೋ - ನಾನು ಕರ್ತೃವಲ್ಲ ಎಂದು ಕರ್ತೃತ್ವತ್ಯಾಗ -

ಈ ಕರ್ಮ ನನ್ನದಲ್ಲ ಎಂದು ಮಮತಾತ್ಯಾಗ-ಫಲನನಗಲ್ಲ ಎಂದು ಫಲತ್ಯಾಗ-ಈ ಫಲಕ್ಕೆ ಉಪಾಯನೂ ಈಶ್ವರನೇ ಹೊರತು ನಾನಲ್ಲ ಎಂದು ಫಲೋಪಾಯತಾ ತ್ಯಾಗಪೂರ್ವಕವಾಗಿ. ಆನುಕೂಲ್ಯಸಂಕಲ್ಪಾದಿಗಳ ಅರ್ಥಾನು ಸಂಧಾನದೊಡನೆ, ಗುರು ಪರಂಪರೋಪಸತ್ತಿಪೂರ್ವಕ, ದ್ವಯವಚನದ ಮೂಲಕ, ಸ್ವರೂಪ ಫಲನ್ಯಾಸಗಳನ್ನೊಳಗೊಂಡ ಆತ್ಮರಕ್ಷಾಭರವನ್ನು ಸರ್ವೇಶ್ವರನಲ್ಲಿ ಸಮರ್ಪಿಸುವುದು.

ಸಂಪ್ರದಾಯವಿಲ್ಲದಿದ್ದಲ್ಲಿ ಶಾಸ್ತ್ರ ಮಾತ್ರ ಪ್ರಮಾಣದಿಂದ ಸಾಂಗಾನುಷ್ಠಾನವನ್ನು ನಿಷ್ಕರ್ಷಿಸಿರುವುದು ಸರಿಯೆ ?—

"ವಪುರಾದಿಷುಯೋऽಪಿಕೋऽಪಿವಾ ಗುಣತೋऽಸಾನಿ ಯಥಾ ತಥಾವಿಧಃ।
ತದಯಂ ತವಪಾದಪದ್ಮಯೋಃ ಅಹಮದ್ಯೈವಮಯಾ ಸಮರ್ಪಿತಃ ॥"

—ಎಂಬಲ್ಲಿ ಸ್ವರೂಪ ಭರಾದಿ ಸಮರ್ಪಣ ರೂಪವಾದ ಅಂಗ್ಯನುಷ್ಠಾನಕ್ಕೆ ಸಂಪ್ರದಾಯವಿದ್ದರೂ, ಆನುಕೂಲ್ಯಾದಿ ಪಂಚಾಂಗ ವಿಶಿಷ್ಟವಾಗಿಯೇ ಅನುಷ್ಠಿಸಬೇಕೆಂಬ ನಿಯಮಕ್ಕೆ ಸಂಪ್ರದಾಯವುಂಟೋ ? - ಎಂದಲ್ಲಿ, ಸಾಂಗಾನುಷ್ಠಾನದ ವಿಷಯವಾಗಿ ಶ್ರೀ ನಡಾದೂರ್ ಅಮ್ಮಾಳ್ ಅನುಗ್ರಹಿಸಿದ ಸಂಗ್ರಹವನ್ನು ಎತ್ತಿ ತೋರಿಸಿದ್ದಾರೆ ; – ಅದರ ಅನುವಾದವಾದರೋ— "ಅನಾದಿ ಕಾಲದಿಂದ ತಮಗೆ ಅನಭಿಮತಾಚರಣವನ್ನೇ ಮಾಡಿದುದರಿಂದ ಸಂಸಾರದಲ್ಲಿ ಸಿಕ್ಕಿಬಿದ್ದಿದ್ದೇನೆ. ಇನ್ನು ಮುಂದೆ ನಿಮಗೆ ಅನುಕೂಲನಾಗಿಯೇ ನಡೆಯುತ್ತೇನೆ. ಪ್ರತಿ ಕೂಲವನ್ನು ಆಚರಿಸುವುದಿಲ್ಲ. ತಮ್ಮನ್ನು ಹೊಂದಲು ನನ್ನ ಕೈಯಲ್ಲಿ ಯಾವುದೂ ಉಪಾಯವಿಲ್ಲ. ತಮ್ಮನ್ನೇ ಉಪಾಯವನ್ನಾಗಿ ನಂಬಿದ್ದೇನೆ. ತಾವೇ ಉಪಾಯವಾಗಬೇಕು. ಅನಿಷ್ಟ ನಿವೃತ್ತಿಯಲ್ಲಾಗಲಿ, ಇಷ್ಟ ಪ್ರಾಪ್ತಿಯಲ್ಲಿಯಾಗಲಿ, ನನಗೆ ಇನ್ನು ಭರವುಂಟೆ ?" – (ಇಲ್ಲವೆಂದು ಭಾವ)—ಎಂಬುದು. ಇದರಲ್ಲಿ, 'ಅನಾದಿ ಕಾಲ' - ಎಂಬುದರಿಂದ ಅದುವರಿಗಿನ ಸ್ಥಿತಿ ಹೇಳಲ್ಪಟ್ಟಿತು. ಇದರಿಂದ ಆಕಿಂಚನ್ಯಾದ್ಯನನ್ಯಗತಿತ್ವರೂಪವಾದ ಅಧಿಕಾರ ಸೂಚಿತ. 'ಇನ್ನು ಮುಂದೆ' ಎಂಬುದರಿಂದ ಆನುಕೂಲ್ಯಸಂಕಲ್ಪ. 'ತಮ್ಮನ್ನೇ' – ಎಂಬುದರಿಂದ ಮಹಾ ವಿಶ್ವಾಸ. 'ತಾವೇ' - ಎಂಬುದರರಿಂದ

ಗೋಪ್ತೃತ್ವವರಣ. "ಅನಿಷ್ಟನಿವೃತ್ತಿ" - ಇತ್ಯಾದಿಯಿಂದ ಭರಕ್ಕೆ ಸ್ವಸಂಬಂಧ ನಿಷೇಧ. ಇಲ್ಲಿ ಸ್ವರೂಪ - ಭರ - ಫಲಗಳ ಪರಸಂಬಂಧದ ವಿಧಾನವೂ, ಸ್ವಸಂಬಂಧದ ನಿಷೇಧವೂ ಹೇಳಲ್ಪಟ್ಟಿದೆ.

ಇಲ್ಲಿ ಆನುಕೂಲ್ಯಸಂಕಲ್ಪದ ಹಾಗೆ ಪ್ರಾತಿಕೂಲ್ಯವರ್ಜನ ಮಹಾ ವಿಶ್ವಾಸಗಳೂ ಸಂಕಲ್ಪರೂಪವಾದ್ದರಿಂದ, ಉಪಾಯಕ್ಕೆ ಅಂಗಗಳಾಗಿ ಸಕೃತ್ ಅಂದರೆ ಒಂದು ಸಲ ಮಾತ್ರ ಅನುಸಂಧೇಯ ಆದಾಗ್ಯೂ! ಅನಂತರ ಉಪಾಯಕ್ಕೆ ಫಲವಾಗಿದ್ದು ಯಾವದಾತ್ಮಭಾವಿಯಾದುದರಿಂದ, ಯಾವ ಜ್ಜೀವವೂ ನಿರಪರಾಧ ಕೈಂಕರ್ಯವನ್ನೂ ಪ್ರಾರಬ್ಧ ಶರೀರಾವಸಾನದಲ್ಲಿ ಮೋಕ್ಷವನ್ನೂ ಫಲವನ್ನಾಗಿ ಸೇರಿಸಿಯೇ ಈ ಪ್ರಪತ್ತಿಯನ್ನು ಅನುಷ್ಠಿ ಸುವವರು ನಿಪುಣರು.

ನ್ಯಸ್ತಭರನಾದವನು ಅನಂತರ "ನಿರ್ಭರೋ ನಿರ್ಭಯೋऽಸ್ಮಿ"—ಎಂಬಂತೆ ನಿರ್ಭರನಾಗಿರಬೇಕೆಂದು ಕೆಳಗಿನ ನಿಗಮನ ಶ್ಲೋಕದಿಂದ ಅಪ್ಪಣೆಕೊಟ್ಟಿದ್ದಾರೆ :-

"ಯುಗ್ಯಸ್ಯನ್ದನ ಸಾರಥಿಕ್ರಮವತಿ ತ್ರಯ್ಯಂತ ಸಂದರ್ಶಿತೇ,
ತತ್ತ್ವಾನಾಂ ತ್ರಿತಯೇ ಯಥಾರ್ಹವಿವಿಧವ್ಯಾಪಾರ ಸಂತಾನಿನಿ ।
ಹೇತುತ್ವಂ ತ್ರಿಷು ಕರ್ತೃಭಾವ ಉಭಯೋಃ ಸ್ವಾಧೀನತೈಕತ್ರತತ್-
ಸ್ವಾಮಿಸ್ವೀಕೃತ ಯದ್ಭರೋऽಯಮಲಸಃ ತತ್ರ ಸ್ವಯಂ ನಿರ್ಭರಃ ॥"-

## ೧೩. ಕೃತಕೃತ್ಯಾಧಿಕಾರ

ಹೀಗೆ ಸ್ವನಿರ್ಭರತ್ವಪರ್ಯಂತವಾದ ಸಾಂಗಭರನ್ಯಾಸವು ನಿಷ್ಪನ್ನವಾದ ಮೇಲೆ ಕೃತಕೃತ್ಯರಾದ್ದರಿಂದ, ಅಂದರೆ, ಅದರಲ್ಲಿ ಕೋರಿದ ಮೋಕ್ಷ ಫಲಕ್ಕಾಗಿ ಮತ್ತೇನನ್ನೂ ಮಾಡಬೇಕಾಗಿಲ್ಲವಾದ್ದರಿಂದ, ಇದುವರಿಗೂ ಕೈಂಕರ್ಯ ದರಿದ್ರ ರಾಗಿದ್ದ ನಾವು ಭಗವತ್ಕೈಂಕರ್ಯದಿಂದ ನಮ್ಮನ್ನು ಕೃತಾರ್ಥರನ್ನಾಗಿ ಮಾಡಿ ಕೊಳ್ಳತಕ್ಕದ್ದೆಂದು ಸ್ವಾನುಷ್ಠಾನದ ಮೂಲಕ ಅಪ್ಪಣೆ ಕೊಡುತ್ತಾರೆ – ಆಚಾರ್ಯರು :

ಸಮರ್ಥೇ ಸರ್ವಜ್ಞೇ ಸಹಜ ಸುಹೃದಿ ಸ್ವೀಕೃತಭರೇ
ಯದರ್ಥಂ ಕರ್ತವ್ಯಂ ನ ಪುನರಿಹ ಯತ್ಕಿಂಚದಪಿ ನಃ ।
ನಿಯಚ್ಛನ್ತಸ್ತಸ್ಮಿನ್ ನಿರುಪಧಿಮಹಾನಂದ ಜಲಧೌ
ಕೃತಾರ್ಥೀ ಕುರ್ಮಃ ಸ್ವಂ ಕೃಪಣಮಪಿ ಕೈಂಕರ್ಯ ಧನಿನಃ ॥

— ಎಂಬುದಾಗಿ.

ಇಲ್ಲಿ 'ಕೃತಕೃತ್ಯ'ರೆಂದರೆ – ಉಪಾಯಾನುಷ್ಠಾನವನ್ನು ಮಾಡಿದವರು. ಅನಂತರ ಕೈಂಕರ್ಯರೂಪ ಪುರುಷಾರ್ಥವುಳ್ಳವರಾದವರು ' ಕೃತಾರ್ಥರು ', 'ಕೃಪಣಮಪಿ ಸ್ವಂ' – ಎಂದರೆ, ಪ್ರಪದನಕ್ಕೆ ಪೂರ್ವದಲ್ಲಿ ಭಗವದನುಭವ ದಿಂದುಂಟಾದ ಕೈಂಕರ್ಯ ಪ್ರಾಪ್ತಿಯಿರಲಿಲ್ಲವಾಗಿ ಶೋಚ್ಯವಾದ ತನ್ನನ್ನು ಈಗ ಕೈಂಕರ್ಯರೂಪವಾದ ಸ್ವರೂಪ ಪ್ರಾಪ್ತ ಪುರುಷಾರ್ಥಾನುಭವದಿಂದ ಕೃತಾರ್ಥ ರನ್ನಾಗಿ ಮಾಡಿ ಕೊಳ್ಳೋಣವೆಂದು ಭಾವ.

ಅಂದರೆ, ಪ್ರಪತ್ತಿಯೆಂಬ ಉಪಾಯ ವಿಶೇಷದಲ್ಲಿ ನೆಲೆಸಿದವನಿಗೆ ಪ್ರಪತ್ತಿಯಾದ ಮೇಲೆ ಅದರ ಫಲದ ಬಗ್ಗೆ ಇವನು ಮಾಡಬೇಕಾದುದೇನೂ ಇಲ್ಲ. ಕರ್ತವ್ಯಾಂಶವು ಒಂದು ಸಲ ಪ್ರಪತ್ತಿಯನ್ನು ಅನುಷ್ಠಿಸಿದುದರಿಂದಲೇ ಸಿದ್ಧವಾಗಿದೆ. ಸ್ವತಂತ್ರನೂ ಸತ್ಯಸಂಕಲ್ಪನೂ ಆದ ಭಗವಂತನಲ್ಲಿ ತಾನು ಭರವನ್ನು ಇಟ್ಟಿರುವುದರಿಂದ ತಾನೂ ನಿರ್ಭರನೆಂಬುದನ್ನು ನಿಶ್ಚಯಿಸಿಕೊಂಡು ಆ ಸರ್ವೇಶ್ವರನೇ ಫಲ ಪ್ರದನೆಂದು ನೆನೆದು ನಿಸ್ಸಂಶಯನಾಗಿ, ಅನ್ಯ ಪುರುಷಾ ರ್ಥಗಳನ್ನು ಅವುಗಳ ವಾಸನೆಯೂ ಇಲ್ಲದ ಹಾಗೆ ಬಿಟ್ಟು ಅನ್ಯೋಪಾಯ ಗಳನ್ನೂ ಅವುಗಳ ಸಾಧನಗಳೊಂದಿಗೆ ಬಿಟ್ಟ ಅಕಿಂಚನನಿಗೆ, ತನ್ನ ಯತ್ನವಿಲ್ಲದೆಯೇ ದೊಡ್ಡ ನಿಧಿ ಸಿಕ್ಕಿದರೆ ಹೇಗೋ ಹಾಗೆ, ತನಗೆ ಪರಮ ಪುರುಷಾರ್ಥ ಸಿದ್ಧಿಸಿರುವುದನ್ನು ನೋಡಿ ಸಂತುಷ್ಟನಾಗಿ, ಸ್ವಸಜಾತೀಯ ರಾದ ಅಗ್ನೀಂದ್ರಾದಿ ದೇವತಾಂತರಗಳ ಸೇವೆಗೆ ಕಾರಣೀ ಭೂತವಾದ ಯಜ್ಞಾ ದಿ ಋಣ ಕಳೆದು ಹೋದುದರಿಂದ, ನಿತ್ಯ ನೈಮಿತ್ತಿಕ ಕರ್ಮಗಳ ಮಂತ್ರಗಳ ಲ್ಲಿಯ ಅಗ್ನೀಂದ್ರಾದಿ ಶಬ್ದಗಳಿಗೆ ಅವಯವಾರ್ಥ ಪೌಷ್ಕಲ್ಯದಿಂದ ನಾರಾಯಣ ಪರವಾಗಿಯೇ ಅರ್ಥವೆಂದು ತಿಳಿದು, ಶಾಸ್ತ್ರವೇದ್ಯವಾದ ಆಜ್ಞಾನುಜ್ಞಾ ಪರಿ ಪಾಲನರೂಪ ಕೈಂಕರ್ಯಗಳ ಮೂಲಕ ಪ್ರತ್ಯಕ್ಷವಾಗಿ ಪರಮಪುರುಷಾಭಿಪ್ರಾಯ

ವನ್ನು ಅರಿತ ಮುಕ್ತರಂತೆ ಭಗವಂತನಿಗೆ ಯಕ್ಕಿಂಚಿತ್ ಸೇವೆ ಸಲ್ಲಿಸುವವನಾಗಿ, ಉಪಾಯವು ಪೂರ್ತಿಯಾದ್ದರಿಂದ ಕೃತಕೃತ್ಯನೆಂದೂ, ಪುರುಷಾರ್ಥಪೂರ್ತಿಯಿಂದ ಕೃತಾರ್ಥನೆಂದೂ ಶಾಸ್ತ್ರಗಳಿಂದಲೂ, ಶಾಸ್ತ್ರಜ್ಞರಿಂದಲೂ ಇವನು ಕೊಂಡಾಡಲ್ಪಡುತ್ತಾನೆಯೆಂದು-"ತೇಷಾಂ ರಾಜನ್ ಸರ್ವಯಜ್ಞಾಸ್ಸಮಾಪ್ತಾಃ"-ದೇವರ್ಷಿಭೂತಾತ್ಮನೃಣಾಂ ಪಿತೄಣಾಂ ನ ಕಿಂಕರೋ ನಾಯಮೃಣೀಚ ರಾಜನ್ । ಸರ್ವಾತ್ಮನಾ ಯಶ್ಶರಣಂ ಶರಣ್ಯಂ ನಾರಾಯಣಂ ಲೋಕ ಗುರುಂ ಪ್ರಪನ್ನಃ॥" -"ದತ್ತಂ ಯುಷ್ಮನ್ಮುಕಾತ್ ಭುಂಕ್ತೇ ಹರಿಃ ಸ್ವರ್ಗಾದಿಕಾಂಕ್ಷಿಭಿಃ ।ಮುಮುಕ್ಷುಭಿಸ್ತಥಾ ಭುಂಕ್ತೇ ಸ್ವಯಮೇವ ಜನಾರ್ದನಃ॥"-(ಶ್ರೀಹಸ್ತಿಗಿಮಹಾತ್ಮ್ಯ) – ಇತ್ಯಾದ್ಯನೇಕ ಪ್ರಮಾಣಗಳಿಂದ ಸಿದ್ಧವಾಗಿದೆ.

ಇಂತಹ ಮುಮುಕ್ಷುವಿಗೆ ಪ್ರಪತ್ತಿಗೆ ಮೊದಲು ಉಂಟಾದ ಶೋಕವು ಪ್ರಪತ್ತ್ಯಧಿಕಾರದಲ್ಲಿಯೇ ಸೇರಿರುವುದರಿಂದ ಆ ಶೋಕವಿಲ್ಲದಿದ್ದಲ್ಲಿ ಅಧಿಕಾರ ಪೂರ್ತಿಯಾಗದ್ದರಿಂದ ಉಪಾಯ ಪೂರ್ತಿಯೂ ಆಗದು. ಪ್ರಪತ್ತಿಯಾದ ಮೇಲೆ ತಾನು ಪ್ರಪತ್ತಿಯಾಚರಿಸಿದ`ದನ್ನು ತಿಳಿದೂ ವಿಶ್ವಾಸ ಮಾಂದ್ಯವೇ ಮುಂತಾದ್ದರಿಂದ ಶೋಕಿಸಿದ್ದೇ ಆದರೆ ಆಗಲೂ ಉಪಾಯ ಪೂರ್ತಿಯಾಗದು. ಆಗ್ಗೆ ಉಪಾಯ ಪೂರ್ತಿ ಸಾಪೇಕ್ಷವಾಗಿ, ಫಲಕ್ಕೂ ವಿಳಂಬವಾಗುವುದು. ಆದ್ದರಿಂದ ಕೃತಕೃತ್ಯನಾಗನು, ಆದ್ದರಿಂದ ಶೋಕ ಪಡದವನೇ ಕೃತಕೃತ್ಯ. ಮುಂದೆ ಸಂಸಾರ ನಿವೃತ್ತಿಗಾಗಿ ಇವನಿಗೆ ಬೇರೇನೂ ಮಾಡಬೇಕಾದ್ದು ಇಲ್ಲದಿದ್ದಾಗ್ಯೂ, ಬದುಕಿರುವವರೆಗೂ ಜೀವನಕ್ಕಾಗಿ ದ್ರವ್ಯಾರ್ಜನಾದಿ ಕರ್ತವ್ಯವಿದ್ದೇ ಇದೆಯಲ್ಲವೆ? ಇವನು ಕೃತಕೃತ್ಯನೆಂಬುದು ಹೇಗೆ ?—ಎಂದಲ್ಲಿ, ಇವನ ಜೀವನ ಕ್ರಮವು ಪ್ರಾಚೀನ ಕರ್ಮಾಧೀನವಾಗಿ ನಡೆಯುತ್ತದೆಯಾದ್ದರಿಂದ ಅದರಲ್ಲಿಯೂ ಇವನು ನಿರ್ಭರನೇ ಸರಿ-ಎನ್ನುತ್ತಾರೆ ;—

ಭಗವತಿ ಹರೌ ಪಾರಂ ಗಂ ತುಂ ಭರನ್ಯಸನಂ ಕೃತಂ
ಪರಿಮಿತ ಸುಖಪ್ರಾಪ್ತ್ಯೈ ಕೃತ್ಯಂ ಪ್ರಹೀಣಮಕೃತ್ಯವತ್ ।
ಭವತಿ ಚ ನಷ್ಟವೃತ್ತಿಃ ಪೂರ್ವಂ ಕೃತೈರ್ನಿಯತ ಕ್ರಮಾ
ಪರಮಿಹ ವಿಭೋರಾಜ್ಞಾ ಸೇತು ರ್ಬುಧೈರನು ಪಾಲ್ಯತೇ॥—ಎಂಬುದಾಗಿ;

ಆದ್ದರಿಂದ ಆಜ್ಞಾಕೈಂಕರ್ಯದಿಂದ ಕಾಲವನ್ನು ಕಳೆಯ ಬೇಕೆಂದು ತಾತ್ಪರ್ಯ.

## ೧೪. ಸ್ವನಿಷ್ಠಾಭಿಜ್ಞಾನಾಧಿಕಾರ.

[ಅಭಿಜ್ಞಾನ=ಲಕ್ಷಣ—ಸ್ವನಿಷ್ಠೆಯ ಲಕ್ಷಣವೆಂದರ್ಥ]

ಹೀಗೆ ನಿರ್ಭರತೆಗೆ ಹೇತುವಾದ ಕೈಂಕರ್ಯಗಳ ಪರಂಪರೆಯಿಂದ ಕೃತ ಕೃತ್ಯನಾದ ಪ್ರಪನ್ನನು ತನ್ನ ಸ್ವರೂಪ-ಉಪಾಯ-ಪುರುಷಾರ್ಥ ನಿಷ್ಠೆಯಲ್ಲಿ ಸುದೃಢವಾದ ಜ್ಞಾನವುಳ್ಳವನಾಗಿರಬೇಕು, ಇದೇ ಸ್ವನಿಷ್ಠಾಭಿಜ್ಞಾನವೆಂಬುದು. ಈ ಜ್ಞಾನವು ಮೋಕ್ಷಕ್ಕಿಂತ ಅತ್ಯಂತ ಭೋಗ್ಯವಾದುದು. ಅಷ್ಟೇ ಅಲ್ಲ; ಅನರ್ಥಗಳನ್ನು ಪರಿಹರಿಸತಕ್ಕದ್ದಿದು. ಆಚಾರ್ಯರಿಂದ ಇಂತಹ ಜ್ಞಾನವನ್ನು ಪಡೆದ ಪ್ರಪನ್ನನು ಈ ಸ್ವನಿಷ್ಠಾಭಿಜ್ಞಾನದ ದಾರ್ಢ್ಯದಿಂದ ಭಯಂಕರಗಳೂ, ತಡೆಯಲಾಗದವುಗಳೂ, ಅತಿ ವಿಸ್ತೀರ್ಣಗಳೂ ಆದ ಕಾಮ-ಕ್ರೋಧ-ಲೋಭ-ತೃಷ್ಣಾ-ಮೋಹ-ಮದ - ಮಾತ್ಸರ್ಯಾದಿ ಛಿದ್ರ ನಿವಹಗಳನ್ನು ಅವುಗಳ ಉತ್ಪತ್ತಿಕಾಲದಲ್ಲಿಯೇ ತಡೆಯಲು ಸಮರ್ಥನಾಗುತ್ತಾನೆಯೆಂದು ಕೆಳಗಿನ ಶ್ಲೋಕದಿಂದ ಅಧಿಕಾರಾಂಭದಲ್ಲಿಯೇ ತಿಳಿಸಿದ್ದಾರೆ.

ಸ್ವರೂಪೋಪಾ ಯಾರ್ಥೇಷ್ವವಿತಥ ನಿವಿಷ್ಟ ಸ್ಥಿರಮತೇಃ
ಸ್ವರೂಪಾಭಿಜ್ಞಾನಂ ಸುಭಗಮಪವರ್ಗಾ ದುಪನತಾತ್ ।
ಪ್ರಥಿಮ್ನಾ ಯಸ್ಯಾ ಸೌ ಪ್ರಭವತಿ ವಿನೀತಃ ಸ್ಥಗಯಿತುಂ
ಗಭೀರಾನ್ ದುಷ್ಪೂರಾನ್ ಗಗನಮಹತಃ ಛಿದ್ರನಿವಹಾನ್॥

ಸ್ವರೂಪವೆಂಬುದು – ಅಚಿತ್ತಿಗಿಂತ ಇದಕ್ಕೆ ಇರುವ ವೈಲಕ್ಷಣ್ಯ
ಉಪಾಯವೆಂಬುದು–ಶ್ರೀರಹಸ್ಯತ್ರಯದಲ್ಲಿ ಪ್ರತಿಪಾದ್ಯವಾದ ಪ್ರಪತ್ತಿ-
ಅರ್ಥವೆಂದರೆ-ಪುರುಷಾರ್ಥ-ಅಂದರೆ ಪರಮಪುರುಷಾರ್ಥವಾದ ಮೋಕ್ಷ.

ಈ ಸ್ವರೂಪ, ಉಪಾಯ, ಪುರುಷಾರ್ಥಗಳಲ್ಲಿ ತನಗೆ ನಿಷ್ಠೆಯಿದೆ-ಯೆಂಬುದನ್ನು ಪ್ರಪನ್ನಾಧಿಕಾರಿಯು ಅರಿಯುವುದು ಹೇಗೆ ಅಂದರೆ:

(1) ಇತರರು ಯಾರಾದರೂ ತನ್ನನ್ನು ದೂಷಿಸಿದಲ್ಲಿ ಆ ದೂಷಣವು ಶರೀರಕ್ಕೆ ಮಾತ್ರವೇ ಹೊರತು ತನ್ನ ಸ್ವರೂಪಕ್ಕೆ ತಟ್ಟದೆಂಬುದನ್ನು ಕಂಡು, ಅವುಗಳ ಬಗ್ಗೆ ವಿಷಾದಗೊಳ್ಳದಿರುವುದು. ಹೀಗಾದಲ್ಲಿ ಅಚೇತನಕ್ಕಿಂತ ತಾನು ವಿಲಕ್ಷಣ ಸ್ವರೂಪನೆಂಬ ನಿಷ್ಠೆಯುಳ್ಳವನೆಂದು ತಿಳಿಯಬಹುದು.

(2) "ಶಪ್ಯಮಾನಸ್ಯ ಯತ್ಪಾಪಂ ಶಪನ್ತಮಧಿಗಚ್ಛತಿ" ಎಂಬಂತೆಯೇ ದೂಷಣಾದಿಗಳಿಂದ ತನ್ನ ಪಾಪವನ್ನು ತೆಗೆದುಕೊಳ್ಳುವ ಆ ಬುದ್ಧಿಭ್ರಷ್ಟರ "ಬದ್ಧವೈರಾಣಿ ಭೂತಾನಿ ದ್ವೇಷಂ ಕುರ್ವನ್ತಿಚೇತ್ತತಃ । ಶೋಚ್ಯಾನ್ಯಹೋಽತಿ ಮೋಹೇನ ವ್ಯಾಪ್ತಾನೀತಿ ಮನೀಷಿಣಾ॥ ಆತ್ಮದ್ರುಹ ಮಮರ್ಯಾದಂ ಮೂಢಮುಜ್ಝಿತ ಸತ್ಪಥಂ । ಸುತರಾವ-ನುಕಂಪೇತ ನರ ಕಾರ್ಚಿಷ್ಮದಿಂಧನಂ ॥" ಎಂಬಂತೆಯೇ ಅತಿಯಾದ ಕೃಪೆಯಿದ್ದಲ್ಲಿ ಇದು ಆನುಕೂಲ್ಯ ಜ್ಞಾನದ ಕಾರ್ಯವಾದ್ದರಿಂದ ಸರ್ವ ಭೂತಗಳ ವಿಷಯದಲ್ಲಿಯೂ ಅನುಕೂಲ್ಯದಿಂದ ವರ್ತಿಸಬೇಕೆಂಬ ಸ್ವರೂಪ ಜ್ಞಾನದಲ್ಲಿ ನಿಷ್ಠೆಯಿದೆಯೆಂದು ತಿಳಿಯಬಹುದು.

(3) "ಅಮರ್ಯಾದಃ ಕ್ಷುದ್ರಃ ಚಲಮತಿರಸೂಯಾಪ್ರಸವಭೂಃ ಕೃತಘ್ನೋ ದುರ್ಮಾನೀ ಸ್ಮರಪರವಶೋ ವಂಚನಪರಃ। ನೃಶಂಸಃ ಪಾಪಿಷ್ಠಃ" –ಎಂಬ ಶ್ಲೋಕದಿಂದಲೂ, "ಪಾಡಿನೇನ್ ಪಾಡಿ ವರುನ್ದಿನೇನ್ ಮನತ್ತಾಲ್" ಎಂಬುದೇ ಮೊದಲಾದ ಆಳ್ವಾರುಗಳ ಪಾಶುರಗಳಿಂದಲೂ ತನಗೆ ಅನುಸಂಧೇಯವಾಗಿ ಉದಾಹರಿಸಿರುವ ದೋಷಗಳನ್ನು ಪರಿವಾದಾದಿಗಳಿಂದ ಮರೆಯದ ಹಾಗೆ ಮಾಡಿದರೆಂಬ ಉಪಕಾರ ಸ್ಮೃತಿಯಿರುವಲ್ಲಿ, – ಸರ್ವತೋಮುಖವಾದ ಆಕಿಂಚನ್ಯ ಸ್ವರೂಪದಲ್ಲಿ ನಿಷ್ಠೆಯುಂಟೆಂದು ತಿಳಿಯಬಹುದು.

(4) ಎಲ್ಲ ಆತ್ಮರೂ ಸ್ವರೂಪತಃ ಭಗವಂತನಿಗೆ ಪರತಂತ್ರರೆಂಬುದನ್ನೂ ಕರ್ಮವಶ್ಯರೆಂಬುದನ್ನೂ ಕಂಡು, ಆ ಸ್ವತಂತ್ರ ಶೇಷಿಯ ಪ್ರೇರಣೆಯಿಂದಲೇ ಅವರು ಪರಿಭವಾದಿಗಳನ್ನೂ ಮಾಡುತ್ತಾರೆಯೆಂಬುದಾಗಿ ಅವರುಗಳ ವಿಷಯದಲ್ಲಿ ನಿರ್ವಿಕಾರಚಿತ್ತನಾಗಿರುವಲ್ಲಿ, ಕರ್ಮಾನುರೂಪವಾಗಿ ಫಲಪ್ರದನಾದ ಸರ್ವಶೇಷಿಯ ಯಥೇಷ್ಟವಿನಿಯೋಗಾರ್ಹವೂ ಅನನ್ಯಾರ್ಹವೂ ಆದ ಶೇಷತ್ವ ಪಾರತಂತ್ರ್ಯ ಸ್ವರೂಪದಲ್ಲಿ ತನಗೆ ನಿಷ್ಠೆಯುಂಟೆಂದು ನಿರ್ಣಯಿಸಬಹುದು.

(5) ಅನುಭವೈಕವಿನಾಶ್ಯವಾದ ಅಭ್ಯುಪಗತ ಪ್ರಾರಬ್ಧದಲ್ಲಿ ಸ್ವಲ್ಪ ಭಾಗವು ಫಲವನ್ನು ಕೊಟ್ಟು ಕಳೆದು ಹೋಯಿತೆಂದು ಸಂತೋಷಪಟ್ಟಲ್ಲಿ ಪರಾಧೀನ ಹಿತಸಿದ್ಧಿ ಸ್ವರೂಪದಲ್ಲಿ ನಿಷ್ಠೆಯಿದೆಯೆಂದು ತಿಳಿಯಬಹುದು. "ಹರಿರ್ದುಃಖಾನಿ ಭಕ್ತೇಭ್ಯೋ ಹಿತ ಬುದ್ಧ್ಯಾ ಕರೋತಿ ಹಿ ॥

ಶಸ್ತ್ರಕ್ಷಾರಾಗ್ನಿ ಕರ್ಮಾಣಿ ಸ್ವಪುತ್ರಾಯ ಯಥಾ ಪಿತಾ॥ ಯದ್ಧಿತಂ ಪರಿಮಾ ದೇವೇಶತದಾಜ್ಞಾಪಯ ಮಾಧವ" — ಎಂದರೆ "ದುಃಖ ರೂಪವಾದರೂ ಹಿತವಾದಲ್ಲಿ ಅದನ್ನು ಆಜ್ಞಾಪಿಸು" ಇತ್ಯಾದಿ ಪ್ರಮಾಣಗಳು ಇಲ್ಲಿ ಭಾವ್ಯ. ಇಷ್ಟು ಸ್ವರೂಪನಿಷ್ಠೆಯನ್ನು ಅರಿತುಕೊಳ್ಳುವ ಉಪಾಯಗಳು. ಇನ್ನು ಉಪಾಯನಿಷ್ಠೆಯನ್ನು ತಿಳಿದುಕೊಳ್ಳಲಿರುವ ಚಿಹ್ನೆಗಳು ಯಾವುವೆಂದರೆ (1) ಭಗವದ್ವ್ಯತಿರಿಕ್ತರು ತನಗೆ ರಕ್ಷಕರಲ್ಲವೆಂಬ ಬುದ್ಧಿಯೂ, (2) ಮೃತ್ಯು ಪರ್ಯಂತವಾದ ಭಯಹೇತುಗಳನ್ನು ಕಂಡಾಗಲೂ, " ಪ್ರಾಯೇಣಾಕೃತ ಕೃತ್ಯತ್ವಾತ್ ಮೃತ್ಯೋರುದ್ವಿಜತೇ ಜನಃ। ಕೃತಕೃತ್ಯಾಃ ಪ್ರತೀಕ್ಷನ್ತೇ ಮೃತ್ಯುಂ ಪ್ರಿಯಮಿವಾತಿಥಿಂ॥"—ಎಂಬಂತೆಯೇ ಹೆದರದಿರುವುದೂ, (3) ಇಷ್ಟವಾದ ಮೋಕ್ಷದಲ್ಲಿ ಆಸಕ್ತಿಯಿಂದ ಪ್ರೀತನಾಗಿರುವುದೂ, (4) "ಗಜಂವಾ ವೀಕ್ಷ್ಯ ಸಿಂಹಂ ವಾ ವ್ಯಾಘ್ರಂವಾಪಿ ವರಾನನಾ । ನಾಹಾರಯತಿ ಸಂತ್ರಾಸಂ ಬಾಹೂ ರಾಮಸ್ಯ ಸಂಶ್ರಿತಾ॥"—ಎಂದೂ, "ಅಸಂದೇಶಾತ್ತು ರಾಮಸ್ಯ ತಪಸ-ಶ್ಚಾನುಪಾಲನಾತ್। ನತ್ವಾಂ ಕುರ್ಮಿ ದಶಗ್ರೀವ ಭಸ್ಮಭಸ್ಮಾರ್ಹ ತೇಜಸಾ"-ಎಂದೂ, "ಶರೈಸ್ತು ಸಂ ಕುಲಾಂ ಕೃತ್ವಾ ಲಂಕಾಂ ಪರ ಬಲಾರ್ದನಃ । ಮಾಂ ನಯೇದ್ಯದಿ ಕಾಕುತ್‌ಸ್ಥಃ ತತ್ತಸ್ಯ ಸದೃಶಂ ಭವೇತ್॥"-ಎಂದೂ, ಶ್ರೀ ಸೀತಾ ದೇವಿಯು ತನ್ನ ನಡತೆಯಿಂದ ತೋರಿಸಿದ, ರಕ್ಷಕಾಶ್ರಯದಿಂದ ಉಂಟಾದ ಧೈರ್ಯವೂ, (5) ತಾನು ಭರನ್ಯಾಸ ಮಾಡಿದ ವಿಷಯದಲ್ಲಿ ಸ್ವಯತ್ನ ನಿವೃತ್ತಿಯೂ, (6) ಅದರಲ್ಲಿ ಅನಿಷ್ಟ ನಿವೃತ್ತಿ ಮತ್ತು ಇಷ್ಟಪ್ರಾಪ್ತಿಯು ಅವನೊಬ್ಬನಿಂದ ಮಾತ್ರವೇ ಸಾಧ್ಯವೆಂಬ ನಿಶ್ಚಯದಿಂದಿರುವುದೂ, ಶ್ರೀರಹಸ್ಯ ತ್ರಯದಲ್ಲಿ ವಿವಕ್ಷಿತವಾದ ಉಪಾಯದಲ್ಲಿ ತನಗೆ ನಿಷ್ಠೆಯುಂಟೆಂದು ತಿಳಿಸುವ ಚಿಹ್ನೆಗಳು.

ಇನ್ನು ಪುರುಷಾರ್ಥದಲ್ಲಿ ತನಗೆ ನಿಷ್ಠೆಯುಂಟೆಂಬುದಕ್ಕೆ ಜ್ಞಾಪಕವಾದವು ಗಳೆಂದರೆ,— (1) "ಉತ್ಪತ್ತಿ ಸ್ಥಿತಿನಾಶಾನಾಂ ಸ್ಥಿತೌ ಚಿಂತಾ ಕುತಸ್ತವ । ಯಥೋತ್ಪತ್ತಿರ್ಯಥಾನಾಶಃ ಸ್ಥಿತಿ ಸ್ತದ್ವದ್ಭವಿಷ್ಯತಿ ॥" — "ಅಚೇಷ್ಟಮಾನ ಮಾಸೀನಂ ಶ್ರೀಃ ಕಂಚಿದುಪತಿಷ್ಠತಿ। ಕರ್ಮೀ ಕರ್ಮಾನುಸೃತ್ಯಾನ್ಯೋ ನ ಪ್ರಾಶ್ಯಮಧಿಗಚ್ಛತಿ॥ ಎಂಬಂತೆಯೇ, ಪ್ರಾರಬ್ಧಕರ್ಮವಿಶೇಷಕ್ಕೆ ಅಧೀನ

ವಾಗಿ ಈಶ್ವರನು ನಡೆಸುವ ದೇಹ ಯಾತ್ರಾದಿಗಳಲ್ಲಿ ತಾನು ಆಸಕ್ತಿಗೊಳ್ಳದಿರುವುದು ಅಥವಾ ಶ್ರಮ ತೆಗೆದುಕೊಳ್ಳದಿರುವುದೂ, (2) ಅತ್ಯಾಯಾಸಪಟ್ಟಾಗ್ಯೂ, "ಉತ್ಪತನ್ನಪಿ ಚಾಕಾಶಂ ವಿಶನ್ನಪಿ ರಸಾತಲಂ। ಅಟನ್ನಪಿ ಮಹೀಂ ಕೃತ್ಸ್ನಾಂ ನಾದತ್ತಮುಪತಿಷ್ಠತೇ ॥ ಯತ್ಕಿಂಚಿದ್ವರ್ತತೇ ಲೋಕೇ ಸರ್ವಂ ತನ್ಮದ್ವಿಚೇಷ್ಟಿತಂ। ಅನ್ಯೋಽಹ್ಯನ್ಯಚ್ಚಿಂತಯತಿ ಸ್ವಚ್ಛನ್ದಂ ವಿದಧಾಮ್ಯಹಂ॥"– ಎಂಬಂತೆಯೇ ಭಗವತ್ಸಂಕಲ್ಪವಿಲ್ಲದೆ ಒಂದೂ ನಡೆಯುವುದಿಲ್ಲವೆಂದಿರುವುದೂ, (3) "ಅಪ್ರಯತ್ನಾಗತಾಸ್ಸೇವ್ಯಾಃ ಗೃಹಸ್ಥೈಃ ವಿಷಯಾಸ್ಸದಾ। ಪ್ರಯತ್ನೇನಾಪಿ ಕರ್ತವ್ಯಃ ಸ್ವಧರ್ಮ ಇತಿ ಮೇ ಮತಿಃ॥" – "ನಾಹಾರಂ ಚಿಂತಯೇತ್ ಪ್ರಾಜ್ಞಃ ಧರ್ಮಮೇವಾನುಚಿನ್ತಯೇತ್। ಆಹಾರೋ ಹಿ ಮನುಷ್ಯಾಣಾಂ ಜನ್ಮನಾ ಸಹ ಜಾಯತೇ॥"–ಎಂದು ಶ್ರೀಪರಾಶರ ಗೀತಾದಿಗಳಲ್ಲಿಯೂ. "ನ ಸನ್ನಿಪತಿತಂ ಧರ್ಮ್ಯಮುಪಭೋಗಂ ಯದೃಚ್ಛಯಾ। ಪ್ರತ್ಯಾಚಕ್ಷೇ ನ ಚಾಪ್ಯೇನ ಮನುರುನ್ಧೇ ಸು ದುರ್ಲಭಂ॥"– ಎಂದು ಅಜಗರೋಪಾಖ್ಯಾನದಲ್ಲಿಯೂ ಹೇಳಿರುವ ಹಾಗೆಯೇ ಶಾಸ್ತ್ರವಿರುದ್ಧವಲ್ಲದ, ತಾನಾಗಿ ಒದಗಿ ಬಂದ ವಿಷಯವನ್ನು ಪ್ರತಿಷೇಧಿಸದೆ ಅನುಭವಿಸುವುದೂ, (4) ಹೀಗೆ ಕರ್ಮವಿಶೇಷಾಧೀನವಾಗಿ ಬರುವ ಐಹಿಕಹಾನಿ ವೃದ್ಧಿಗಳಲ್ಲಿ, "ತಯೋರೇಕತರೋರಾಶಿಃ ಯದ್ಯೇನ ಮುಪಸನ್ನಮೇತ್। ನ ಸುಖಂ ಪ್ರಾಪ್ಯ ಸಂಹೃಷ್ಯೇತ್ ದುಃಖಂ ಪ್ರಾಪ್ಯ ನ ಸಂಜ್ವರೇತ್॥" – ಎಂದು ಹರ್ಷಶೋಕಗಳಿಲ್ಲದಿರುವುದೂ, (5) ಸ್ವರೂಪಕ್ಕೆ ಅನುರೂಪವಾದ ಪರಮ ಪ್ರಾಪ್ಯ ಕೈಂಕರ್ಯದಲ್ಲಿ ರುಚಿಯೂ, (6) ಶ್ರೀಮದಾಳವಂದಾರ್ ಸ್ತೋತ್ರದಲ್ಲಿಯೂ, ಶ್ರೀ ವೈಕುಂಠಗದ್ಯಾದಿಗಳಲ್ಲಿಯೂ, "ಕದಾ ಕದಾ"-ಎಂದು ಪ್ರಲಪಿಸುವಂತೆ ಮಾಡುವ ಪ್ರಾಪ್ಯದಲ್ಲಿ ತ್ವರೆಯೂ ಇದ್ದಲ್ಲಿ, 'ನಾರಾಯಣ' – ಶಬ್ದದಲ್ಲಿಯ ಚತುರ್ಥಿಯಿಂದಲೂ, ದ್ವಯದಲ್ಲಿ ಚತುರ್ಥೀ ಮತ್ತು 'ನಮಸ್'-ಶಬ್ದಗಳಿಂದಲೂ, ಚರಮ ಶ್ಲೋಕದಲ್ಲಿ, "ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ"–ಎಂಬ ವಾಕ್ಯದಲ್ಲಿಯೂ ತೋರಿಸಲ್ಪಟ್ಟ ಅಳವಿಲ್ಲದ ಪರಮ ಪುರುಷಾರ್ಥದಲ್ಲಿ ತನಗೆ ನಿಷ್ಠೆಯುಂಟೆಂದು ತಿಳಿಯಬಹುದು.

ಹೀಗೆ ತನ್ನಲ್ಲಿ ನಿಷ್ಠಾತ್ರಯ ಸಂಪತ್ತಿಯನ್ನು ತಿಳಿದ ಅಧಿಕಾರಿಗೆ ಬ್ರಹ್ಮವಿದಪಚಾರಾದಿ ವ್ಯತಿರಿಕ್ತಗಳಾದ ಭಯ ಹೇತುಗಳಲ್ಲಿಯೂ, ಸ್ವರೂಪ ಪ್ರಾಪ್ತ

ಕೈಂಕರ್ಯ ವ್ಯತಿರಿಕ್ತಗಳಾದ ಪ್ರೀತಿಹೇತುಗಳಲ್ಲಿಯೂ ಅಪೇಕ್ಷೆಯುಂಟಾಗದು. ಯಾದೃಚ್ಛಿಕವಾಗಿ ಉಂಟಾದಾಗ್ಯೂ, ಭೀತಿಯಾಗಲಿ, ಪ್ರೀತಿಯಾಗಲಿ ಉಂಟಾಗದು. ಇದರಿಂದ, ಬ್ರಹ್ಮವಿದಪಚಾರಾದಿಗಳಲ್ಲಿ ಅತಿಭೀತಿಯೂ, ಕೈಂಕರ್ಯಾದಿಗಳಲ್ಲಿ ಅತಿ ಪ್ರೀತಿಯೂ ಈ ನಿಷ್ಠಾತ್ರಯವುಳ್ಳವನಿಗೆ ಉಂಟೆಂದು ಸಿದ್ಧವಾಗುತ್ತದೆ.

ಹೀಗೆ ಈ ಪ್ರಪನ್ನಾಧಿಕಾರಿಯು ನಿತ್ಯಸೂರಿಗಳಿಗೆ ತುಲ್ಯನಾದಲ್ಲಿ, "ಕಾಮಾತಂಕಮುಪೇತ್ಯಕೋಪದಹನಂ ನಿರ್ವಾಪ್ಯ ವಿತ್ತಸ್ಪೃಹಾ ವೇತಾಳೀಂ ವ್ಯಪನೀಯ ಬಾಂಧವ ಕಥಾ ಗರ್ತಂ ಸಮುತ್ತೀರ್ಯ ಚ। ಸಂಗೋತ್ತಂಸಿತ ವಾಸನಾ ಸಹಚರಃ ಸಂಸಾರಕಾರಾಕುಟೀ ನಿಷ್ಕ್ರಾನ್ತಿಕ್ರಮುಪಾದುಕಾಂ ತನುಮನುದ್ವಿಗ್ನೋ ಮುನಿಃ ಕ್ಷಾಮ್ಯತಿ॥"—ಎಂಬಂತೆಯೇ ಅತ್ಯಂತ ಬಾಧಕ ಸ್ವಭಾವದ ಕಾರಾಗೃಹದಂತಹ ಶರೀರವನ್ನು ಅನುದ್ವಿಗ್ನನಾಗಿ ಇನ್ನೂ ಸ್ವಲ್ಪಕಾಲ ಇರಲೆಂದು ಅಂಗೀಕರಿಸಬಹುದೋ ? ಇಂತಹ ಶರೀರದಲ್ಲಿ ಅನಾದಿ ದುರ್ವಾಸನೆಯಿಂದ ಕೂಡಿದ ಇವನಿಗೆ ಸ್ವನಿಷ್ಠಾಭಿ ಜ್ಞಾನವು ಸ್ವಂತಯತ್ನದಿಂದ ಸಿದ್ಧಿಸುವುದೇ ?—ಎಂಬ ಶಂಕೆಯನ್ನು ಕೆಳಗಿನ ಶ್ಲೋಕದಿಂದ ಪರಿಹರಿಸುತ್ತಾರೆ:— "ಸ್ವಾಪೋದ್ಬೋಧವ್ಯತಿಕರನಿಭೇ ಭೋಗಮೋಕ್ಷಾನ್ತರಾಳೇ, ಕಾಲಂ ಕಂಚಿಜ್ಜಗತಿ ವಿಧಿನಾ ಕೇನಚಿತ್ ಸ್ಥಾಪ್ಯಮಾನಾಃ । ತತ್ರೋಪಾಯ ಪ್ರಭೃತಿ ವಿಷಯೇ ಸ್ವಾಮಿದತ್ತಾಂ ಸ್ವನಿಷ್ಠಾಂ, ಶೇಷಾಂ ಕೃತ್ವಾ ಶಿರಸಿ ಕೃತಿನಃ ಶೇಷಮಾಯುರ್ನಯನ್ತಿ ॥" — ಎಂದು. [ ಇಲ್ಲಿ 'ವಿಧಿನಾ' - ಎಂದರೆ ಪ್ರಾರಬ್ಧದೊಳಗಿನ ಭಾಗ್ಯವಿಶೇಷದಿಂದ - ಅಂದರೆ, ' ಸತ್ಯಂ ಶಪೇ ವಾರಣಶೈಲ ನಾಥ ವೈಕುಂಠವಾಸೇಽಪಿ ನ ಮೇಽಭಿಲಾಷಃ' - ಇತ್ಯಾದಿ ಪ್ರಕಾರದಿಂದ ಅರ್ಚಾವತಾರದಲ್ಲಿ ಪ್ರೇಮ, ಕಾಲಕ್ಷೇಪದಲ್ಲಿ ರುಚಿಯೇ ಮುಂತಾದ ಭಾಗ್ಯವಶದಿಂದ - ಎಂದರ್ಥ. ಇದು ಮೋಕ್ಷಕ್ಕಿಂತ ಅಧಿಕವಾದ ಆನಂದಜನಕವೆಂದು ಭಾವ. 'ಸ್ವಾಮಿ ದತ್ತಾಂ' – ಎಂದರೆ, ' ಸಂಕಲ್ಪಾದೇವ ಭಗವಾನ್ ತತ್ತ್ವತೋ ಭಾವಿತಾತ್ಮನಾಂ । ವ್ರತಾನ್ತಮಖಿಲಂ ಕಾಲಂ ಸೇಚಯತ್ಯಮೃತೇನತು ॥ ' ಎಂಬ ನ್ಯಾಯದಿಂದ ಸ್ವಾಮಿಯಿಂದ ಕೊಡಲ್ಪಟ್ಟ ನಿಷ್ಠೆಯೆಂದು ಭಾವ. ಅಪರಾಧಗಳಿಗೆ ಹೆದರಿ ಸ್ವಯಂ ಪ್ರಯೋಜನ ಕೈಂಕರ್ಯದಲ್ಲಿ ರತಿಯುಳ್ಳವರಾಗಿ

ಉಳಿದ ಆಯುಸ್ಸನ್ನು ಕಳೆಯುತ್ತಾರೆಯಾದ್ದರಿಂದ ಸ್ವಲ್ಪಕಾಲ ಬದುಕಿದಲ್ಲಿ ವಿರೋಧವಿಲ್ಲವೆಂದು ತಾತ್ಪರ್ಯ. 'ಸ್ವಾಪೋದ್ಬೋಧ' - ಎಂಬಲ್ಲಿ, - 'ಸ್ವಾಪ' = ನಿದ್ರೆ, 'ಅನಾದಿ ಮಾಯಯಾ ಸುಪ್ತಃ' - ಎಂದಿರುವುದಷ್ಟೆ! ಇಲ್ಲಿ ನಿದ್ರಾಸ್ಥಾನೀಯವಾದುದು ಸಂಸಾರ. 'ಜಾಗೃವಾಗ್ಂ ಸಸ್ಸಮಿಸ್ಥತೇ' ಎಂದಿರುವುದರಿಂದ ಜಾಗರ (ಉದ್ಬೋಧ) ಸ್ಥಾನೀಯವಾದುದು ಮೋಕ್ಷ. ಅಂದರೆ ಜ್ಞಾನಾಜ್ಞಾನ ಮಿಶ್ರಿತವಾದ ಮುಮುಕ್ಷುತ್ವಾವಸ್ಥೆಯಲ್ಲಿ - ಎಂದು. 'ಸ್ವಾಪೋದ್ಬೋಧ ವ್ಯತಿಕರ ನಿಭೇ ಭೋಗ ಮೋಕ್ಷಾನ್ತರಾಳೇ' - ಎಂಬುದ ರಲ್ಲಿಯ ಭಾವ.]

## ೧೫. ಉತ್ತರಕೃತ್ಯಾಧಿಕಾರ.

ಹೀಗೆ ಸ್ವನಿಷ್ಠೆಯನ್ನು ತಿಳಿದ ಪ್ರಪನ್ನನು ಕೃತಕೃತ್ಯನಾದ್ದರಿಂದ ಅವನಿಗೆ ದೇಹ ಯಾತ್ರೆಯು ಅಭ್ಯುಪಗತಪಾರಬ್ಧಕರ್ಮಾನುಗುಣವಾಗಿ ಭಗವತ್ಸಂಕಲ್ಪದಿಂದಲೇ ಸಿದ್ಧಿಸುವುದರಿಂದಲೂ ಮೋಕ್ಷವ್ಯತಿರಿಕ್ತವಾದ ಪಾರಲೌಕಿಕ ದಲ್ಲಿ ನಿರಪೇಕ್ಷನಾದ್ದರಿಂದಲೂ, ಮೋಕ್ಷಕ್ಕಾಗಿ ಭರನ್ಯಾಸವನ್ನು ಅನುಷ್ಠಾನ ಮಾಡಿಯಾಗಿರುವುದರಿಂದಲೂ ಅದಕ್ಕೆ ಫಲಭೂತವಾದ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನಗಳಿಗೆ ಅಡಚಣೆಯಿಲ್ಲದ ಮಿಕ್ಕ ಕಾಲದಲ್ಲಿ ಮತ್ತೇನನ್ನೂ ಮಾಡದೆ ಅಚೇತನದಂತೆ ಇರಬಹುದಲ್ಲವೇ ? - ಎಂದಲ್ಲಿ — ನಿತ್ಯ ನೈಮಿತ್ತಿಕ ಕೈಂಕರ್ಯಗಳಲ್ಲಿ ರತನಾಗಿದ್ದಾಗ್ಯೂ, ವಿಪರೀತ ಜ್ಞಾನಕ್ಕೂ ವಿಪರೀತ ಪ್ರವೃತ್ತಿ ಗಳಿಗೂ ಹೇತುವಾದ ಪ್ರಕೃತಿಮಂಡಲದಲ್ಲಿ ಕರ್ಮವಶದಿಂದ, ಮತ್ತೇನನ್ನೂ ಮಾಡದಿರುವಾಗ, ವಾಸನಾ ವಶದಿಂದ ತನ್ನ ಉತ್ಕರ್ಷ ಮತ್ತು ಪರನಿಕರ್ಷ ಗಳ ಅನುಸಂಧಾನವೂ, ಅದಕ್ಕೆ ಕಾರಣವಾದ ಸ್ವಪೂರ್ಣತ್ವಾನುಸಂಧಾನವೂ, ಇಂದ್ರಿಯಗಳು ವಿಷಯಾಂತರದಲ್ಲಿ ಸಂಚರಿಸುವುದೂ, ಭಗವದನುಭವಕ್ಕೆ ನ್ಯೂನತೆಯೂ. ನಿತ್ಯ ಕೈಂಕರ್ಯದಲ್ಲಿ ವೈಕಲ್ಯವೂ ಸಂಭವಿಸುವುದರಿಂದ ಅದರ ನಿವೃತ್ತಿಗಾಗಿ ಭಗವದ್ಗುಣಗಳನ್ನು ಪ್ರಧಾನವಾಗಿ ಪ್ರತಿಪಾದಿಸುವ ಅಧ್ಯಾತ್ಮ ಶಾಸ್ತ್ರವನ್ನು ಭಾಗವತ ಕೈಂಕರ್ಯ ಪರ್ಯಂತ ಭಗವದನುಭವಜನಿತ ಪ್ರೀತಿಗಾಗಿ ನಿತ್ಯವೂ ಅನುಸಂಧಾನ ಮಾಡಬೇಕು, ಅಂದರೆ ಶ್ರೀ ಶಾರೀರಿಕ ಭಾಷ್ಯವನ್ನು ಶ್ರೀಭಾಷ್ಯ ಪರಿಚಯ ಉಳ್ಳವರೊಡನೆ ಬಾರಿ ಬಾರಿಗೂ ವಿಮರ್ಶಿಸಬೇಕು.

ಶ್ರೀಭಾಷ್ಯ ವಿಮರ್ಶೆಯು ಬಹುಪ್ರಜ್ಞರನ್ನು ಮತ್ತು ಅದಕ್ಕೆ ಅಧಿಕಾರಿಗಳಾದವರನ್ನು ಬಿಟ್ಟು ಮಿಕ್ಕವರಿಗೆ ದುಶ್ಶಕವಲ್ಲವೇ ? – ಎಂದರೆ "ಪರಾಶರ ಪ್ರಬಂಧಾದಪಿ ... ಸದ್ಯಃ ಪರಮಾತ್ಮನಿ ಚಿತ್ತರಂಜಕತಮ್ಯೈಃ" ಎಂಬಂತೆಯೇ ಕಿವಿಗಿಂಪಾದ ಶ್ರೀ ಶಠಕೋಪಾದಿ ದಿವ್ಯಸೂರಿಗಳ ಸರ್ವೋಪಜೀವ್ಯವಾದ ಭಾಷಾ ಪ್ರಬಂಧಾದಿ ದಿವ್ಯಸೂಕ್ತಿಗಳನ್ನು ಸಂತೋಷಕ್ಕಾಗಿ ನಿತ್ಯವೂ ಶಿಷ್ಯರುಗಳಿಗೆ ಹೇಳಬೇಕು, ಮತ್ತು ಗುರುಗಳಿಂದ ಕೇಳಲೂ ಬೇಕು. "ಅನ್ಯೋನ್ಯ ಗುರವೋ ವಿಪ್ರಾಃ" – "ಬೋಧಯನ್ತಃ ಪರಸ್ಪರಂ" – ಇತ್ಯಾದಿ ಪ್ರಕಾರದಿಂದ ಶ್ರವಣ—ಶ್ರಾವಣಗಳಿಂದುಂಟಾದ ಕಲ್ಯಾಣಗುಣಾನುಭವದಿಂದ ಬದುಕಿರುವವರೆಗೂ ಕಾಲವನ್ನು ಕಳೆಯಬೇಕೆನ್ನುವುದಕ್ಕಾಗಿ,

"ಸಂತೋಷಾರ್ಥಂ ವಿಮೃಶ ಮುಹುಃ ಸದ್ಭಿರಧ್ಯಾತ್ಮವಿದ್ಯಾಂ.
ನಿತ್ಯಂ ಬ್ರೂತೇ ನಿಶಮಯತಿ ಚ ಸ್ವಾದು ಸುವ್ಯಾಹೃತಾನಿ ।
ಅಂಗೀಕುರ್ವನ್ ಅನಘಲಲಿತಾಂ ವೃತ್ತಿ ಮಾದೇಹ ಪಾತಾತ್
"ದೃಷ್ಟಾದೃಷ್ಟ ಸ್ವಭರವಿಗಮೇ ದತ್ತದೃಷ್ಟಿಃ ಪ್ರಪನ್ನಃ"– ಎಂದಿತ್ಯಾದಿಯಾಗಿ ಸಪ್ರಮಾಣವಾಗಿ ಅಪ್ಪಣೆ ಕೊಟ್ಟಿದ್ದಾರೆ. ಸ್ವರೂಪಕ್ಕೆ ಅನುರೂಪವಾದ ಈ ರೀತಿಯಿರುವುದನ್ನು ಬಿಟ್ಟು ಸ್ವಲ್ಪ ಹೊತ್ತು ಸುಮ್ಮನೆ ಕಳೆಯುವುದಾದರೂ, ನಾನಾವಿಧ ಭ್ರಾಂತಿ ಛಿದ್ರ, ವಿಕಲ್ಪ, ವಿಕ್ರಿಯೆಯೇ ಮುಂತಾದ ಹಾನಿಗಳಿಗೆ ಆಸ್ಪದವಾಗುವುದೆನ್ನಲು, "ಯನ್ಮುಹೂರ್ತಂ ಕ್ಷಣಂವಾಪಿ ವಾಸುದೇವೋ ನ ಚಿಂತ್ಯತೇ ಸಾ ಹಾನಿಸ್ತನ್ಮಹಚ್ಛಿದ್ರಂ ಸಾ ಭ್ರಾನ್ತಿಃ ಸಾ ಚ ವಿಕ್ರಿಯಾ" – ಇತ್ಯಾದಿ ಅನೇಕ ಪ್ರಮಾಣಗಳಿವೆ.

ಈ ನಿಷ್ಠೆಗೆ ಅನುಗುಣವಾಗಿ ತಿಳಿಯಬೇಕಾದ ಅಂಶಗಳಲ್ಲಿ ತಿಳಿಯದವುಗಗಳನ್ನು ನಿಷ್ಕರ್ಷಿಸಿ, ತಾವು ಕೃತ ಕೃತ್ಯರೆಂದು ಭಾವಿಸಿ, ಅನಾದರಿಸದೆ, ಜ್ಞಾನ ಭಕ್ತ್ಯಾದಿಗಳನ್ನು ಆಪೇಕ್ಷಿಸುವಲ್ಲಿ ಬಾಧಕವಿಲ್ಲದ್ದರಿಂದ, ಪರಮಶೇಷಿಯಲ್ಲಿ ಚಿತ್ತರಂಜನಕ್ಕಾಗಿ ವಿಶೇಷಜ್ಞರಿಂದ ಅಜ್ಞಾತಾಂಶಗಳನ್ನು ತಿಳಿದು ತಮ್ಮ ತಮ್ಮ ವರ್ಣಾಶ್ರಮ ಜಾತಿ ಗುಣಾದಿಗಳಿಗೆ ಅನುಗುಣವಾಗಿ ಕರ್ತವ್ಯಾಂಶವನ್ನು ನಿಷ್ಕರ್ಷಿಸಿ, ಅನುಷ್ಠಿಸಿ ಕೊಂಡಿರಬೇಕು. ಈ ಅನುಷ್ಠಾನ ಭಾವನೆಯಿಂದ, ಸ್ವೋತ್ಕರ್ಷವನ್ನೂ ಪರನಿಕರ್ಷವನ್ನೂ ಎಂದೂ ಅನುಸಂಧಾನ ಮಾಡಕೂಡದು.

“ಮಂದೋಽಪ್ಯಮಂದತಾಮೇತಿ ಸಂಸರ್ಗೇಣ ವಿಪಶ್ಚಿತಃ। ಪಂಕಚ್ಛಿದಃ ಫಲಸ್ಯೇವ ನಿಘರ್ಷೇಣಾ ವಿಲಂ ಪಯಃ॥”– ಎಂಬಂತೆಯೇ ತತ್ತ್ವದರ್ಶಿಗಳಾದ ಜ್ಞಾನಿಗಳಿಂದ ಪರಿಶುದ್ಧ ಜ್ಞಾನವನ್ನು ಪಡೆದವನಾಗಿ, “ಯಸ್ಯಾನುಭವಪರ್ಯಂತಾ ಬುದ್ಧಿಃ ತತ್ತ್ವೇ ಪ್ರತಿಷ್ಠಿತಾ। ತದ್ದೃಷ್ಟಿ ಗೋಚರಾಸ್ಸರ್ವೇ ಮುಚ್ಯನ್ತೇ ಸರ್ವ ಕಿಲ್ಬಿಷೈಃ॥” – ಎಂಬಂತೆಯೇ ಈ ಅರ್ಥಗಳಲ್ಲಿ ನಿಷ್ಠೆಯುಳ್ಳವರೊಂದಿಗೆ ನಿಕಟವಾಗಿದ್ದುಕೊಂಡು ಅದರ ಅನುಷ್ಠಾನಗಳಲ್ಲಿ ತನಗೆ ತಕ್ಕವನ್ನು ಅನುಷ್ಠಿಸಿ–ಶರಣ್ಯನ ಅನುಗ್ರಹ ವಿಶೇಷದಿಂದ ಸಾಕ್ಷಾತ್ಕಾರಾದಿ ಮಹಾಫಲದ ಅಂಕುರವು ಬಂದಾಗ್ಯೂ, ಸ್ವಾಧಿಕಾರವಾದ ಆಕಿಂಚನ್ಯವನ್ನೂ ಕಾರ್ಪಣ್ಯವನ್ನೂ ಪುರಸ್ಕರಿಸಿ ಅನಾದಿಕಾಲದಿಂದ ಬಂದ ಅನರ್ಹತೆಯನ್ನೂ ಮಹತ್ತಾದ ಕೈಂಕರ್ಯವಿಲ್ಲದಿದ್ದುದನ್ನೂ ಚಿಂತಿಸಿ ವ್ಯಥೆಗೊಳ್ಳದೆ, ಅವತಾರ ರಹಸ್ಯಾದಿ ಜ್ಞಾನವನ್ನು ಹೊಂದಿ ಆ ಶರಣ್ಯನ ಪ್ರಭಾವದಿಂದ ಈಗ ಪ್ರಾಪ್ತವಾದ ಯೋಗ ತೆಯನ್ನೂ ಅದಕ್ಕೆ ಅನುಗುಣವಾದ ಆಜ್ಞಾನುಜ್ಞಾನುವರ್ತನರೂಪ ಕೈಂಕರ್ಯಾನುಭವನ್ನೂ ಅವಲಂಬಿಸಿ, ಸಾತ್ವಿಕ್ತಿಕಾಹಾರಸೇವನಾದಿಯಿಂದ ದೇಹೇಂದ್ರಿಯಾದಿ ಶುದ್ಧಿಯನ್ನು ಪಡೆದು ಅಯೋಗ್ಯವಾದ ವಿಷಯಾಂತರಗಳಲ್ಲಿ ಪ್ರಸರಿಸುವ ಅನಾದಿ ವಿಷಯವಾಸನೆಯನ್ನು ತಡೆಯಬೇಕು. ಸರ್ವನಿಯಂತೃವಾದ ಭಗವಂತನ ಆಜ್ಞಾನುಜ್ಞಾರೂಪ ಶಾಸ್ತ್ರಕ್ಕೆ ಅನುಗುಣವಾಗಿ ಕಾಲ ವಿಶೇಷಾದಿನಿಯತವಾದ ಕೈಂಕರ್ಯವನ್ನು ಅರೋಗನ ಕ್ಷೀರಸೇವನೆಯಂತೆ ಕೇವಲ ಭೋಗ್ಯಬುದ್ಧಿಯಿಂದಲೇ ಆಚರಿಸಬೇಕು.

“ತಮರುಹಂದದು ಎವ್ವರವು ಮವ್ವರುವಂತಾನೇ”–ಎಂಬಂತೆ ದೇವ, ಋಷಿ, ಸಿದ್ಧ, ಮನುಷ್ಯಾದಿ ಆಯಾ ಅಧಿಕಾರಿಗಳ ಛಂದಾನುಗುಣವಾಗಿಯೂ ಪರಮೈಕಾಂತಿಯಾದ ತನ್ನ ಛಂದಾನುಗುಣವಾಗಿಯೂ ಅವತರಿಸಿರುವ ಭಗವಂತನ ಅರ್ಚಾವತಾರದಲ್ಲಿ ಸರ್ವಾತಿಶಾಯಿ ಷಾಡ್ಗುಣ್ಯದ ಸಂಪೂರ್ತಿಯನ್ನೂ, ನಿರತಿಶಯ ಪಾವನತಮತ್ವವನ್ನೂ ಅರ್ಚಾ ಮೂರ್ತಿಯ ಆಕಸ್ಮಿಕ ಸಂದರ್ಶನ ಮಾತ್ರದಿಂದಲೇ ಮೂಢ ಚೇತಸರ ಕುವಾಸನಾ-ಕುಬುದ್ಧಿ-ಕುತರ್ಕ-ಕುಹೇತು-ಕುಭಾವ-ನಾಸ್ತಿಕತ್ವವೇ ಮುಂತಾದ ದೋಷಗಳು ಲಯಿಸುವುದನ್ನೂ, ಅವಾಙ್ಮನಸ ಗೋಚರವಾದ ಆಶ್ರಿತ ಪಾರತಂತ್ರ್ಯವನ್ನೂ, ಮನೋಹರತ್ವವನ್ನೂ, ಅನುಸಂಧಾನಮಾಡಿ, “ಸ್ವಾಮಿತ್ವೇನ ಸುಹೃತ್ತ್ವೇನ ಗುರು

ತ್ವೇನ ಚ ಸರ್ವದಾ। ಪಿತೃತ್ವೇನ ತಥಾಭಾವ್ಯೋ ಮಾತೃತ್ವೇನ ಚ ಮಾಧವಃ॥ ಯಥಾ ಯುವಾನಂ ರಾಜಾನಂ...... ಯಥಾಪ್ರಿಯಾತಿಥಿಂ ಯೋಗ್ಯಂ... ಯಥಾಚಪುತ್ರಂ ದಯಿತಂ ತಥೈವೋಪಚರೇದ್ಧರಿಂ ॥" —ಎಂಬಂತೆಯೇ ಆಯಾ ಸಂಬಂಧವರ್ಗ ಪರತ್ವ ಸೌಲಭ್ಯಾದಿಗಳಿಗೆ ಅನುರೂಪ ವೃತ್ತಿಯನ್ನು ಅಂಗೀಕರಿಸಬೇಕು.

ಹೀಗೆ ಭಗವಂತನಿಂದ ಉಪಕ್ರಮವಾಗಿ ಭಾಗವತ ಪರ್ಯಂತವಾದ ಕೈಂಕರ್ಯವೆಂಬ ಪುರುಷಾರ್ಥ ಸಿದ್ಧಿಗೆ ಪ್ರಧಾನಕಾರಣ ಸದಾಚಾರ್ಯ ಕಟಾಕ್ಷವೇ ಎಂದು ನಿಶ್ಚಯಿಸಿ, ಮರುದಿನ ಅಭಿಷೇಕ ಹೊಂದಲಿರುವ ರಾಜಕುಮಾರನ ಬಳಿ ರಾತ್ರಿಯಲ್ಲಿ ಇಡುವ ದೀಪದಂತೆ ಆಚಾರ್ಯನ ಕಟಾಕ್ಷದಿಂದ ಲಬ್ಧವಾದ ತತ್ತ್ವಜ್ಞಾನವನ್ನೂ ತನ್ಮೂಲಕ ಕೈಂಕರ್ಯವನ್ನೂ ನೆನೆದು, ಹೀಗೆ ಆಚಾರ್ಯ ಸಂಬಂಧದಿಂದ ಉಪಕ್ರಮವಾಗಿ ಮುಕ್ತಿ ಪರ್ಯಂತವಾದ ಪುರುಷಾರ್ಥಕ್ಕೂ, ಮುಕ್ತಿಯಲ್ಲಿಕೂಡ ಯಾವದಾತ್ಮ ಭಾವಿಯಾದ ಭಗವದನುಭವಕ್ಕೂ ಪ್ರಧಾನ ಕಾರಣವು ಸ್ವತಂತ್ರನೂ ಸತ್ಯಸಂಕಲ್ಪನೂ ಆದ ಶ್ರಿಯಃ ಪತಿಯ ಸಹಜ ಕಾರುಣ್ಯವೆಂಬುದನ್ನೂ ಚಿಂತಿಸಿ ಕೃತಜ್ಞತೆಯಿಂದಿರಬೇಕು.

ಇನ್ನು ಈ ವಿಧವಾದ ಉತ್ತರಕೃತ್ಯದಲ್ಲಿ ತ್ರಿಕರಣಗಳಿಂದಲೂ ತ್ಯಾಜ್ಯವೂ ಗ್ರಾಹ್ಯವೂ ಆದುವುಗಳಲ್ಲಿ ಸಾರತಮವಾದುವುಗಳಾದರೋ—ಪರಮ ಪುರುಷಾರ್ಥದಲ್ಲಿ ರುಚಿಗೆ ಸಂಕೋಚ ಬಾರದಿರವುದಕೋಸ್ಕರ ಮರೆಯಬೇಕಾದುವುಗಳಲ್ಲಿ ಪ್ರಧಾನವಾದುದು ವಿಷಯಾಸ್ವಾದ. ಕೃತಘ್ನತೆ ಬಾರದಿರುವುದಕ್ಕಾಗಿ ಸ್ಮರಿಸಬೇಕಾದುವುಗಳಲ್ಲಿ ಪ್ರಧಾನವಾದುದು ಆಚಾರ್ಯಕಟಾಕ್ಷದಿಂದಾದ ಉಪಕಾರ. ಕಾರ್ಪಣ್ಯಕ್ಕೆ ಲೋಪವಾಗದಿರುವುದಕ್ಕಾಗಿ, ಹೇಳಕೂಡದುವುಗಳಲ್ಲಿ ಪ್ರಧಾನವಾದುದುಆತ್ಮೋತ್ಕರ್ಷ. ಉಪಾಯ ನಿಷ್ಠೆಯು ಮರೆಯದಿರುವುದಕ್ಕಾಗಿ ಹೇಳಬೇಕಾದುವುಗಳಲ್ಲಿ ಪ್ರಧಾನ ದ್ವಯಮಂತ್ರ. ಸ್ವಾಮಿಯಾದ ಭಗವಂತನ ನಿಗ್ರಹ ಬಾರದಿರುವುವಕ್ಕಾಗಿ ತ್ರಿಕರಣಗಳಿಂದಲೂ, "ಶೆಯ್ಯಾದನ ಶೆಯ್ಯೋಮ್"—ಎಂಬಂತೆ ನಾವು ಬಿಡಬೇಕಾದುದು ಬ್ರಹ್ಮವಿದಪಚಾರ. ಪುರುಷಾರ್ಥಸಾಗರ ಬತ್ತುವುದಾಗಲಿ ಅಳವು ಉಳ್ಳದ್ದಾಗಿಯಾಗಲಿ ಅಗದಿರುವುದಕ್ಕಾಗಿ ಪ್ರಧಾನ ಕರ್ತವ್ಯವು ಭಗವತ್ಕೈಂಕರ್ಯದಲ್ಲಿ ಪರ್ಯವಸಾನಹೊಂದುವ ಶಾಸ್ತ್ರಾನುಮತ

ವಾದ ಆಚಾರ್ಯಾದಿ ಭಾಗವತಕೈಂಕರ್ಯ ವಿಶೇಷ. ಸ್ವಯಂ ಪ್ರಯೋಜನವಾದ ಈ ಉತ್ತರ ಕೃತ್ಯವು ಶ್ರೀ ರಹಸ್ಯತ್ರಯದಲ್ಲಿ ಫಲ ಪ್ರತಿಪಾದಕ ಸ್ಥಳಗಳಲ್ಲಿ ಅನುಸಂಧಾನ ಮಾಡಬೇಕಾದುದು.

ಹೀಗೆ ಸ್ವನಿಷ್ಠಾಭಿಜ್ಞಾನವುಳ್ಳ ಪ್ರಪನ್ನರು ಚೇತನರ ಸ್ವರೂಪವನ್ನು ತಿಳಿಸುವ ಮೂಲಮಂತ್ರದಲ್ಲಿ ಶೇಷಿಯಾಗಿ ಪ್ರತಿಪನ್ನನಾದ ಭಗವಂತ ನನ್ನು ನಿರಪರಾಧಕೈಂಕರ್ಯಗಳಿಂದ ಸಂತೋಷಗೊಳಿಸುವರೆಂದು ಕೆಳಗಿನ ಶ್ಲೋಕದಿಂದ ತಿಳಿಸಿದ್ದಾರೆ ; —

ಪ್ರಣಯಿನಮಿವ ಪ್ರಾಪ್ತಂ ಪಶ್ಚಾತ್ಪ್ರಿಯಾ ಸ್ವಸಮನ್ವಿತಂ
ಮಹತಿ ಮುಹುರಾಮೃಷ್ಟೇ ದೃಷ್ಟ್ವಾ ಮನಾ ಮಣಿದರ್ಪಣೇ ।
ಪ್ರಪದನಧನಾಃ ಸನ್ತಶ್ಶುದ್ಧೈಃ ಪ್ರಭುಂ ಪರಿಭುಂಜತೇ
ಪ್ರಸೃಮರ ಮಹಾಮೋದ ಸ್ಮೇರ ಪ್ರಸೂನ ಸಮೃಕ್ರಮೈಃ ॥"-ಇತಿ.

## ೧೬. ಪುರುಷಾರ್ಥಕಾಷ್ಠಾಧಿಕಾರಃ

[ಕಾಷ್ಠಾ = ಕಡೆಯ ಎಲ್ಲೆ] ಭಗವಂತನಿಗೆ ಕೈಂಕರ್ಯ ಮಾಡುವುದು ಈ ಪ್ರಪನ್ನಾಧಿಕಾರಿಗೆ ಪುರುಷಾರ್ಥ.—ಆ ಕೈಂಕರ್ಯವು ಭಾಗವತರ ಪರ್ಯಂತ ವಾದಲ್ಲಿ ಅದೇ ಪುರುಷಾರ್ಥದ ಕಾಷ್ಠೆಯೆನಿಸುವುದು. "ಮಮ ಮದ್ಭಕ್ತ ಭಕ್ತೇಷು ಪ್ರೀತಿರಭ್ಯಧಿಕಾ ಭವೇತ್ ॥"—ಇತ್ಯಾದಿಯಾಗಿ ಭಗವದ್ವಚನವಿದೆ. ಇದರ ಪ್ರಕಾರ ಭಾಗವತ ಕೈಂಕರ್ಯವು ಪ್ರಪನ್ನನಿಗೆ ಪ್ರಧಾನಫಲ.

ಇಲ್ಲಿ ಒಂದು ಶಂಕೆ ;—ಚೇತನನು ಭಗವಂತನೊಬ್ಬನನ್ನು ಬಿಟ್ಟು ಮತ್ತೆ ಯಾರಿಗೂ ಶೇಷನಲ್ಲ. ಭಗವಂತನ ಸೇವೆಯನ್ನು ಬಿಟ್ಟು ಬೇರೆ ಪ್ರಯೋಜನ ವೆಂಬುದೂ ಇವನಿಗಿಲ್ಲ. ಆ ಸ್ವಾಮಿಗೆ ಒಂದು ಅತಿಶಯವನ್ನುಂಟುಮಾಡುವುದೇ ಶೇಷತ್ವವೆಂಬುದು. ಅದನ್ನು ಬಿಟ್ಟು ಭಾಗವತರಿಗೆ ಸೇವೆ ಮಾಡುವುದೆಂಬುದು ವಿರುದ್ಧ. ಸ್ವಾಮಿಯನ್ನು ಬಿಟ್ಟು ಬೇರೆಯವರಿಗೆ ಸೇವೆ ಮಾಡುವುದು ದುಃಖ ರೂಪವಾಗಿಯೂ ಕಂಡುಬರುತ್ತೆ. ಆದ್ದರಿಂದ ಭಾಗವತ ಕೈಂಕರ್ಯಕ್ಕೂ ಪುರುಷಾರ್ಥಕ್ಕೂ ಬಲು ದೂರ. ಹೀಗಿರುವಲ್ಲಿ ಅದು ಪ್ರಧಾನ ಪುರುಷಾರ್ಥ ಹೇಗಾದೀತು ? —ಎಂಬ ಶಂಕೆಗೆ ಸಮಾಧಾನವಾಗಿ ಭಾಗವತಕೈಂಕರ್ಯವು

ಪುರುಷಾರ್ಥವೆಂಬುದನ್ನು ಸಕಾರಣವಾಗಿ ಈ ಅಧಿಕಾರಾರ್ಥದ ಸಂಗ್ರಹವಾದ ಕೆಳಗಿನ ಶ್ಲೋಕದಲ್ಲಿ ಪ್ರದರ್ಶಿಸಿದ್ದಾರೆ ;—

"ಸ್ವತಂತ್ರ ಸ್ವಾಮಿತ್ವಾತ್ ಸ್ವಬಹುಮತಿ ಪಾತ್ರೇಷು ನಿಯತಂ
ಶ್ರಿಯಃ ಕಾನ್ತೋ ದೇವಃ ಸಖಲು ವಿನಿಯುಂಕ್ತೇ ಚಿದಚಿತೌ ।
ಯಥಾಲೋಕಾಮ್ನಾಯಂ ಯತಿಪತಿ ಮುಖ್ಯೈರಾಹಿತಧಿಯಾಂ
ತತೋ ನಃ ಕೈಂಕರ್ಯಂ ತದಭಿಮತ ಪರ್ಯನ್ತಮಭವತ್ ॥"—ಇತಿ.

ಅಂದರೆ,—ಶ್ರೀವಿಶಿಷ್ಟನಾಗಿಯೇ ಸೃಷ್ಟ್ಯಾದಿ ಲೀಲೆಯಲ್ಲಿ ಪ್ರವೃತ್ತನಾದ ಭಗವಂತನು ಸ್ವತಂತ್ರನೂ ಸ್ವಾಮಿಯೂ ಆಗಿದ್ದಾನೆಯಷ್ಟೆ! ಸ್ವತಂತ್ರನಾದ್ದರಿಂದ ಅವನು ಪರತಂತ್ರರಾದ ಚೇತನರನ್ನೂ ಅಚೇತನಗಳನ್ನೂ ತನಗೆ ಬಹುಮತರಾದ ಭಾಗವತರ ಸೇವೆಯಲ್ಲಿ ನಿಯಮಿಸಲು ಶಕ್ತನು. ಸ್ವಾಮಿಯಾದ್ದರಿಂದ ಅದಕ್ಕೆ ಪ್ರಾಪ್ತನೂ ಹೌದು. "ಪ್ರಿಯೋಹಿಜ್ಞಾನಿನೋಽತ್ಯರ್ಥಂ ಅಹಂ ಸ ಚ ಮಮ ಪ್ರಿಯಃ ॥ ಉದಾರಾಸ್ಸರ್ವ ಏವೈತೇ ಜ್ಞಾನೀತ್ವಾತ್ಮೈವ ಮೇದುತಂ ॥" ಇತ್ಯಾದಿಯಿಂದ ಭಾಗವತರು ತನಗೆ ಅತ್ಯಂತ ಇಷ್ಟರೆಂದು ಭಗವಂತನು ತಾನೇ ಹೇಳಿದ್ದಾನೆಯಷ್ಟೆ ! ತನಗೆ ನಿಯಮೇನ ಶೇಷಭೂತವಾದುದೆಲ್ಲವೂ ಭಾಗವತರಿಗೂ ಯಾವದಾತ್ಮಭಾವಿಯಾಗಿ ಶೇಷಭೂತವಾಗಿರತಕ್ಕದ್ದೆಂದು ವಿನಿಯೋಗಿಸಿದ್ದಾನೆ. ಹೀಗೆ ಭಾಗವತ ಶೇಷತ್ವವು ಸ್ವತಂತ್ರನೂ ಸ್ವಾಮಿಯೂ ಆದವನಿಂದ ವಿನಿಯುಕ್ತವಾಗಿ ಅವನಿಗೆ ಅತ್ಯಂತ ಇಷ್ಟವೂ ಆದುದರಿಂದ ವಿರೋಧವಲ್ಲವೆಂದು ವ್ಯಂಜಿತ. ಲೋಕದಲ್ಲಿಯೂ ರಾಜರು ತನ್ನ ಭೃತ್ಯ ವರ್ಗವನ್ನೂ ತನಗೆ ಅಲಂಕಾರ ಭೂತವಾದ ಭೂಷಣವೇ ಮೊದಲಾದುದನ್ನೂ ತನಗೆ ಅಂತರಂಗರಾದ ಪುತ್ರಾದಿಗಳ ಅತಿಶಯಕ್ಕಾಗಿಯೂ ವಿನಿಯೋಗಿಸುತ್ತಾರೆ. ವೇದವೇ ಮುಂತಾದುದರಲ್ಲಿಯೂ, "ಸರ್ವೇಽಸ್ಮೈ ದೇವಾ ಬಲಿ ಮಾವಹನ್ತಿ – ಆಚಾರ್ಯದೇವೋಭವ"—"ತಸ್ಮಾನ್ಮದ್ಭಕ್ತಭಕ್ತಾಶ್ಚ ಪೂಜನೀಯಾ ವಿಶೇಷತಃ ॥"—ಇತ್ಯಾದಿ ಪ್ರಮಾಣಗಳು ಭಾಗವತಕೈಂಕರ್ಯಕ್ಕಾಗಿ ವಿನಿಯುಕ್ತವಾಗಿವೆ. ಆದ್ದರಿಂದ ಶ್ರೀಭಾಷ್ಯಕಾರರೇ ಮುಂತಾದವರುಗಳಿಂದ ಮೂಲಮಂತ್ರಾದಿಯಿಂದ "ಪರಗತಾತಿಶಯಾಧಾನೇಚ್ಛಯಾ ಉಪಾದೇಯತ್ವಮೇವ ಯಸ್ಯಸ್ವರೂಪಂ ಸ ಶೇಷಃ, ಪರಶ್ಶೇಷೀ,"—ಎಂದು ಶೇಷತ್ವ

ಸ್ವರೂಪದಲ್ಲಿ ಶಿಕ್ಷಿತ ತತ್ತ್ವಜ್ಞಾನವುಳ್ಳ ನಾವು ಭಗವಂತನಿಂದ ಭಾಗವತ ಶೇಷತ್ವದಲ್ಲಿ ವಿನಿಯೋಗಿಸಲ್ಪಟ್ಟಿರುವುದರಿಂದ, ಕಿಂಕರ ವೃತ್ತಿಯಿಲ್ಲದಿದ್ದಲ್ಲಿ ಶೇಷ್ಯತಿಶಯ ಸಿದ್ಧಿಸುವುದಿಲ್ಲವಾಗಿ ಶೇಷತ್ವಸ್ವರೂಪಕ್ಕೇ ಹಾನಿಯಾದ್ದರಿಂದ, ಭಗವಂತನಿಗೆ ಇಷ್ಟವಾದ ಭಾಗವತ ಶೇಷತ್ವವು ಭಾಗವತ ಕೈಂಕರ್ಯವಿಲ್ಲದಿದ್ದಲ್ಲಿ ಸಿದ್ಧಿಸುವುದಿಲ್ಲವಾದ್ದರಿಂದ, ಶೇಷಿಗೆ ಅಭಿಮತವಾದ ಭಾಗವತರವರಿಗೂ ನಾವು ಕೈಂಕರ್ಯ ಮಾಡತಕ್ಕದ್ದೆಂದು ಸಿದ್ಧವಾಗಿದೆ. [ಅತಿಶಯಃ = ವಿಶೇಷ]

ಹೀಗಿರುವುದರಿಂದ, ಶೇಷಿಯಾದ ಸರ್ವೇಶ್ವರನ ವಿಷಯದಲ್ಲಿ ಶೇಷಭೂತನಾದ ಚೇತನನು ಒಂದು ಅತಿಶಯವನ್ನುಂಟುಮಾಡಬೇಕು. ಹೀಗಾದರೆ ಅಚೇತನವು ಈಶ್ವರನಿಗೆ ಪ್ರೀಣನ ರೂಪವಾದ ಅತಿಶಯವನ್ನು ಮಾಡದಿರುವುದರಿಂದ, ಅದಕ್ಕೆ ಶೇಷತ್ವವಿಲ್ಲವೆಂದಾಗುವುದಿಲ್ಲವೆ?—ಎಂದರೆ, ಅದು ಅಚೇತನವಾದ್ದರಿಂದ ಪ್ರೀಣನವ್ಯಾಪಾರಕ್ಕೆ ಶಕ್ತವಲ್ಲವಾಗಿ ಶೇಷತ್ವಕ್ಕೆ ಅದರಿಂದ ಕ್ಷತಿಯಿಲ್ಲ. ಆ ಅತಿಶಯವು ಶೇಷಭೂತವಾದ ವಸ್ತುವಿನ ಯೋಗ್ಯತೆಯನ್ನು ಅನುಸರಿಸಿದೆ. ಶರೀರತ್ವಾದಿಯ ಮೂಲಕ ಮಾಡುವ ಅತಿಶಯವು ಅಚೇತನಕ್ಕೂ ಸಾಧಾರಣವಾದ್ದರಿಂದ ವಿಶೇಷತಃ ಚೈತನ್ಯದ ಮೂಲಕ ಅತಿಶಯವು ಕರ್ತವ್ಯವಾಗಿರಲಾಗಿ, ಅದರೊಳಗೆ ಶಾಸ್ತ್ರವಿರುದ್ಧವಾದುದರಲ್ಲಿ ಪ್ರವರ್ತಿಸಿದಲ್ಲಿ, ಶಾಸಿತೃವೂ ದಂಡಧರನೂ ಆದ ಈಶ್ವರನಿಗೆ ಲೀಲಾರಸವನ್ನು ಉಂಟುಮಾಡುವುದರ ಮೂಲಕ ಅತಿಶಯವನ್ನು ಮಾಡುತ್ತಾನೆ. ಶಾಸ್ತ್ರಕ್ಕೆ ವಿರುದ್ಧವಲ್ಲದುದರಲ್ಲಿ ಪ್ರವರ್ತಿಸುವಲ್ಲಿ, ಈಶ್ವರನಿಗೆ ಭೋಗಸರವನ್ನುಂಟು ಮಾಡುವುದರ ಮೂಲಕ ಸಂತೋಷವನ್ನುಂಟುಮಾಡಿ, ಅವನ ಔದಾರ್ಯಾದಿ ಗುಣಗಳನ್ನು ಪ್ರಕಾಶಗೊಳಿಸುವುದರ ಮೂಲಕ ಅತಿಶಯವನ್ನು ಉಂಟು ಮಾಡುತ್ತಾನೆ.

ನಿತ್ಯರೂ ಮುಕ್ತರೂ ಈಶ್ವರನ ಅಭಿಪ್ರಾಯವನ್ನು ಸಾಕ್ಷಾತ್ತಾಗಿಯೇ ತಿಳಿದು ಕೈಂಕರ್ಯ ಮಾಡುವವರಾಗಿ ಅದರಿಂದ ವಿಶೇಷ ಭೋಗವನ್ನುಂಟು ಮಾಡುವುದರ ಮೂಲಕ ಅತಿಶಯಾಧಾಯಕರಾಗಿರುವ ಹಾಗೆ ಕೃತಕೃತ್ಯನಾದ ಈ ಸಂಸಾರಿ ಚೇತನನೂ ಕೂಡ ಶಾಸ್ತ್ರದ ಮೂಲಕ ಈಶ್ವರನ ಅಭಿಪ್ರಾಯವನ್ನು ಅರಿತು ಅವನಿಗೆ ಅತಿಯವುಂಟುಮಾಡುವವನಾಗಿದ್ದಾನೆ. ಈಶ್ವರಾಭಿಪ್ರಾಯವನ್ನು

ವಿಮರ್ಶಿಸಿದಲ್ಲಿ, ರಾಜಕುಮಾರನ ಉಪಲಾಲನವು ರಾಜನಿಗೆ ಹೇಗೋ ಹಾಗೆ ಭಾಗವತಕೈಂಕರ್ಯವು ಭಗವಂತನಿಗೆ ಅತ್ಯಂತ ಇಷ್ಟವಾದ್ದರಿಂದ ಪ್ರಧಾನವಾದುದಾಗಿ, ನಿತ್ಯಕರ್ಮಗಳಲ್ಲಿ ಅಗ್ನೀಂದ್ರಾದಿಗಳಿಗೆ ಮಾಡುವ ಆರಾಧನವು ಅವರಿಗೆ ಅಂತರ್ಯಾಮಿಯಾದ ಭಗವಂತನ ಆರಾಧನವಾಗುವಂತೆ, ಇದೂ ಭಾಗವತ ಶರೀರಕ ಭಗವದಾರಾಧನವಾಗುವುದರಿಂದ ಅನನ್ಯ ಶೇಷತ್ವಕ್ಕೂ ವಿರೋಧವಲ್ಲ. "ಜ್ಞಾನೀತ್ವಾತ್ಮೈವ ಮೇ ಮತಂ",—ಎಂಬಂತೆಯೇ ಭಾಗವತ ಕೈಂಕರ್ಯವನ್ನು ಭಗವಂತ ತನ್ನ ಅಂತರ್ಯಾಮಿ ವಿಷಯದಲ್ಲಿ ಮಾಡಿದುದನ್ನಾಗಿ ಭಾವಿಸಿ ಸಂತೋಷಿಸುತ್ತಾನೆ, ಹೀಗೆ ಅಭಿಮತತ್ವಮಾತ್ರದಿಂದಲೇ ಅಲ್ಲ, ಮತ್ತೇನೆಂದರೆ; —ಭಾಗವತ ಸಹಿತನಾಗಿಯೂ ಭಗವಂತ ಶೇಷಿಯಾದುವರಿಂದ ಭಾಗವತ ಕೈಂಕರ್ಯವು ಭಗವಂತನಿಗೆ ಸದ್ವಾರಕವಾಗಿಯೂ ಸಿದ್ಧಿಸುವುದು ಹೀಗೆ ಭಗವಚ್ಛೇಷತ್ವವು ಭಾಗವತ ಶೇಷತ್ವ ಪರ್ಯಂತವೆಂದಾಯಿತು. ಆದ್ದರಿಂದ ಕೈಯಿಂದಾದಷ್ಟು. ಭಗವತ್ಕೈಂಕರ್ಯಾಕಾರಕ್ಕೆ ವಿವೃದ್ಧಿ ರೂಪವಾದ ಭಾಗವತ ಕೈಂಕರ್ಯವನ್ನು ಅನುಷ್ಠಿಸಬೇಕು.

ಈ ಭಾಗವತ ಶೇಷತ್ವವು ಸ್ವಾಭಾವಿಕವೋ, ಔಪಾಧಿಕವೋ ? ಎಂದಲ್ಲಿ, ಕರ್ಮೋಪಾಧಿಗಳು ನೀಗಿ "ನಿತ್ಯಾಭಿವಾಂಛಿತ ಪರಸ್ಪರ ನೀಚಭಾವೈಃ,"— ಎಂಬಂತೆಯೇ ಯಾವದಾತ್ಮಭಾವಿಯಾಗಿ ಮುಕ್ತ ದಶೆಯಲ್ಲಿಯೂ ಅನುವರ್ತಿಸುವುದಾದ್ದರಿಂದ ಸ್ವಾಭಾವಿಕವೆನ್ನಲೂ ಬಹುದು ; ಭಗವತ್ಸಂಬಂಧ ಜ್ಞಾನ ವಿಶೇಷ ನಿಬಂಧನವಾದ್ದರಿಂದ ಔಪಾಧಿಕವೆನ್ನಲೂ ಬಹುದು.

ಹೀಗಾದಲ್ಲಿ ಇಬ್ಬರಿಗೂ ಭಾಗವತತ್ವವುಂಟಾದರೆ ಒಬ್ಬರ ಬಗ್ಗೆ ಮತ್ತೊಬ್ಬರಿಗೆ ಶೇಷತ್ವವೂ ಶೇಷಿತ್ವವೂ ಬರುವುದು ವಿರುದ್ಧವಲ್ಲವೆ ?— ಎಂದಲ್ಲಿ, ಪರಸ್ಪರ ಉಪಕಾರ್ಯ–ಉಪಕಾರಕ ಭಾವಾದಿಗಳಲ್ಲಿಯಂತೆ ಇಲ್ಲಿಯೂ ವಿರೋಧವಿಲ್ಲ. ಯಾಗಕ್ರಿಯೆಗೆ ಅಧಿಕಾರಿಯಾದವನು ಫಲ ಸಿದ್ಧಿಗಾಗಿ ವಿಹಿತವಾಗಿರುವುದಿರಿಂದ ಅಧಿಕಾರ್ಯವಸ್ಥೆಯಲ್ಲಿ ಫಲಿಯಾಗಿದ್ದುಕೊಂಡು ಆ ಕ್ರಿಯೆಗೆ ಶೇಷಿಯಾಗಿದ್ದಾನೆ. ಫಲಕ್ಕಾಗಿ ಕ್ರಿಯೆಯನ್ನು ಮಾಡುವಾಗ ಕರ್ತೃವಿಲ್ಲದೆ ಕ್ರಿಯೆ ನಿಷ್ಪನ್ನವಾಗದುದರಿಂದ ಆ ಕ್ರಿಯೆಗೆ ತಾನು ಕರ್ತೃವಾಗಿ ಶೇಷಭೂತನೂ ಆಗಿದ್ದಾನೆಯೆಂದು ನಿರ್ಣಯಿಸಿದ್ದಾರೆ. ಅದರಂತೆಯೇ ಒಬ್ಬರಿಗೊಬ್ಬರು

ಮಾಡುವ ಅತಿಶಯಗಳನ್ನು, ಕೃತಪ್ರತಿಕೃತಿಯೆಂಬ ಬುದ್ಧಿಯನ್ನು ಬಿಟ್ಟು ಒಬ್ಬರಿಗೊಬ್ಬರು ಅತಿಶಯಾಧಾಯಕರಾದರೆ ಅತಿಶಯಾಧಾಯಕತ್ವವೇಷದಿಂದ ಇಬ್ಬರಿಗೂ ಶೇಷತ್ವವುಂಟು. ಅತಿಶಯಕ್ಕೆ ಆಶ್ರಯವಾದ ವೇಷದಿಂದ ಇಬ್ಬರಿಗೂ ಶೇಷಿತ್ವವೂ ಉಂಟು. ಹೀಗೆ ಈಶ್ವರೇಚ್ಛೆಯಿಂದ ಇಬ್ಬರೂ ಒಬ್ಬರಿಗೊಬ್ಬರು ಅತಿಶಯಾಧಾಯಕರಾಗಿ ವಿನಿಯುಕ್ತರಾಗಿರುವುದರಿಂದ ಇಬ್ಬರಿಗೂ ಭಾಗವತ ಶೇಷತ್ವ ಸಂಬಂಧವು ಪ್ರಾಮಾಣಿಕ. "ಮಮ ಮದ್ಭಕ್ತ ಭಕ್ತೇಷು ಪ್ರೀತಿರಭ್ಯಧಿಕಾಭವೇತ್," "ಆರಾಧನಾನಾಂ ಸರ್ವೇಷಾಂ ವಿಷ್ಣೋರಾರಾಧನಂ ಪರಂ। ತಸ್ಮಾತ್ಪರತರಂ ಪ್ರೋಕ್ತಂ ತದೀಯಾರಾಧನಂ ಪರಂ ॥" —"ತದಾಶ್ರಿತಸ್ಯಾಶ್ರಯಣಾತ್ ತಸ್ಯ ತಸ್ಯ ಚ ತಸ್ಯ ಚ । ಸಮಾಶ್ರಯಣಾನ್ನರಾಲೋಕೇ ಪೂಯನ್ತೇ ಸರ್ವ ಪಾತಕೈಃ ॥"—ಇತ್ಯಾದಿ ಪ್ರಮಾಣಗಳಿಂದ ಸರ್ವಸ್ವಾಮಿಯು ಭಾಗವತರುಗಳನ್ನೇ ಶೇಷಿಗಳನ್ನಾಗಿಯೂ ಶೇಷರನ್ನಾಗಿಯೂ ವಿನಿಯೋಗಿಸುವುದಾಗಿ ತಿಳಿದಿರುವುದರಿಂದ ಪ್ರಪನ್ನರಿಗೆ ಸಂಸಾರ್ಯಾಶ್ರಯವಾದ ಅತಿಶಯ ಜನನ ಪ್ರಸಂಗಕ್ಕೆ ಆಸ್ಪದವಿಲ್ಲ. ಇದರಲ್ಲಿ ಈಶ್ವರನು ಸ್ವತಂತ್ರೇಚ್ಛೆಯಿಂದ ಭಾಗವತರೆಲ್ಲರಿಗೂ ಶೇಷಿತ್ವವನ್ನೂ, ಆಯಾ ಭಾಗವತರ ಇಚ್ಛೆಯಿಂದ ಶೇಷತ್ವವನ್ನೂ ಉತ್ಪಾದಿಸಿದ್ದಾನೆ. ಅದರಿಂದ ಪರಸ್ಪರವಾಗಿ ಭಾಗವತರಿಗೆ ಸ್ವರೂಪ ಸತ್ತೆಯೂ, ಪುರುಷಾರ್ಥಕಾಷ್ಠೆಯೂ ಸಿದ್ಧಿಸುವುದು. ಈಶ್ವರನಿಗಾದರೋ ಈಶ್ವರತ್ವಲಾಭವೂ ಭೋಕ್ತೃತ್ವಲಾಭವೂ ಸಿದ್ಧಿಸುತ್ತೆ.

ಹೀಗೆ ಸಾರವನ್ನು ನಿಶ್ಚಯಿಸಿದ ಕೃತಕೃತ್ಯರು ಅಪರಾಧರುಚಿ, ಅತಿಶಂಕೆ, ದೇವತಾಂತರಸ್ಪರ್ಶ, ಸ್ವಾಧೀನ ಭೋಗ-ಸ್ವಾರ್ಥಭೋಗಗಳೇ ಮೊದಲಾದ ದೋಷರಹಿತರೂ, ಪರಮೈಕಾಂತಿಗಳೂ ಆದವರ ಅನುಗ್ರಹವನ್ನೇ ಸರ್ವದಾ ಸ್ವಯಂಪ್ರಯೋಜನವಾಗಿ ಅಪೇಕ್ಷಿಸತಕ್ಕದ್ದೆಂದು, ಆ ಪ್ರಸಾದವನ್ನೇ ಶ್ರೀಮದಾಚಾರ್ಯರು ಇಲ್ಲಿಯೂ ಪ್ರಾರ್ಥಿಸುತ್ತಾರೆ :—

"ನಾಥೇನ ಸ್ತೃಣಮನ್ಯ ದನ್ಯದಪಿ ವಾ ತನ್ನಾಭಿ ನಾಳೀಕಿನೀ -
ನಾಳೀ ಕಸ್ಪೃಹಣೀಯ ಸೌರಭಮುಚಾ ವಾ ಚಾ ನ ಯಾಚಾಮಹೇ ।
ಶುದ್ಧಾನಾಂ ತು ಲಭೇಮಹಿ ಸ್ಥಿರಧಿಯಾಂ ಶುದ್ಧಾನ್ತ ಸಿದ್ಧಾನ್ತಿನಾಂ
ಮುಕ್ತೈಶ್ವರ್ಯ ದಿನ ಪ್ರಭಾತಸಮಯಾ ಸಕ್ತಿಂ ಪ್ರಸತ್ತಿಂ ಮುಹುಃ॥"

ಇತಿ. [ಭಾಗವತರ ಅನುಗ್ರಹವೇ ನಾವು ಬಯಸತಕ್ಕದೆಂದು ಮೇಲೆ ಹೇಳಿದ್ದಾ

ಯಿತು. ಅದನ್ನೇ ಅನುಗ್ರಹಿಸಬೇಕೆಂದು ಭಗವಂತನಲ್ಲಿ ಈ ಶ್ಲೋಕದಿಂದ ಪ್ರಾರ್ಥಿಸಿದ್ದಾರೆ, ಶ್ರೀಮದಾಚಾರ್ಯರು :

[ಇಲ್ಲಿ ತೃಣಂ ಎಂದರೆ (ಹುಲ್ಲು ಕಡ್ಡಿಗೆ ಸಮವಾದ) ಐಹಿಕೈಶ್ವರ್ಯ, (ಅನ್ಯತ್)-ಆದಕ್ಕಿಂತ ವಿಲಕ್ಷಣವಾದ ಕೈವಲ್ಯ, (ಅನ್ಯದಪಿ ವಾ)--ಮೋಕ್ಷ ಇದು ಯಾವುದನ್ನೂ, ತನ್ನಾಭಿನಾಳೀಕಿನೀ-ನಾಳೀಕ-ಸ್ಪೃಹಣೀಯ-ಸೌರಭಮುಚಾ-ಆ ಭಗವಂತನ ಹೊಕ್ಕಳೆಂಬ-ಸರೋವರದಲ್ಲಿಯ-ಕಮಲದಿಂದ-ಬಯಸಲ್ಪಟ್ಟ-ಪರಿಮಳವನ್ನು ಪ್ರಸರಿಸುವ, ವಾಚಾ--ವಾಕ್ಕಿನಿಂದ, ನಾಥೇ-ಭಗವಂತನಲ್ಲಿ. ನ ಯಾಚಾಮಹೇ-ಯಾಚಿಸೆವು.

ಹಾಗಾದರೆ ಬಯಸತಕ್ಕದ್ದಿನ್ನೇನು?-ಎಂದಲ್ಲಿ, ಶುದ್ಧಾನಾಂ-ಶುದ್ಧವಾದ, ಶುದ್ಧಾಂತ-ಸಿದ್ಧಾಂತಿನಾಂ-ಲಕ್ಷ್ಮಿಯ- ("ಶರೈಸ್ತು ಸಂಕುಲಾಂ ಕೃತ್ವಾ ಲಂಕಾಂ ಪರಬಲಾರ್ದನಃ। ಮಾಂ ನಯೇದ್ಯದಿ ಕಾಕುತ್‌ಸ್ಥಃ ತತ್ತಸ್ಯ ಸದೃಶಂ ಭವೇತ್॥"-ಎಂಬಲ್ಲಿ ಹೇಳಿರುವ ಹಾಗೆ) ತಮ್ಮ ನಿರ್ಭರತ್ವದಲ್ಲಿ ನಿಶ್ಚಯವುಳ್ಳವರಾದ, ಸ್ಥಿರಧಿಯಾಂ-ಪ್ರಪನ್ನರ, ಮುಕ್ತ್ಯೈಶ್ವರ್ಯ-ದಿನ-ಪ್ರಭಾತ-ಸಮಯ ಆಸಕ್ತಿಂ-ಮೋಕ್ಷೈಶ್ವರ್ಯವೆಂಬ-ದಿವಸದ - ಪ್ರಾತಃಕಾಲ - ಸಂಬಂಧ ರೂಪವಾದ, ಪ್ರಸತ್ತಿಂ-ಪ್ರಸಾದವನ್ನು, ಮುಹುಃ-ಬಾರಿ ಬಾರಿಗೂ, ಲಭೇಮಹಿ-ಪಡೆಯಲಿಚ್ಛಿಸುತ್ತೇವೆ. (ಭಾಗವತರ ಅನುಗ್ರಹವನ್ನೇ ಸ್ವಯಂ ಪ್ರಯೋಜನವಾಗಿ ಬಯಸುತ್ತೇವೆಯೆಂದು ಭಾವ)].

## ೧೭. ಶಾಸ್ತ್ರೀಯ ನಿಯಮನಾಧಿಕಾರಃ

ಹೀಗೆ ಅತ್ಯಾದರದಿಂದ ಮಾಡಬೇಕಾದ ಭಗವದ್ಭಾಗವತ ಕೈಂಕರ್ಯಗಳನ್ನು ಶಾಸ್ತ್ರೋಕ್ತಗಳಾದ ನಿಯಮಗಳಿಗನುಸಾರವಾಗಿಯೇ ಮಾಡಬೇಕೇ ಹೊರತು ನಮ್ಮ ಮನಸ್ಸಿಗೆ ತೋರಿದಂತೆ ಮಾಡಬಾರದು-ಅಜ್ಞಾನ ಪ್ರಚುರವಾದ ಪ್ರಕೃತಿ ಮಂಡಲದಲ್ಲಿರುವ ನಮಗೆ ಶಾಸ್ತ್ರವೇ ಕೈದೀವಿಗೆಯೆಷ್ಟೆ! ಶಾಸ್ತ್ರ ವಿಕಲ್ಪಿಸಿರುವ ವಿಷಯಗಳಲ್ಲಿ ಮಾತ್ರ ತಮಗೆ ರುಚಿಸಿದಂತೆ ಮಾಡಬಹುದು.

ಹೀಗೆ ಶಾಸ್ತ್ರೀಯ ನಿಯಮಗಳನ್ನು ಅನುವರ್ತಿಸುವುದರಿಂದ ಅಪೂರ್ಣೋಪಾಯರಾದ ಅಧಿಕಾರಿಗಳಿಗೆ ಉಪಾಯ ಪೂರ್ತಿಗೆ ತಡೆಯಾದ ದುರಿತಗಳು ಶಮನವಾಗಿ ಭಗವಂತನ ಪ್ರಸಾದವೂ ಉದಯಿಸುತ್ತೆ, ಪೂರ್ಣೋಪಾಯರಿಗಾದರೋ – ಶಾಸ್ತ್ರಾತಿಕ್ರಮದಿಂದುಂಟಾಗುವುದಾಗಿದ್ದ ಅಪ್ರೀತಿಯು ತಪ್ಪಿ, ಭಗವತ್ಪ್ರೀತಿ ವೃದ್ಧಿಯಾಗುವುದು. ಶಾಸ್ತ್ರವಿಹಿತವಾದ ಧರ್ಮವು ಆಜ್ಞಾ. ಅನುಜ್ಞಾ – ಎಂದೆರಡು ಬಗೆ. ಆಜ್ಞಾ ಸಿದ್ಧವಾದ ಧರ್ಮವನ್ನು ಅನುಷ್ಠಿಸಿದಲ್ಲಿ ಅನನುಷ್ಠಾನ ನಿಬಂಧನವಾದ ಭಗವನ್ನಿಗ್ರಹವು ತಪ್ಪುತ್ತೆ. ಅನುಜ್ಞಾ ಸಿದ್ಧವಾದ ಧರ್ಮವನ್ನು ಅನುಷ್ಠಿಸದಿದ್ದಲ್ಲಿ ಪ್ರತ್ಯವಾಯವಿಲ್ಲ. ಆಯಾ ಫಲಕ್ಕೋಸ್ಕರ ಅದನ್ನು ಅನುಷ್ಠಿಸುವಲ್ಲಿ ಅದನ್ನೂ ಆಜ್ಞಾಸಿದ್ಧವಾದ ಕ್ರಮದಲ್ಲಿಯೇ ಅನುಷ್ಠಿಸಬೇಕು. ಇಲ್ಲದಿದ್ದಲ್ಲಿ ಆಜ್ಞಾತಿ ಕ್ರಮ ದೋಷ ಬರುವುದು. ಆದ್ದರಿಂದ ಮುಕುಂದನಲ್ಲಿ ತನ್ನ ರಕ್ಷಣೆಯ ಭಾರವನ್ನು ಸಮರ್ಪಿಸಿ ಪಾಪರಹಿತನಾದ ಪ್ರಪನ್ನಾಧಿಕಾರಿಯು ಭಗವಂತನ ಆಜ್ಞಾನುಜ್ಞಾ ರೂಪಗಳಾದ ಶ್ರುತಿ ಸ್ಮೃತಿಗಳಿಂದಲೇ ಸ್ವಾಮಿಯ ಹೃದಯವನ್ನು ತಿಳಿದು ಅವನಿಗೆ ಅತ್ಯಂತಾಭಿಮತವನ್ನೇ ಆಚರಿಸಬೇಕಾದುದರಿಂದಲೂ, ಹಾಗಲ್ಲದೆ ಶಾಸ್ತ್ರೋಕ್ತ ಕ್ರಮವನ್ನು ಉಲ್ಲಂಘಿಸುವಲ್ಲಿ ತನಗೂ ಪರರಿಗೂ ವಿವಿಧ ಅನರ್ಥಗಳುಂಟಾಗುವುದರಿಂದಲೂ ಅದರ ಪರಿಹಾರಕ್ಕಾಗಿ ಈ ದೇಹಾವಸಾನಪರ್ಯಂತವೂ ಸ್ವತಂತ್ರನಾದ ಭಗವಂತನ ಆಜ್ಞಾಸಿದ್ಧವಾದ ಕೈಂಕರ್ಯಗಳನ್ನು ತಪ್ಪದೆ ಶಾಸ್ತ್ರೋಕ್ತವಾದ ಮಾರ್ಗದಲ್ಲಿಯೇ ಮಾಡಿಕೊಂಡಿರಬೇಕೆಂದು ಕೆಳಗಿನ ಶ್ಲೋಕದಲ್ಲಿ ಅಪ್ಪಣೆ ಕೊಟ್ಟಿದ್ದಾರೆ :—

"ಮುಕುಂದೇ ನಿಕ್ಷಿಪ್ಯ ಸ್ವಭರಮನಘೋ ಮುಕ್ತಪದಸೌ ಸ್ವತಂತ್ರಾಜ್ಞಾಸಿದ್ಧಾಂ ಸ್ವಯಮವಿದಿತ ಸ್ವಾಮಿಹೃದಯಃ। ಪರಿತ್ಯಾಗೇ ಸದ್ಯಃ ಸ್ವಪರ ವಿವಿಧಾನರ್ಥ ಜನನಾತ್ ಅಲಂಘ್ಯಾಮಾಮೋಕ್ಷಾತ್ ಅನುಸರತಿ ಶಾಸ್ತ್ರೀಯ ಸರಣಿಂ"॥– ಇತಿ. ಇಲ್ಲಿ ಶಾಸ್ತ್ರೀಯ ಪರಿತ್ಯಾಗದಿಂದ ಬರುವ ವಿವಿಧವಾದ ಸ್ವಪರಾನರ್ಥಗಳೆಂಬವು–ಸ್ವಾನರ್ಥ : ಇಲ್ಲಿ ಭಗವದಪ್ರೀತಿ. ಪರಮ ವೈದಿಕ ನಿಂದೆ, ಪರತ್ರ ನರಕಪಾತಾದಿಗಳು. ಪರರಿಗಾಗುವ ಅನರ್ಥ : "ಯದ್ಯದಾಚರತಿಶ್ರೇಷ್ಠಃ ತತ್ತದೇವೇತರೋಜನಃ।" -- ಇತ್ಯಾದಿಯಿಂದ ಹೇಳಿರುವಂತೆ

ಇತರರಿಗೂ ಶಾಸ್ತ್ರೀಯ ನಿಯಮದ ಉಲ್ಲಂಘನೆಗೆ ಕಾರಣವಾಗುವುದರಿಂದ ತನಗಾಗುವ ಭಗವದಪ್ರೀತಿ. ಇದಕ್ಕೆ ಸೂಚಕವಾದ ವಚನಗಳು "ಆಜ್ಞಾನುಜ್ಞಾವಿಭಾಗೇನ ದ್ವಿಧಾಶಾಸ್ತ್ರೀಯ ಪದ್ಧತಿಃ। ನಿಗ್ರಹಾನುದಯಾಯಾಜ್ಞಾ ಪರಾ ತತ್ತತ್ಫಲಾಪ್ತಯೇ॥"– "ಶ್ರುತಿಸ್ಮೃತಿರ್ಮಮೈವಾಜ್ಞಾ ಯಸ್ತಾಮುಲ್ಲಂಘ್ಯ ವರ್ತತೇ। ಆಜ್ಞಾಚ್ಛೇದೀಮಮ ದ್ರೋಹೀ ಮದ್ಭಕ್ತೋಽಪಿನ ವೈಷ್ಣವಃ॥" "ಏವಂ ವಿಲಂಘಯನ್ ಮರ್ತ್ಯೋ ಮರ್ಯಾದಾಂ ವೇದ ನಿರ್ಮಿತಾಂ। ಪ್ರಿಯೋಽಪಿನಪ್ರಿಯೋಽಸೌ ಮೆ ಮದಾಜ್ಞಾ ವ್ಯತಿ ವರ್ತನಾತ್॥"- ಇತ್ಯಾದಿ. ಆದ್ದರಿಂದ "ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯ ವ್ಯವಸ್ಥಿತೌ॥"- ಎಂಬಂತೆ-ಶಾಸ್ತ್ರೀಯ ಪದ್ಧತಿಯು ಈ ಅಧಿಕಾರಿಗೆ ಅಲಂಘ್ಯವಾದದ್ದು.

ವೇದಗಳು ಅನಂತವೂ ಖಿಲವೂ ಆದುದರಿಂದ, ಶಾಸ್ತ್ರೀಯ ನಿಯಮವನ್ನು ಅರಿಯುವುದು ಹೇಗೆ?– ಎಂದರೆ ;

"ಶ್ರುತಿ ಸ್ಮೃತ್ಯಾಚಾರೈಃ ಸ್ವಮತಗತಿಭಿ ಶ್ಶುದ್ಧಮನಸಾಂ, ಸುಸಂಕಲ್ಪೈಃ ಧರ್ಮ್ಯೈಃ ಕುಲಚರಣ ದೇಶಾದಿ ಸಮಯೈಃ। ನಿಯೋಗೈರ್ಯೋಗ್ಯಾನಾಂ ನಿಯಮಯಿತುರಾದೇರಭಿಮತಂ ನಿಮಿತ್ತ ಸ್ವಪ್ನಾದ್ಯೈರಪಿ ನಿಪುಣ ಮನ್ವಿಚ್ಛತಿ ಬುಧಃ॥"–ಅಂದರೆ–"ಯಾವಜ್ಜೀವಮಗ್ನಿ ಹೋತ್ರಂ ಜುಹೋತಿ" –ಇತ್ಯಾದಿ ಶ್ರುತಿಯಿಂದ ಮೊದಲು ಅಗ್ನಿ ಹೋತ್ರಾದಿಯು ಭಗವದಭಿಮತವೆಂದು ತಿಳಿಯುವುದು. ಶ್ರುತಿಯಿಲ್ಲದಿದ್ದಲ್ಲಿ, ಅದಕ್ಕೆ ಅವಿರುದ್ಧವಾದ "ಅಷ್ಟಕಾ ಕರ್ತವ್ಯಾ" – ಇತ್ಯಾದಿ ಸ್ಮೃತಿಯಿಂದ, ಸ್ಮೃತಿಯಿಲ್ಲದಿದ್ದಲ್ಲಿ ಇವೆರಡಕ್ಕೂ ವಿರುದ್ಧವಲ್ಲದ ಸದಾಚಾರದಿಂದ, ಭಗವದಭಿಮತವಾದ ಧರ್ಮವನ್ನು ತಿಳಿಯಬೇಕು. ಶ್ರುತ್ಯಾದಿಗಳಿಂದ ಧರ್ಮದ ಸ್ವರೂಪ ತಿಳಿಯುವಲ್ಲಿ ವಿಕಲ್ಪಿತ ಸ್ಥಳಗಳಲ್ಲಿ "ಸ್ವಸ್ಯಚ ಪ್ರಿಯಮಾತ್ಮನಃ"– ಎಂಬಂತೆ ಸ್ವಂತ ತುಷ್ಟಿಯಿಂದ ವಿಕಲ್ಪಿತವಾದುವುಗಳಲ್ಲಿ ಒಂದನ್ನು ಸ್ವೀಕರಿಸಿ ಆಚರಿಸಬಹುದು. ಶಾಸ್ತ್ರೀಯವಾದ ಧರ್ಮಗಳ ಬಗ್ಗೆ ಸಂಶಯವುಂಟಾದ ಕಡೆ "ಸತಾಂ ಹಿ ಸಂದೇಹ ಪದೇಷು ವಸ್ತುಷು ಪ್ರಮಾಣಮಂತಃಕರಣ ಪ್ರವೃತ್ತಯಃ" – ಎಂಬಂತೆ ಶುದ್ಧ ಮನಸ್ಸುಳ್ಳವರ, ಧರ್ಮ್ಯವೂ ಶೋಭನವೂ ಆದ ಅಂತಃಕರಣ ಪ್ರವೃತ್ತಿಗಳಿಂದಲೂ, ಶಾಸ್ತ್ರೋಕ್ತಗಳಲ್ಲಿಯೂ ಕೂಡ ಕುಲಸಮಯಾಚರಣ

ಸಮಯ, ದೇಶಾದಿ ಸಮಯ, ಯೋಗ್ಯರ "ಏವಂಕುರು"- ಎಂಬ ಅಪ್ಪಣೆ ಗಳಿಂದಲೂ ಅಥವಾ ಧರ್ಮದಲ್ಲಿ ಸಂದೇಹ ಬಂದಾಗ ಶಕುನ, ಉಪಶ್ರುತಿ, ಸ್ವಪ್ನ, ಭಗವಂತನ ಪಾದದಲ್ಲಿ ಚೀಟಿಯನ್ನು ಸಮರ್ಪಿಸುವುದು, ಅರ್ಚಕರ ಬಾಯಿಯಿಂದ ತಿಳಿಯುವುದು, ಇವೇ ಮುಂತಾದುವುಗಳಿಂದ ಕರ್ತವ್ಯವನ್ನು ನಿಶ್ಚಯಿಸಿ ಅದನ್ನು ಪ್ರೀತಿಯಿಂದ ಆಚರಿಸತಕ್ಕದ್ದೆನ್ನುತ್ತಾರೆ.

ಮೇಲೆ ಹೇಳಿರುವುದರಲ್ಲಿ [ಕುಲಸಮಯ]—ತಮ್ಮ ವಂಶದ ಸಂಕೇತ, ಪುರಶ್ಟೂಡಾದಿ ( ಮುಂದೆ ಜುಟ್ಟಿಟುಕೊಳ್ಳುವುದು ) [ ಸಮಯ = ಆಚಾರ : [ಚರಣಸಮಯ] – ಯಜುರ್ವೇದಿಗಳು ಶ್ರಾವಣ ಹುಣ್ಣಿಮೆಯಲ್ಲಿಯೂ ಋಗ್ವೇದಿಗಳು, ಶ್ರವಣ ನಕ್ಷತ್ರದಲ್ಲಿಯೂ, ಸಾಮವೇದಿಗಳು ಹಸ್ತ ನಕ್ಷತ್ರ ದಲ್ಲಿಯೂ ವೇದೋಪಕ್ರಮವನ್ನು ಮಾಡಬೇಕೆಂಬುದೇ ಮುಂತಾದುದು. [ದೇಶಸಮಯ] – ನರ್ಮದಾ ತೀರಕ್ಕೆ ದಕ್ಷಿಣದಲ್ಲಿಯವರು ಕರ್ಕಾಟಕಮಾಸ ದಲ್ಲಿಯೂ, ಉತ್ತರತೀರವಾಸಿಗಳು ಸಿಂಹ ಮಾಸದಲ್ಲಿಯೂ ಉಪಾಕರ್ಮಮಾಡ ತಕ್ಕದೆಂಬ ದೇಶ ಸಂಕೇತತಗಳಾದ ಆಚಾರಗಳು. ನಿಮಿತ್ತಸ್ವಪ್ನಾದಿಗಳಿಂದ ಭಗವದಭಿಮತವನ್ನು ತಿಳಿಯಬಹುದೆನ್ನುವುದಕ್ಕೆ ಪ್ರಮಾಣಗಳು :—

"ತ್ರಿರೊಪ್ಯೋ ಹಿತಮಾಚಷ್ಟೇ ಮನುಷ್ಯಾಣಾಂ ಕಲೌಹರಿಃ। ಗುರುಶ್ಚ ಸ್ವಪ್ನದೃಷ್ಟಶ್ಚ ಪೂಜಾನ್ತೇಚಾರ್ಚಕಾನನಾತ್॥" "ಶ್ರುತಿಃ ಸ್ಮೃತಿಸ್ಸದಾ ಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ। ಸಮ್ಯಕ್ ಸಂಕಲ್ಪಜಃಕಾಮಃ ಧರ್ಮ ಮೂಲ ಮಿತಿಸ್ಮೃತಂ॥" – ಇತ್ಯಾದಿ.

## ೧೮. ಅಪರಾಧಪರಿಹಾರಾಧಿಕಾರ :—

ಹೀಗೆ ಭಗವಚ್ಛೇಷತ್ವವನ್ನೇ ಸ್ವಭಾವವಾಗಿಯುಳ್ಳವನೂ, ಭಗವ ತ್ಕೈಂಕರ್ಯದಲ್ಲಿಯೇ ರಸಿಕನೂ ಆದ ಪ್ರಪನ್ನನಿಗೆ ಈ ನಿಷ್ಠೆಗೆ ವಿರುದ್ಧ ವಾದ್ದರಿಂದ, ಬುದ್ಧಿಪೂರ್ವಕವಾದ ಅಪರಾಧವು ಅನಾಪತ್ತಿನಲ್ಲಿ ಪ್ರಾಯಶಃ ಸಂಭವಿಸದು. ಪ್ರಾರಬ್ಧ ಕರ್ಮವಶದಿಂದ ದೇಶಕಾಲಾವಸ್ಥಾದಿಯಿಂದಲೂ ಪ್ರಮಾದವಶದಿಂದಲೂ. ಸುಷುಪ್ತ್ಯವಸ್ಥಾವಶದಿಂದಲೂ ಸಂಭವಿಸಿದಾಗ್ಯೂ ಅದು ಇವನಿಗೆ ಅಂಟುವುದಿಲ್ಲ.

ಮೋಕ್ಷಕ್ಕಾಗಿ ಪ್ರಪತ್ತಿಯನ್ನು ಅನುಷ್ಠಿಸುವಾಗಲೇ ಬುದ್ಧಿ ಪೂರ್ವಕ ಪಾಪಗಳಿಗೆ ಹೇತುಗಳಾದ ಪಾಪಗಳ ನಿವೃತ್ತಿಯನ್ನೂ ಕೂಡಿಸಿ ಪ್ರಪತ್ತಿಯ ನುಷ್ಠಿಸದವರಿಗೆ ಪ್ರಕೃತಿ ಸಂಬಂಧದ ಮಹಿಮೆಯಿಂದಲೂ ಆತ್ಮ ಗುಣ ಪೂರ್ತಿ ಯಿಲ್ಲದ್ದರಿಂದಲೂ, ಮಂದ ಧೈರ್ಯರಾದ ಋಷಿಗಳಿಗೆ ತಪಸ್ಸು ಮಾಡುತ್ತಿದ್ದಾ ಗಲೇ ಕಣ್ಣಿಗೆ ಬಿದ್ದ ಅಪ್ಸರಸಿಯರ ಮೇಲೆ ಪ್ರಾರಬ್ಧ ವಶದಿಂದ ಮೋಹವುಂ ಟಾದ ಹಾಗೆ ಕೆಲವು ವೇಳೆ ಬುದ್ಧಿ ಪೂರ್ವಕವಾಗಿ ವಿಪರೀತಾನುಷ್ಠಾನವುಂಟಾಗ ಲಾಗಿ, ನಿಸರ್ಗ ಸುಹೃತ್ತೂ ರಕ್ಷಣೋನ್ಮುಖನೂ ಆದ ಶ್ರಿಯಃಪತಿಯು ಲಜ್ಜೆ, ಅನುತಾಪ ಮುಂತಾದುವುಗಳಿಂದ ಅವರವರ ಅಧಿಕಾರಕ್ಕೆ ತಕ್ಕಂತೆ ಪ್ರಾಯಶ್ಚಿತ್ತ ವನ್ನು ವಿಧಿಸಿರುವನು.

ಹೀಗೆ. ಪ್ರಾರಬ್ಧ ಕರ್ಮ ವಿಶೇಷಕ್ಕೆ ವಶರಾಗಿ, ತಮ್ಮ ಅಧಿಕಾರಾನು ಗುಣವಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದ ಕಠಿನ ಪ್ರಕೃತಿಗಳಿಗೆ ಕುಂಟು, ಕುರುಡು ಮುಂತಾದ ಉಪಕ್ಲೇಶಗಳ ಮೂಲಕ ಲಘುವಾದ ಶಿಕ್ಷೆಗಳನ್ನು ಕೊಟ್ಟು ಕ್ಷಮಾ-ಪ್ರೇಮ- ದಯಾ-ವಾತ್ಸಲ್ಯಾದಿಗಳಿಂದ ಮಂದ ಪ್ರತಾಪವುಳ್ಳವನಾದ ಭಗವಂತನು ಅವರ ಪಾಪಗಳನ್ನು ನೀಗಿಸಿ ಸಂರಕ್ಷಿಸುವನು. ಈ ಕ್ಷಮಾಪ್ರಕಾ ರವೂ ಇವರು ಹಿಂದೆ ಮಾಡಿದ ಪ್ರಪತ್ತಿಯ ಫಲವೇ ಆದ್ದರಿಂದ ಈ ಅಧಿಕಾರಿ ಗಳಿಗೆ ಅವನ ಬಗ್ಗೆ ಇರಬೇಕಾದ ಕೃತಜ್ಞತೆಗೇ ಪೋಷಕವಾದದ್ದು.

ಆದ್ದರಿಂದ ಬುದ್ಧಿಪೂರ್ವಕವಾಗಿಯೇ ಉತ್ತರಾಘವು ಸಂಭವಿಸಿದಲ್ಲಿ, ಅದಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲೇಬೇಕು. ಮಾಡಿಕೊಳ್ಳದಿದ್ದಲ್ಲಿ ದಂಡನೆಯಿಲ್ಲ. ವಿಳಂಬವನ್ನು ಸಹಿಸದವರಿಗೆ ಪರಮ ಫಲಕ್ಕೆ ವಿಳಂಬವೂ ಆಗುವುದಿಲ್ಲ. ಪ್ರಾರಬ್ಧ ಸುಕೃತ ವಿಶೇಷದಿಂದ ಐಹಿಕ ಕೈಂಕರ್ಯಕ್ಕೆ ವಿಚ್ಛಿತ್ತಿಯೂ ಇಲ್ಲ ಎಂಬಿವೇ ಮುಂತಾದುವುಗಳು ಶರಣ್ಯನ ಗುಣಗಳ ಮತ್ತು ಶರಣಾಗತಿ ಪ್ರಭಾವದ ಬಗ್ಗೆ ಹೇಳುವ ವೈಭವವಾದಗಳು ಮಾತ್ರ. ಹೀಗಿಲ್ಲದಿದ್ದಲ್ಲಿ ಪ್ರಪನ್ನ ರಾದ ಪೂರ್ವಾಚಾರ್ಯರುಗಳ ಅನುಷ್ಠಾನಕ್ಕೂ ಶಾಸ್ತ್ರಕ್ಕೂ ವಿರೋಧ ಬರು ವುದು. ಅಲ್ಲದೆ ಉಪಾಸಕನಿಗೂ ಬುದ್ಧಿಪೂರ್ವವಾದ ಉತ್ತರಾಘಕ್ಕೆ ಉಪಾಸನ ಮಹಿಮೆಯಿಂದ ಪ್ರತ್ಯವಾಯವಿಲ್ಲವೆಂದಾದೀತು. ಆದ್ದರಿಂದ ಪ್ರಪನ್ನನು ಉತ್ತರಾಘಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳದಿದ್ದಲ್ಲಿ ಅವನಿಗೆ ದಂಡವುಂಟು. ಆದರೆ ರಾಜಪುತ್ರಾಪರಾಧಕ್ಕೆ ಹೇಗೋ ಹಾಗೆ ಅದು ಲಘುವಾದ ದಂಡ. ಈ

ಲಘು ದಂಡವೂ ಬಾರದಿರುವುದಕ್ಕಾಗಿ "ಅಪಾಯ ಸಂಪ್ಲವೇ ಸದ್ಯಃ ಪ್ರಾಯಶ್ಚಿತ್ತಂ ವಿಧೀಯತೇ । ಪ್ರಾಯಶ್ಚಿತ್ತಿರಿಯಂ ಸಾತ್ರ ಯತ್ಪುನಶ್ಶರಣಂ ವ್ರಜೇತ್॥" ಎಂಬಂತೆ ಪುನಃ ಪ್ರಪದನವೇ ಮೊದಲಾದುದು ವಿಹಿತವಾಗಿದೆ. ಶಿಷ್ಟರೆಂದು ಪ್ರಸಿದ್ಧಿ ಹೊಂದಿರುವವರಾದರೋ ಲೋಕಸಂಗ್ರಹಕ್ಕಾಗಿ ಲೋಕ ಸಂಪ್ರದಾಯದಲ್ಲಿ ಪ್ರಸಿದ್ಧವಾದ ನಿಮಿತ್ತಗಳಿಗೆ ಯಥಾಶಕ್ತಿ ಪ್ರಸಿದ್ಧವಾದ ಪ್ರಾಯಶ್ಚಿತ್ತ ಮಾಡಿಕೊಳ್ಳುವುದೇ ಯುಕ್ತ.

ಹೀಗಿರುವಲ್ಲಿ, ಈ ಅಧಿಕಾರಿಯೂ ಮುಂದೆ ಬರಬಹುದಾದ ಬುದ್ಧಿ ಪೂರ್ವಕ ಪಾಪಗಳಿಗೆ ಅಂಜುವವನೇ ಆದರೆ ಮೋಕ್ಷಾರ್ಥ ಪ್ರಪತ್ತಿ ಮಾಡು ವಾಗಲೇ ಪ್ರಾರಬ್ಧ ಕರ್ಮಗಳಲ್ಲಿಯ ಪಾಪಾಂಶದ ನಿವೃತ್ತಿಯನ್ನೂ ಉದ್ದೇಶಿಸಿ ಮೋಕ್ಷಾರ್ಥ ಪ್ರಪತ್ತಿಯನ್ನು ಅನುಷ್ಠಿಸಬೇಕು. ಅಥವಾ ಅನಂತರವಾದರೂ ಅದಕ್ಕೆ ಪ್ರತ್ಯೇಕವಾಗಿ ಪ್ರಪತ್ತಿಯನ್ನು ಮಾಡಿಕೊಳ್ಳಬೇಕು. ಆದ್ದರಿಂದಲೇ ಸರ್ವೇಶ್ವರನಂತೆ ನಿತ್ಯಸೂರಿಗಳೂ ಅವತಾರ ಮಾಡಿದಾಗ ಕರ್ಮವಶ್ಯರಂತೆ ನಟಿಸಿ ಲೋಕ ಹಿತಕ್ಕಾಗಿ ಅಪರಾಧ ಪರಿಹಾರಾದಿಗಳನ್ನು ನಡೆಸಿಕೊಂಡಿದ್ದಾರೆ.

ಈ ಅಪರಾಧಗಳೊಳಗೂ ಭಾಗವತಾಪಚಾರವು ರಾಜಮಹಿಷೀ ಬಗ್ಗೆ ಮಾಡಿದ ಅಪರಾಧದಂತೆ ಭಗವಂತನ ನಿಗ್ರಹ ಸಂಕಲ್ಪವನ್ನು ಇನ್ನೂ ಹೆಚ್ಚಿಸುತ್ತದೆ.

ಆದ್ದರಿಂದ ತನಗೂ ಪರಾಶರ - ವ್ಯಾಸರೇ ಮುಂತಾದವರಿಗೂ ಭಾಗವತ ತ್ವವೂ, ಪರಮ ಪುರುಷಾರ್ಥಕ್ಕೆ ಯೋಗ್ಯತೆಯೂ ಸಮಾನವಾದರೂ, ತುಲಸೀ-ಚಂಪಕಾದಿಗಳಿಗೂ, ಗೋಮಯ ಕಸ್ತೂರೀ ಮೊದಲಾದವುಗಳಿಗೂ ಇರುವ ಹಾಗೆ ಆಯಾ ಉಪಾಧಿಗಳ ಸ್ವಭಾವಕ್ಕೆ ತಕ್ಕಂತೆ ಭಗವತ್ಸಂಕಲ್ಪ ವಿಶೇಷದಿಂದ ಉತ್ಕರ್ಷಾಪಕರ್ಷಗಳೂ ಉಂಟೇ ಉಂಟು. ಈ ಕಾರಣಕ್ಕಾಗಿ ತಿರಸ್ಕಾರ ವೆಂಬುದು ಮಾತ್ರ ಕೂಡದು-ಇದಕ್ಕೆ ಉಪನಿಷತ್ತುಗಳಲ್ಲಿ ಕಂಡಿರುವ ಅಸೂಯಾ ಪ್ರಾದುರ್ಭಾವದ ಪ್ರಕರಣವೂ ನಿದರ್ಶನ. ಜನಕಮಹಾರಾಜನು ಋಷಿಗಳ ಬಳಿ ಸಹಸ್ರ ಗೋವುಗಳನ್ನು ತಂದು, ಆ ಋಷಿಗಳ ನಡುವೆ ಸರ್ವಾಧಿಕನು ಯಾವನೋ ಆತ ಅವುಗಳನ್ನು ಒಯ್ಯಬಹುದೆಂದು ಘೋಷಿಸಿದ. ಮಿಕ್ಕ ಋಷಿಗಳೆಲ್ಲರೂ ಸುಮ್ಮನಿರಲು, ಅವರ ನಡುವೆ ಇದ್ದ ಯಾಜ್ಞವಲ್ಕ್ಯರು ಮಾತ್ರ ಆ ಗೋವುಗಳನ್ನು ಒಯ್ಯಲು ಎದ್ದು ಬಂದರು. ಆಗ ಅವರ ಮೇಲಣ ಅಸೂಯೆ

ಯಿಂದ ಅಲ್ಲಿದ್ದ ಮಿಕ್ಕ ಋಷಿಗಳು ಅವರಿಗೆ ಅನೇಕ ಪ್ರಶ್ನೆಗಳನ್ನು ಹಾಕಿ ಅವರ ಮಾಹಾತ್ಮ್ಯವನ್ನು ತಿರಸ್ಕರಿಸಲು ಉದ್ಯುಕ್ತರಾಗಿ ಕಡೆಗೆ ಭಂಗಹೊಂದಿದುದಾಗಿ ಉಪನಿಪತ್ತುಗಳಲ್ಲಿ ಹೇಳಿದೆ. ಜಾತಿ-ಗುಣ-ವೃತ್ತಿ ಮುಂತಾದುವುಗಳ ನಿಮಿತ್ತ ದಿಂದ ಭಾಗವತ ವಿಶೇಷದ ವಿಷಯದಲ್ಲಿ ಶುಶ್ರೂಷಾದಿ ಪ್ರವೃತ್ತಿಗಳ ಬಗ್ಗೆ ಶಾಸ್ತ್ರದಲ್ಲಿ ನಿಯಮ ವಿದ್ದಾಗ್ಯೂ, ಶೇಷತ್ವ ಭಾವನೆಯಲ್ಲಿ ನ್ಯೂನತೆಯನ್ನು ಭಾವಿಸಕೂಡದು. ಅಷ್ಟುಮಾತ್ರದಿಂದಲೂ, ಶೇಷತ್ವಕ್ಕೆ ಉಚಿತವಾದ ಯತ್ಕಿಂಚಿತ್ ಕೈಂಕರ್ಯ ಸಿದ್ಧಿಸುವುದು. ಇಂತಹ ಭಾಗವತರ ವಿಷಯದಲ್ಲಿ ಕೆಲವು ವೇಳೆ ಅಪಚಾರ ಸಂಭವಿಸಿದಲ್ಲಿ ಆಗಲೇ ಅದಕ್ಕೆ ಅವರಲ್ಲಿ ಕ್ಷಮೆಯನ್ನು ಪ್ರಾರ್ಥಿಸಬೇಕು. ಹಾಗಿಲ್ಲದಿದ್ದಲ್ಲಿ ಸ್ವರೂಪಕ್ಕೇ ಹಾನಿ. ಸರ್ವೇಶ್ವರನು ಪ್ರಪನ್ನರ ಪಾಪಗಳನ್ನು ಕಳೆದು ಅವರನ್ನು ತನ್ನ ಸೇವೆಗೆ ಯೋಗ್ಯರನ್ನಾಗಿಸಿ ಕೊಳ್ಳುವ ಬಗೆಗಳನ್ನು ಕೆಳಗಿನ ಶ್ಲೋಕದಲ್ಲಿ ಆಚಾರ್ಯರು ತೋರಿಸಿ ಕೊಟ್ಟಿದ್ದಾರೆ ;—

"ಪ್ರಾರಬ್ಧೇತರ ಪೂರ್ವಪಾಪಮಖಿಲಂ ಪ್ರಾಮಾದಿಕಂಚೋತ್ತರಂ,
ನ್ಯಾಸೇನ ಕ್ಷಪಯನ್ ಅನಭ್ಯುಪಗತ ಪ್ರಾರಬ್ಧ ಖಂಡಂಚನಃ ।
ಧೀಪೂರ್ವೋತ್ತರ ಪಾಪ್ಮನಾಮಜನನಾತ್ ಜಾತೇಽಪಿತನಿಷ್ಕೃತೇಃ,
ಕೌಟಿಲ್ಯೇ ಸತಿ ಶಿಕ್ಷಯಾಪ್ಯನಘಯನ್ ಕ್ರೋಡೀಕರೋತಿ ಪ್ರಭುಃ ॥

—ಇತಿ. ಆದ್ದರಿಂದ ಸಮರ್ಥನೂ ಸುಶೀಲನೂ ಪರಮ ಕಾರುಣಿಕನೂ ಆದ ಭಗವಂತನ ಚರಣಾರವಿಂದಗಳಲ್ಲಿ ಸಾಂಗವಾಗಿ ಮಾಡಿದ ಶರಣಾಗತಿಗೆ ಕೋರಿದ ಕಾಲದಲ್ಲಿಯೇ ಫಲವು ಬಂದೇಬರುವುದೆಂಬುದು ಇಲ್ಲಿಯ ಶಾಸ್ತ್ರಾರ್ಥಸಾರ.

## ೧೯. ಸ್ಥಾನ ವಿಶೇಷಾಧಿಕಾರ

ಹೀಗೆ ಯಾವಜ್ಜೀವವೂ ಸ್ವಯಂಪ್ರಯೋಜನವಾಗಿ ನಿರಪರಾಧ ಕೈಂಕರ್ಯ ಗಳನ್ನು ಮಾಡಿಕೊಂಡು ಭಗವಂತನನ್ನು ಸೇರುವುದರಲ್ಲಿ ತ್ವರೆಯುಳ್ಳ ಪ್ರಪನ್ನ ರಿಗೆ ವಾಸಕ್ಕೆ ಯೋಗ್ಯವಾದ ಸ್ಥಳವಾವುದೆಂಬುದನ್ನು ಈ ಅಧಿಕಾರದಲ್ಲಿ ಅಪ್ಪಣೆ ಕೊಟ್ಟಿದ್ದಾರೆ, ಆಚಾರ್ಯರು.

ಎಲ್ಲಿ, ಭಗವತ್ಪಾದಸೇವೆ ಅರ್ಚನೆ ಮುಂತಾದುವುಗಳಿಗೆ ಅನುಕೂಲ ಸಾಮಗ್ರಿಗಳಿವೆಯೋ, ಎಲ್ಲಿ, ದೇವತಾಂತರ–ಪ್ರಯೋಜನಾಂತರಗಳ ಸಂಬಂಧ

ಗಂಧವೂ ಇಲ್ಲದ ಪರಮೈಕಾಂತಿ ಯಾವನಾದರೂ ಲಭಿಸುತ್ತಾನೆಯೋ, ವೈಕುಂಠ ಸದೃಶವಾದ ಆ ಸ್ಥಳವೇ ಪ್ರಪನ್ನರಿಗೆ ವಾಸಕ್ಕೆ ಯೋಗ್ಯವಾದದು. "ವಿಗೃಹೀತೇಂದ್ರಿಯ ಗ್ರಾಮೋ ಯತ್ರ ಯತ್ರ ವಸೇನ್ನರಃ । ತತ್ರ ತತ್ರ ಕುರುಕ್ಷೇತ್ರಂ ನೈಮಿಶಂ ಪುಷ್ಕರಂ ತಥಾ ॥"—ಎಂದಿದೆ.

ಋಷಿಗಳು ಪ್ರಶಸ್ತವೆಂದು ಹೇಳಿರುವ ಗಂಗಾ, ಪ್ರಯಾಗ, ಪುಷ್ಕರಾದಿ ಅನೇಕ ಕ್ಷೇತ್ರಗಳು ಯುಗ ಸ್ವಭಾವದಿಂದ ಈಗ ವಾಸಕ್ಕೆ ಅಯೋಗ್ಯವಾಗಿರುವುದರಿಂದ ಶಾಸ್ತ್ರವಶ್ಯತಾ ಪ್ರಯುಕ್ತವಾಗಿ ಚಾತುರ್ವರ್ಣ್ಯ ಧರ್ಮಾನುಷ್ಠಾನಕ್ಕೆ ಯೋಗ್ಯವೂ, ಪರಮೈಕಾನ್ತಿತ್ವ ಪ್ರಯುಕ್ತವಾಗಿ "ಕರುನ್ದಿಡ ಮುಕಿಲ್ ವಣ್ಣನ್ನೈ ಕ್ಕಡೈಕ್ಕೊಣ್ಡು ಕೈ ತೊಟ್ಟುಮ್ ಪತ್ತರ್‌ಕಳಿರುನ್ದ ವೂರಿಲಿರುಕ್ಕು ಮಾನಿಡ ರೆತ್ತವಙ್ಗಳ್ ಶೆಯ್‌ತಾರ್‌ಕೊಲೋ"—ಅಂದರೆ. "ಸಂಸಾರತಾಪ ಹರನಾದ ಶ್ರೀ ಕೃಷ್ಣನನ್ನು ರಕ್ಷಕನನ್ನಾಗಿ ಶರಣುಹೊಂದಿ ಅವನಿಗೆ ಪೂಜಾವಾದ್ಯರ್ಚನ ಮಾಡುವ ಭಕ್ತರುಗಳಿರುವ ಊರಲ್ಲಿರುವ ಮನುಷ್ಯರು ಜನ್ಮಾಂತರದಲ್ಲಿ ಯಾವ ತಪಸ್ಸನ್ನು ಮಾಡಿದ್ದರೋ"—ಎಂಬಂತೆ ಭಾಗವತೋತ್ತರವೂ ಆದ ದೇಶವೇ ಈಗ ಪ್ರಪನ್ನನಿಗೆ ವಾಸಕ್ಕೆ ಯೋಗ್ಯವಾದುದು.

"ಕಲೌ ಜಗತ್ಪತಿಂ ವಿಷ್ಣುಂ ಸರ್ವ ಸ್ರಷ್ಟಾರ ಮೀಶ್ವರಂ ।
ನಾರ್ಚಯಿಷ್ಯನ್ತಿಮೈತ್ರೇಯ ಪಾಷಂಡೋಪಹತಾಜನಾಃ"

—ಇತ್ಯಾದಿ ಶ್ರೀ ಪರಾಶರಾದಿ ಋಷಿಗಳ ವಾಕ್ಯಗಳಿಂದ ಕಲಿಯುಗದಲ್ಲಿ ಭಾಗವತರೇ ಇಲ್ಲವೆಂದು ತೋರುವುದರಿಂದ ಭಾಗವತೋತ್ತರ ದೇಶವೇ ವಾಸಕ್ಕೆ ತಕ್ಕ ಸ್ಥಳವೆಂಬುದು ಹೇಗೆ? —ಎಂದಲ್ಲಿ, ಅದೇ ಋಷಿಗಳೇ—

"ಕಲೌ ಖಲುಭವಿಷ್ಯನ್ತಿನಾರಾಯಣ ಪರಾಯಣಾಃ ।
ಕ್ವಚಿತ್ ಕ್ವಚಿತ್ ಮಹಾಭಾಗಾಃದ್ರಾವಿಡೇಷುಚ ಭೂರಿಶಃ ॥
ತಾಮ್ರಪರ್ಣೀ ನದೀಯತ್ರ ಕೃತಮಾಲಾ ಪಯಸ್ವಿನೀ ।
ಕಾವೇರೀ ಚ ಮಹಾಭಾಗಾ ಪ್ರತೀಚೀಚ ಮಹಾನದೀ ॥
ಯೇ ಪಿಬನ್ತಿ ಜಲಂ ತಾಸಾಂ ಮನುಜಾ ಮನುಜೇಶ್ವರ ।
ಪ್ರಾಯೋ ಭಕ್ತಾ ಭಗವತಿ ವಾಸುದೇವೇಮಲಾಶಯಾಃ ॥"

—ಇತ್ಯಾದಿಯಾಗಿ, ಈ ದೇಶದಲ್ಲಿ ಅಲ್ಲಲ್ಲಿ ಕೆಲವು ಮಹಾಭಾಗವತರಿರುವರು; ದ್ರಾವಿಡ ದೇಶದಲ್ಲಿಯಾದರೋ ಬಹುವಾಗಿ ಇರುವರು, — ಎಂದು ದಿವ್ಯ

ಸೂರಿಗಳ ಆವಿರ್ಭಾವವಾಗುವುದನ್ನು ಉದ್ದೇಶಿಸಿ ಹೇಳಿದ್ದಾರೆ. ಇದರಂತೆಯೇ ದಿವ್ಯಸೂರಿಗಳೊಳಗೆ ಶ್ರೇಷ್ಠರಾದ ಶ್ರೀ ಶಠಕೋಪಮಹಾಮುನಿಯ ಆವಿರ್ಭಾವ ಸ್ಥಳ ತಾಮ್ರಪರ್ಣೀ ತೀರ, ಶ್ರೀ ವಿಷ್ಣುಚಿತ್ತರದು-ಕೃತಮಾಲಾ. (ವೈಕೈಯಾರು), ಶ್ರೀ ಭಕ್ತಿ-ಸಾರಾದಿಗಳದು – ಪಯಸ್ವಿನೀ (ಕ್ಷೀರನದೀ), ಭಕ್ತಾಂಘ್ರಿರೇಣು ಪ್ರಭೃತಿಗಳದು ಕಾವೇರೀ, ಪ್ರತ್ಯಙ್ಮುಖಿಯಾದ ಮಹಾನದೀ, ಕುಲಶೇಖಪ್ರಭೃತಿಗಳ ಅವತಾರ ಸ್ಥಳ. ಈ ಕಲಿಯುಗದಲ್ಲಿ ಇಂತಹ ಭಾಗವತ ಪರಿಗೃಹೀತವಾದ ಸ್ಥಳಗಳೇ ಮುಮುಕ್ಷುಗಳಿಗೆ ಪರಿಗ್ರಾಹ್ಯಗಳು.

ಈ ಋಷಿಪ್ರಶಂಸಿತ ಪ್ರದೇಶಗಳಲ್ಲದೆ, ಕಲಿಕಾಲದಲ್ಲಿ ಚಾತುರ್ವರ್ಣ್ಯ ಧರ್ಮಕ್ಕೆ ಯೋಗ್ಯವಾದ ಭಾಗವತ ಸಮೃದ್ಧಿಯುಳ್ಳ ದೇಶವೇ ವಾಸಸ್ಥಳವೆಂದು ನಿರ್ಣಯಿಸಲು ವಿಶೇಷ ಪ್ರಮಾಣವುಂಟೆ? – ಎಂದಲ್ಲಿ, ಶ್ರೀ ತಿರುನಾರಾಯಣೀಯದಲ್ಲಿ "ಏಕಪಾದಸ್ಥಿತೇ ಧರ್ಮೇ ಯತ್ರ ಕ್ವಚನ ಗಾಮಿನಿ। ಕಥಂ ವಸ್ತವ್ಯ ಮಸ್ಮಾಭಿಃ ಭಗವನ್! ತದ್ವದಸ್ವನಃ॥" ಎಂದು ದೇವತೆಗಳು ಅರಿಕೆಮಾಡಿಕೊಳ್ಳಲು :

"ಗುರವೋ ಯತ್ರ ಪೂಜ್ಯನ್ತೇ ಸಾಧುವೃತ್ತಾಶ್ಶಮಾನ್ವಿತಾಃ ।
ವಸ್ತವ್ಯಂ ತತ್ರಯುಷ್ಮಾಭಿಃ ಯತ್ರ ಧರ್ಮೋನಹೀಯತೇ ॥
ಯತ್ರವೇದಾಶ್ಚ ಯಜ್ಞಾಶ್ಚ ತಪಸ್ಸತ್ಯಂ ದಮಸ್ತಥಾ ।
ಹಿಂಸಾ ಚ ಧರ್ಮ ಸಂಯುಕ್ತಾ ಪಚರೇಯುಸ್ಸುರೋತ್ತಮಾಃ ॥
ಸವೈದೇಶೋ ಹಿ ವ ಸ್ಸೇವ್ಯೋ ಮಾಪೋಽಧರ್ಮಃ ಪದಾ ಸ್ಪೃಶೇತ್ ॥"

– ಎಂದು ಭಗವಂತ ಅಪ್ಪಣೆ ಕೊಡಿಸಿದ್ದಾನೆ. ಉಕ್ತಗುಣಗಳುಳ್ಳ ಇವುಗಳೊಳಗೂ ತನಗೆ ಕೈಂಕರ್ಯಕ್ಕೆ ಸೌಕರ್ಯವುಳ್ಳೆಡೆಗಳಲ್ಲಿ ನಿರಂತರ ವಾಸಮಾಡುವುದು ಉಚಿತ. ಇದನ್ನು "ಯಾವಚ್ಛರೀರಪಾತಂ ಅತ್ರೈವ ಶ್ರೀರಂಗೇ ಸುಖಮಾಸ್ವ" – ಎಂದು ಸತ್ಯೋತ್ತರಗಳಾದ ಭಗವತ್ ಕ್ಷೇತ್ರಗಳಿಗೆ ಪ್ರದರ್ಶನಾರ್ಥವಾಗಿ ಭಗವಂತ ಅಪ್ಪಣೆ ಕೊಟ್ಟಿದ್ದಾನೆ. ಆದ್ದರಿಂದ ಭಾಗವತೋತ್ತರವೂ ತಾಮ್ರಪರ್ಣೀ–ಕಾವೇರಿ–ಕೃತಮಾಲ–ಪಯಸ್ವಿನೀ ಮುಂತಾದ ಪುಣ್ಯತೀರ್ಥೋತ್ತರಗಳೂ ಅಥವಾ ಭಗವದ್ಭಾಗವತಾಭಿಮಾನಕ್ಕೆ ವಿಷಯಗಳಾದ ಶ್ರೀರಂಗ-ಹಸ್ತಿಗಿರಿ - ವೆಂಕಟಗಿರಿ - ಯದುಗಿರ್ಯಾದಿ ಸತ್ಯೋತ್ತರ ಕ್ಷೇತ್ರಗಳೂ ಮುಮುಕ್ಷುವಿಗೆ ವಾಸಕ್ಕೆ ಪರಿಗ್ರಾಹ್ಯಗಳು.

ಭಗವಚ್ಛಾಸ್ತ್ರಗಳಲ್ಲಿಯೂ, ಸ್ವಯಂವ್ಯಕ್ತ-ಸೈದ್ಧ-ವೈಷ್ಣವಗಳೆಂಬ ಕ್ಷೇತ್ರ ವಿಶೇಷಗಳನ್ನೂ ಅವುಗಳಲ್ಲಿರು ಉತ್ಕರ್ಷಾಪಕರ್ಷಗಳನ್ನೂ ಪ್ರತ್ಯೇಕವಾಗಿ ಹೇಳಿ.

"ದುಷ್ಟೇಂದ್ರಿಯವಶಾಚ್ಚಿತ್ತಂ ನೃಣಾಂ ಯತ್ಕಲ್ಮಷೈರ್ವೃತಂ । ತದನ್ತ ಕಾಲೇ ಸಂಶುದ್ಧಿಂ ಯಾತಿನಾರಾಯಣಾಲಯೇ ॥"—ಎಂದು ಆಯಾ ಕ್ಷೇತ್ರಗಳ ಎಲ್ಲೆಗಳಲ್ಲಿ ವಾಸಿಸುವವನಿಗೆ ದೇಹವನ್ನು ಬಿಡುವ ಕಾಲದಲ್ಲಿ ಬರುವ ವಿಶೇಷವೂ ಹೇಳಲ್ಪಟ್ಟಿದೆ.

ಹೀಗಾದಲ್ಲಿ, ಭಗವದ್ದ್ವೇಷಿಯಾಗಿ.ಭಗವದ್ದ್ರೋಹಾದ್ಯಪಚಾರಗಳನ್ನೂ ಮಾಡಿಕೊಂಡು ಆ ಕ್ಷೇತ್ರದಲ್ಲಿ ವಾಸಮಾಡುವವನಿಗೂ ಈ ಅತಿಶಯ ಉಂಟಾಗು ವುದೋ ?—ಎಂದಲ್ಲಿ, "ಯತ್ಕಿಂಚಿದಪಿ ಕುರ್ವಾಣೋ ವಿಷ್ಣೋರಾಯತನೇ ವಸೇತ್ । ನಕಿಂಚಿದಪಿ ಕುರ್ವಾಣೋ ವಿಷ್ಣೋ ರಾಯತನೇ ವಸೇತ್ ॥"—ಎಂದಿರುವಂತೆಯೇ-ವಿಹಿತವಾದ ಕಾಯಿಕ-ವಾಚಿಕ-ಮಾನಸಿಕ ಕೈಂಕರ್ಯಗಳಲ್ಲಿ ಶಕ್ಯವಾದ ಯಾವುದನ್ನಾದರೂ ಮಾಡಿಕೊಂಡಿರಬೇಕು. ಇಲ್ಲಿ ಮಾಡಿದ ಸ್ವಲ್ಪ ಪುಣ್ಯವೂ ನೂರ್ಮಡಿಯಾಗಿ ವೃದ್ಧಿಯಾಗುತ್ತೆ. ಏನನ್ನೂ ಮಾಡದೆ ಇದ್ದಾಗ್ಯೂ ಅಲ್ಲಿ ವಾಸಿಸಿದಲ್ಲಿ ಅವನಿಗೂ ಕ್ರಮೇಣ ಕೈಂಕರ್ಯ ಮಾಡುವುದರಲ್ಲಿ ರುಚಿ ಯುಂಟಾಗುತ್ತೆ. ಅಥವಾ ಅಕೃತ್ಯವನ್ನು ಮಾಡದೆಯಾದರೂ ವಿಷ್ಣುಕ್ಷೇತ್ರ ದಲ್ಲಿ ವಾಸಿಸಬೇಕು-ಏಕಂದರೆ, ಅಲ್ಲಿ ಮಾಡುವ ಅಲ್ಪ ಅಕೃತ್ಯವೂ ನೂರ್ಮಡಿ ಯಾಗುತ್ತದೆ ಎಂದಿದ್ದಾರೆ.

ಭಗವತ್ ಕ್ಷೇತ್ರವಾಸವು ಲಭಿಸದಿದ್ದಾಗ, ಯಾವುದಾದರೊಂದೆಡೆಯಲ್ಲಿ ವಾಸಿಸಿದಾಗ್ಯೂ, "ನಿಗ್ರಹೀತೇಂದ್ರಿಯ ಗ್ರಾಮೋಯತ್ರಯತ್ರ ವಸೇನ್ನರಃ । ತತ್ರತತ್ರ ಕುರುಕ್ಷೇತ್ರಂ ನೈಮಿಶಂ ಪುಷ್ಕರಂ ಕಥಾ ॥"—ಎಂಬಂತೆ ಇವನ ವಾಸ ದಿಂದ ಆ ದೇಶವೂ ಪ್ರಶಸ್ತವಾಗುವುದೆಂದಿದ್ದಾರೆ-ಇದು ಆಪದ್ವಿಷಯ. ಇದಕ್ಕೆ ಶಾಂಡಿಲೀ ವೃತ್ತಾಂತವೊಂದು ಉದಾಹರಣೆ:—ಶಾಂಡಿಲೀ ಎಂಬ ಮಹಾ ಭಾಗವತೆಯು ಸಮುದ್ರ ದ್ವೀಪವೊಂದರಲ್ಲಿ ವಾಸಿಸುತ್ತಿದ್ದುದನ್ನು ಕಂಡು ಶ್ರೀ ವಿಷ್ಣುವಾಹನನಾದ ಗರುಡನು "ಈ ಹೀನ ದೇಶನದಲ್ಲಿ ವಾಸಿಸಬೇಕೋ ?"-ಎಂದು ಮನಸ್ಸಿನಲ್ಲಿ ಎಣಿಸಿದಷ್ಟಕ್ಕೇ ಅವನ ರೆಕ್ಕೆಗಳು ಸುಟ್ಟು ಬಿದ್ದುಹೋದು ದಾಗಿ ಕದೆಯಿದೆ.

ಆದ್ದರಿಂದ, "ಜ್ಞಾನಸಮಕಾಲಮುಕ್ತಾ ಕೈವಲ್ಯಂ ಯಾತಿ ಗತ ಶೋಕಃ । ತೀರ್ಥೇಶ್ವಪಚಗೃಹೇ ವಾ ನಷ್ಟಸ್ಮೃತಿರಪಿ ಪರಿತ್ಯಜನ್ ದೇಹಂ ॥" —ಎಂದು ಶರೀರ ಪಾತಕ್ಕೆ ಒಂದು ದೇಶ ವಿಶೇಷ ನಿಯಮವಿಲ್ಲವೆಂಬುದೂ, ಹೇಗೂ ಪ್ರಪನ್ನನಿಗೆ ಫಲದಲ್ಲಿ ಸಂಶಯವಿಲ್ಲವೆನ್ನುವುದಕ್ಕಾಗಿಯೇ ಹೊರತು, ಅವಕಾಶವಿದ್ದಲ್ಲಿ ದಿವ್ಯ ದೇಶವನ್ನು ಪರಿಗ್ರಹಿಸಬಾರದೆಂಬುದಕ್ಕಾಗಿಯಲ್ಲ.

ಕಡೆಯದಾಗಿ ಭಗವಂತನಲ್ಲಿ ನ್ಯಸ್ತಭರರಾದವರು ಎಲ್ಲಿ ವಾಸಿಸಿದರೂ ಅದೇ ಸರ್ವಾತಿಶಾಯಿ ವಾಸಸ್ಥಳವೆಂದು—

"ತೇನಾರ್ ಕಮಲತ್ತಿರುಮಕಳ್‌ನಾರ್ತ ತಿಕನ್ದುಲಿಯ್ಯುಮ್,
ವಾನಾಡುಕನ್ದವರ್ ವೈಯತ್ತಿರುಪ್ಪಿಡಮ್, ವ ನ್ದ್ರಮ
ಕ್ಕಾನಾರಿಮಯಮುಂ ಗಂಗೈಯುಮ್ ಕಾವಿರಿಯುಮ್ ಕಡಲುಮ್,
ನಾನಾ ನಕರಮುಮ್ ನಾಕಮುಮ್ ಕೂಡಿಯ ನನ್ನಿಲಮೇ ॥"

ಎಂಬ ಪಾಶುರದಿಂದಲೂ ಅಪ್ಪಣೆ ಕೊಟ್ಟಿದ್ದಾರೆ.

ಪುಣ್ಯಕ್ಷೇತ್ರಗಳೆಂದು ಪ್ರಸಿದ್ಧಗಳಾದ ಕಾಶಿ ಮೊದಲಾದುವುಗಳೂ ಕೂಡ, —"ಯತ್ರ ಯತ್ರ ಹಿ ನೀತಿಸ್ಸ್ಯಾತ್ ವೈಷ್ಣವೀ ವೀತಕಲ್ಮಷಾ, ತತ್ರ ತತ್ರ ವಸೇ ನ್ನಿತ್ಯಂ ನಾ ನ್ಯತ್ರೇತಿ ಮತಿರ್ಮಮ ॥—ಇತ್ಯಾದಿ ಪ್ರಮಾಣಗಳಿಂದ ಭಗತ್ಕಥಾ ಮೃತರಸಾಸ್ವಾದ ಶೀಲರಾದ ಭಾಗವತರಿಗೆ ರುಚಿಸದಿದ್ದಲ್ಲಿ ವಾಸಕ್ಕೆ ಯೋಗ್ಯ ಗಳಾಗವು. ಎಲ್ಲಾ ಸ್ಥಳಗಳಿಗೂ ಶ್ರೀ ಭಾಗವತರ ಪರಿಗ್ರಹದಿಂದಲೇ ಆಧಿಕ್ಯ ವೆಂದು ಭಾವ.

## ೨೦. ನಿರ್ಯಾಣಾಧಿಕಾರ :

ಹೀಗೆ ಪ್ರಪನ್ನನಿಗೆ ನಿರಪರಾಧ ಕೈಂಕರ್ಯರೂಪವಾದ ಉತ್ತರ ಕೃತ್ಯವನ್ನೂ ಅದಕ್ಕೆ ತಕ್ಕ ವಾಸಸ್ಥಾನವನ್ನೂ ಪ್ರದರ್ಶಿಸಿಯಾಯಿತು. ಅನಂತರ, ಅವನ ನಿರ್ಯಾಣ (ಈ ದೇಹದಿಂದ ಹೊರ ಹೊರಟು ಬರುವ) ಪ್ರಕಾರವನ್ನು,

"ಮನಸಿ ಕರಣ ಗ್ರಾಮಂ ಪ್ರಾಣೇ ಮನಃ ಪುರಪೇಚ ತಂ
ಝಟಿತಿ ಘಟಯನ್ ಭೂತೇಷ್ವೇನಂ ಪರೇಚ ತಮಾತ್ಮನಿ ।
ಸ್ವವಿದ ವಿದುಷೋಃ ಇತ್ಥಂ ಸಾಧಾರಣೇ ಸರಣೇ ಮುಖ್ಯೈಃ
ನಯತಿ ಪರತೋ ನಾಡೀ ಭೇಧ್ಯೈಃ ಯಥೋಚಿತಮೀಶ್ವರಃ॥"-

—ಎಂಬ ಶ್ಲೋಕದಿಂದ ಮೊದಲು ಸಂಗ್ರಹಿಸಿದ್ದಾರೆ.

ಅಂದರೆ, ಪ್ರಪನ್ನನಿಗೆ ಅವನ ಶರೀರ ಬೀಳುವಾಗ ಭಗವಂತನು ಅವನ ಸುಕೃತ-ದುಷ್ಕೃತಗಳನ್ನು ಕ್ರಮವಾಗಿ ಅವನ ಅನುಕೂಲ-ಪ್ರತಿಕೂಲ ವರ್ಗಗಳಲ್ಲಿ ವಿಭಜಿಸಿ, ಪ್ರಶಸ್ತ-ಅಪ್ರಶಸ್ತವೆಂಬ ಕಾಲ ನಿಯಮವಿಲ್ಲದೆ ತಾನು ಸಂಕಲ್ಪಿಸಿದ ಸಮಯದಲ್ಲಿ ಯಾವುದಾದರೂ ಒಂದು ನಿಮಿತ್ತದ ಮೂಲಕ ಶರೀರವನ್ನು ಬಿಡಿಸುವವನಾಗಿ, "ಅಸ್ಯ ಸೋಮ್ಯ ಪುರುಷಸ್ಯ ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ, ಪ್ರಾಣಸ್ತೇಜಸಿ, ತೇಜಃ ಪರಸ್ಯಾಂ ದೇವತಾಯಾಂ-" –ಇತ್ಯಾದಿ ಶ್ರುತ್ಯುಕ್ತ ಪ್ರಕಾರದಿಂದ ಅವನ ಇಂದ್ರಿಯ ವರ್ಗವನ್ನು ಮನಸ್ಸಿನಲ್ಲಿಯೂ ಆ ಮನಸ್ಸನ್ನು ಪ್ರಾಣದಲ್ಲಿಯೂ, ಆ ಪ್ರಾಣವನ್ನು ಜೀವನಲ್ಲಿಯೂ, ಆ ಜೀವವನ್ನು ಭೂತ ಸೂಕ್ಷ್ಮಗಳಲ್ಲಿಯೂ, ಹೀಗೆ ಭೂತಗಳಿಂದ ಕೂಡಿದ ಜೀವನನ್ನು ತನ್ನಲ್ಲಿಯೂ ಬೇಗನೆ ಕೂಡಿಸುತ್ತಾನೆ. ಇಲ್ಲಿಯವರಿಗಿನ ನಿರ್ಯಾಣ ಕ್ರಮವು ಜ್ಞಾನಿಗಳಿಗೂ ಅಜ್ಞಾನಿಗಳಿಗೂ ಸಮವಾದದ್ದು. ಹೀಗೆ ಜೀವನನ್ನು ಪರಮಾತ್ಮನಾದ ತನ್ನೊಡನೆ ಸೇರಿಸಿಟ್ಟುಕೊಂಡು ಅವನ ಶ್ರಮವನ್ನು ನೀಗಿಸಿ, ಮುಂದೆ – "ಶತಂಚೈಕಾಚ ಹೃದಯಸ್ಯ ನಾಡ್ಯಃ ತಾಸಾಂ ಮೂರ್ಧಾನಮಭಿ ನಿಸ್ಸೃತೈಕಾ ॥ ತಯೋರ್ಧ್ವ ಮಾಯನ್ನಮೃತತ್ವಮೇತಿ ವಿಷ್ವಜ ನ್ಯಾ ಉತ್ಕ್ರಮಣೇ ಭವನ್ತಿ॥"–ಎಂದಿರುವಂತೆ, ಆತ್ಮಾಪಹಾರಿಗಳು ಹೋಗತಕ್ಕ ಸ್ವರ್ಗ-ನರಕಾದಿ ಮಾರ್ಗಾಂತರಗಳಿಗೆ ದ್ವಾರಗಳಾದ ನಾಡೀ ವಿಶೇಷಗಳಲ್ಲಿ ಪ್ರವೇಶಿಸುವುದನ್ನು ಈ ಪ್ರಪನ್ನನಿಗೆ ತಪ್ಪಿಸಿ ಅರ್ಚಿರಾದಿ ಮಾರ್ಗಕ್ಕೆ ದ್ವಾರವಾದ ನೂರೊಂದನೇ ನಾಡಿಯಾದ ಬ್ರಹ್ಮನಾಡಿಯೆಂಬುದರಲ್ಲಿ ಪ್ರವೇಶಗೊಳಿಸಿ ಅವನನ್ನು ಸೂರ್ಯ ಕಿರಣಾವಲಂಬಿಯನ್ನಾಗಿ ಮಾಡಿ, ಆತಿವಾಹಿಕರ ಮೂಲಕ ತನ್ನ ಪರಮಪದಕ್ಕೆ ಭಗವಂತನು ಬರಮಾಡಿಕೊಳ್ಳುತ್ತಾನೆ. ಪ್ರಪನ್ನನಿಗೆ ಸ್ವಯತ್ನ ಸಾಧ್ಯವಾದ ಅಂತಿಮ ಸ್ಮೃತ್ಯಾದಿಗಳಲ್ಲಿ ನಿರ್ಬಂಧವಿಲ್ಲ. ಅಂತಿಮ ಸ್ಮೃತಿಯೆಂಬುದು—ವಾಗಾದಿಗಳು ನಿಂತುಹೋದ ಮೇಲೆ ಮನಸ್ಸು ನಿಂತುಹೋಗುವುದಕ್ಕೆ ಮುಂಚೆ ಬರುವ ಒಂದು ಸ್ಮೃತಿ. ಇದು ಪಕ್ಕದಲ್ಲಿರುವವರಿಗೆ ತಿಳಿಯತಕ್ಕದ್ದಲ್ಲ. ಮುಕ್ತರಾಗತಕ್ಕವರಿಗೂ ಮುಕ್ತಿಕೊಡುವ ಸರ್ವೇಶ್ವರನಿಗೂ ಮಾತ್ರವೇ ತಿಳಿಯತಕ್ಕದ್ದು ಈ ಅಂತಿಮ ಸ್ಮೃತಿಯ ನಂತರವೇ ಪ್ರಪನ್ನರಿಗೂ ಇತರರಿಗೂ ಸಾಧಾರಣವಾದ ಹಾರ್ದ

ನುಂದ ಪರಮಾತ್ಮನಲ್ಲಿಯು ವಿಶ್ರಮವು ಸುಷುಪ್ತ್ಯವಸ್ಥೆಗೆ ಸದೃಶವಾದದ್ದು. ಈ ಅವಸ್ಥೆಯ ನಂತರ ಪ್ರಪನ್ನನು ಪ್ರಾಜ್ಞನಾದ ಪರಮಾತ್ಮನಿಂದ ಪ್ರಬೋಧಿತನಾಗಿ ಮೇಲೆ ಹೇಳಿದ ಬ್ರಹ್ಮನಾಡಿಯಲ್ಲಿ ಪ್ರವೇಶಿಸಿ, ಮುಂದೆ ಆತಿವಾಹಿಕರಿಂದ ಅರ್ಚಿರಾದಿ ಮಾರ್ಗದಲ್ಲಿ ಒಯ್ಯಲ್ಪಟ್ಟು ಭಗವಂತನನ್ನು ಸೇರಿ ಕಾಲತತ್ತ್ವವಿರುವವರೆಗೂ ಪರಿಪೂರ್ಣ ಬ್ರಹ್ಮಾನಂದದಲ್ಲಿ ಮುಳುಗಿ ಆನಂದಿಸುತ್ತಾನೆ. ಮತ್ತೆ ಸಂಸಾರವೆಂಬುದು ಇವನಿಗೆ ಬರುವುದಿಲ್ಲ.

## ೨೧. ಗತಿಚಿಂತನಾಧಿಕಾರಃ

ಹೀಗೆ ವತ್ಸಲನೂ ಹಾರ್ದನೂ ಆದ ಪರಮಾತ್ಮನು ಸ್ಥೂಲಶರೀರದಿಂದ ಬ್ರಹ್ಮನಾಡಿಯೆಂಬ ಪ್ರಧಾನ ದ್ವಾರದ ಮೂಲಕ ಈ ಮುಮುಕ್ಷುವನ್ನು ಹೊರಡಿಸಿ, ಅಗ್ನಿ, ದಿನ, ಶುಕ್ಲಪಕ್ಷ, ಉತ್ತರಾಯಣ, ಸಂವತ್ಸರ, ವಾಯು, ಆದಿತ್ಯ, ಚಂದ್ರ. ಅಮಾನವನೆಂಬ ವೈದ್ಯುತ ಪುರುಷ, ಇವನಿಗೆ ಸಹಕಾರಿಗಳಾದ ವರುಣ, ಇಂದ್ರ ಪ್ರಜಾಪತಿಗಳೆಂಬ ಆತಿವಾಹಿಕರಿಂದ, "ಅಹಂ ಸ್ಮರಾಮಿ ಮದ್ಭಕ್ತಂ ನಯಾಮಿ ಪರಮಾಂಗತಿಂ ॥"—ಎಂದು ತಾನೇ ಹೇಳಿರುವಂತೆ ಇವನನ್ನು ದೇವಯಾನ ಮಾರ್ಗದಲ್ಲಿ ನಡೆಯಿಸಿ ಆಯಾ ಲೋಕಪಾಲರಿಂದ ಸತ್ಕಾರವನ್ನೂ ನಡೆಯಿಸಿ. ಚಿರಕಾಲದಿಂದ ಕಾಂಕ್ಷಿತವಾದ ದೇಶ ವಿಶೇಷಕ್ಕೆ ಬರಮಾಡುತ್ತಾನೆ. ಕರ್ಮಫಲವಿಶೇಷದ ಭೋಗಕ್ಕಾಗಿಯಲ್ಲದೆ ಇದುವರೆಗಿನ ಸಂಚರಣಕ್ಕಾಗಿ ಕೇವಲ ವಿದ್ಯೆಯಿಂದ ಅನುವರ್ತಿಸಿದ್ದಂಥ ಸೂಕ್ಷ್ಮ ಶರೀರವನ್ನು ಇಲ್ಲಿ ನಿವೃತ್ತಿಗೊಳಿಸಿ, ವಿರಜಾನದಿಯನ್ನು ದಾಟಿಸಿ, ದಿವ್ಯ ಶರೀರವನ್ನು ಕೊಟ್ಟು 'ಐರಂಮದಂ'—ಎಂಬ ಸರೋವಿಶೇಷ ಮತ್ತು ಸೋಮ ಸವನವೆಂಬ ಅಶ್ವತ್ಥಗಳಿಗೆ ಬರಮಾಡಿ, ಮಾಲೆ, ಅಂಜನ, ಚೂರ್ಣ, ವಸ್ತ್ರ, ಭೂಷಣಗಳಸಹಿತ ಎದುರ್ಗೊಂಡು ಬರುವ ಐನೂರು ಮಂದಿ ಅಪ್ಸರಸಿಯರಿಂದ ಇವನಿಗೆ ಬ್ರಹ್ಮಾಲಂಕಾರವನ್ನು ಮಾಡಿಸುತ್ತಾನೆ. ಅನಂತರ ಇವನಲ್ಲಿ ಬ್ರಹ್ಮಗಂಧ, ಬ್ರಹ್ಮರಸ, ಬ್ರಹ್ಮತೇಜಸ್ಸುಗಳನ್ನು ಪ್ರವೇಶಗೊಳಿಸುತ್ತಾನೆ. ಅಲ್ಲಿ "ಕುಲದಾಸರಾದ ಪರಮಭಾಗವತರು ಬಂದಿದ್ದಾರೆ" —ಎಂದು ಇವನನ್ನು ಅತ್ಯಾದರದಿಂದ ಕಿರೀಟಾಲಂಕೃತರಾದ ನಿತ್ಯಸೂರಿಗಳು ಕ್ರಮವಾಗಿ ಎದುರುಗೊಳ್ಳಲು ಬರುತ್ತಾರೆ. ಅವ

ರೊಂದಿಗೆ ತೋರಣಗಳಿಂದಲೂ ಅತ್ಯುನ್ನತವೂ ಅತಿ ದೀರ್ಘವೂ ಆದ ಪ್ರಾಕಾರಗಳಿಂದಲೂ ಅಲಂಕೃತವಾದ ಗೋಪುರ ದ್ವಾರಕ್ಕೆ ಈ ಮುಮುಕ್ಷುವು ಬರುತ್ತಾನೆ-ಅಲ್ಲಿ ಆ ದ್ವಾರದ ಪಾಲಕರಾದ ಇಂದ್ರ ಪ್ರಜಾಪತಿಗಳೆಂಬವರೊಡನೆ ಸಂಗಮವಾಗುತ್ತದೆ. ಪೂರ್ಣಕುಂಭಾದ್ಯಪ್ರಾಕೃತ ರಾಜೋಪಚಾರಗಳು ನಡೆಯುತ್ತವೆ. ಅಲ್ಲಿಂದ ಆನಂದಮಯ ಮಣಿಮಂಟಪವೆಂಬ ದಿವ್ಯಾಸ್ಥಾನದಲ್ಲಿ ಪ್ರವೇಶಗೊಳಿಸಿ, ಆತ್ಯಂತಿಕ ದುಃಖ ನಿವೃತ್ತಿಗಾಗಿ ಇವನ ಮನೋರಥವಂತೆ ನಿರತಿಶಯ ಭೋಗ್ಯವಾದ ತನ್ನನ್ನು ತಾನೇ ಪ್ರದರ್ಶಿಸಿ ಅಪಹತ ಪಾಪ್ಮತ್ವಾದಿ ಗುಣಾಷ್ಟಕಗಳನ್ನು ಇವನಿಗೆ ಆವಿರ್ಭಾವಗೊಳಿಸಿ ಭಗವಂತನು ಇವನನ್ನು ತನ್ನ ಪಾದಾರವಿಂದಗಳ ಬಳಿ ಇರಿಸಿಕೊಳ್ಳುತ್ತಾನೆ. ಅನಂತರ, ಸಮಾನಭೋಗತ್ವಲಕ್ಷಣವಾದ ಸಾಯುಜ್ಯವನ್ನು ಕೊಟ್ಟು ಕಾಲತಃ ಮತ್ತು ಸ್ವರೂಪತಃ ಅಳವಿಲ್ಲದ ಆನಂದವುಳ್ಳ ನಿತ್ಯಸೂರಿಗಳೊಂದಿಗೆ ಸೇರಿಸುತ್ತಾನೆ.

ಹೀಗೆ ಸಮಸ್ತ ಪ್ರತಿಬಂಧಕನಿವೃತ್ತಿಪೂರ್ವಕವೂ ಸ್ವಸ್ವರೂಪಾವಿ-ರ್ಭಾವಪೂರ್ವಕವೂ, ದೇಶಕಾಲಾವಸ್ಥಾ ಸಂಕೋಚಗಳಿಲ್ಲದ್ದೂ ತನ್ನ ಮನೋರಥಾನು ಗುಣವೂ, ಇವನ ಮನೋರಥಕ್ಕೆ ವಿಷಯೀಭೂತವೂ ಯಾವದಾತ್ಮಭಾವಿಯೂ ಆದ ಸಕಲಕೈಂಕರ್ಯವರ್ಗವನ್ನೂ ಅನುಗ್ರಹಿಸಿ ಸಮಾನ ವಯಸ್ಕರೆಂಬಂತಿರುವ ನಿತ್ಯ ಸೂರಿಗಳೊಡನೆಯೂ, ಈಗತಾನೆ ಬಂದ ಇವನೊಡನೆಯೂ, ಏನೂ ವ್ಯತ್ಯಾಸವಿಲ್ಲದಂತೆ ಸಂಶ್ಲೇಷ ಹೊಂದಿ, ಐಕಾಂತಿಕಾತ್ಯಂತಿಕ ನಿತ್ಯ ಕಿಂಕರನಾದ ಇವನ ಆನಂದದಿಂದ ತಾನೂ ನಿರತಿಶಯಾನಂದವುಳ್ಳವನಾಗುತ್ತಾನೆ, ಭಗವಂತ !

ಈ ಅರ್ಚಿರಾದಿಗತಿಯ ಚಿಂತನವೆಂಬುದು ಸದ್ವಾರಕ ಪ್ರಪತ್ತಿ ನಿಷ್ಠನಿಗೆ –ಅಂದರೆ ಭಕ್ತಿಯೋಗಿಗೆ, ಭಕ್ತಿಗೆ ಅಂಗವಾದ್ದರಿಂದ ಅವನಿಗೆ ಇದು ಯಾವ-ಜ್ಜೀವವೂ ನಿತ್ಯವೂ ಕರ್ತವ್ಯ. ಅದ್ವಾರಕಪ್ರಪತ್ತಿನಿಷ್ಠನಿಗೆ ಅವನು ಅನುಷ್ಠಿಸಿದ ಪ್ರಪತ್ತಿಗೆ ಅಂಗವಲ್ಲದಿದ್ದರೂ, ಅಪೇಕ್ಷಿತ ಫಲವು ಮುಂದೆ ತಾನಾಗಿಯೇ ಸಿದ್ಧಿಸುವುದಾದರೂ, ಪ್ರಪತ್ತ್ಯುಪಾಯವನ್ನು ಅನುಷ್ಠಿಸುವ ಕಾಲದಲ್ಲಿ ಅಧಿಕಾರವು ಸಿದ್ಧಿಸುವುದಕ್ಕಾಗಿ ಫಲಾರ್ಥಿತ್ವವು ಬೇಕಾದುದರಿಂದ ಫಲ ಪರ್ವ ವಿಶೇಷದ ಅನುಸಂಧಾನವಾಗಿ ಇದು ಪ್ರವಿಷ್ಟವಾಗಿದೆ. ಆ ಉಪಾಯವು ಸಿದ್ಧಿಸಿದ ಮೇಲೆ ಉಪಾಯದ ಫಲವು ಮುಂದೆ ಪ್ರಾಪ್ತ ಕಾಲದಲ್ಲಿ

ತಾನಾಗಿಯೇ ಸಿದ್ಧಿಸಿಯೇ ಸಿದ್ಧಿಸುವುದು. ಆದರೂ, ಅಭಿಷೇಕಕ್ಕೆ ದಿನವನ್ನು ಗೊತ್ತುಮಾಡಿರುವ ರಾಜಕುಮಾರನಿಗೆ ಗೊತ್ತಾದ ದಿವಸದಲ್ಲಿ ಆ ಮಹೋತ್ಸವವು ತಾನಾಗಿ ಅವನಿಗೆ ದೊರಕಿಯೇ ದೊರಕುವುದಾದರೂ ಅದರ ಮೇಲಣ ಪ್ರೀತ್ಯತಿಶಯಕ್ಕೆ ಪೋಷಕವಾಗಿ ಅದುವರಿಗಿನ ದಿನಗಳನ್ನು ದಿನದಿನವೂ ಸಂತೋಷದಿಂದ ಲೆಕ್ಕ ಮಾಡಿಕೊಂಡಿರುವಂತೆ, ಈ ಅಧಿಕಾರಿಗೂ. ತನಗೆ ಮುಂದೆ ದೊರಕಲಿರುವ ಪುರುಷಾರ್ಥದ ಮೇಲಣ ಪ್ರೀತ್ಯತಿಶಯದಿಂದ, ಆ ಪುರುಷಾರ್ಥದ ಸ್ಮರಣರೂಪವಾಗಿ ಈ ಗತಿ ಚಿಂತನವು ಸಂತೋಷಕ್ಕೆ ಹೇತುವೂ ಸ್ವಯಂ ಪ್ರಯೋಜನವೂ ಆಗಿದೆ. ತದ್ವಿಷಯಕ ಸ್ಥೂಲವಾದ ಜ್ಞಾನದಿಂದಲೂ ಅಪೇಕ್ಷಿತ ಫಲವು ಸಿದ್ಧಿಸುವುದು.

## ೨೨. ಪರಿಪೂರ್ಣ ಬ್ರಹ್ಮಾನುಭವಾಧಿಕಾರಃ

ಹೀಗೆ ಅರ್ಚಿರಾದಿ ಮಾರ್ಗದಿಂದ ಹೋದ ಮುಮುಕ್ಷುವಿಗೆ ದೊರಕುವ ಸರ್ವವಿಧ ಕೈಂಕರ್ಯಪರ್ಯಂತವಾದ ಪರಿಪೂರ್ಣ ಬ್ರಹ್ಮಾನುಭವವೆಂತಹದುದೆಂಬುದನ್ನು ಕೆಳಗಿನ ಶ್ಲೋಕದಿಂದ ಅಧಿಕಾರಾರಂಭದಲ್ಲಿಯೇ ಸಂಗ್ರಹಿಸಿ ತೋರಿಸಿದ್ದಾರೆ :—

"ವಿತಮಸಿ ಪದೇ ಲಕ್ಷ್ಮೀಕಾಂತಂ ವಿಚಿತ್ರವಿಭೂತಿಕಂ
ಸಚಿವಗಮಿತಃ ಸಂಪದ್ಯಾವಿರ್ಭವತ್ಸಹಜಾಕೃತಿಃ ।
ಸ್ಫುಟಿತದಪೃಥಕ್ಸಿದ್ಧಿಃ ಸಿಧ್ಯದ್ಗುಣಾಷ್ಟಕ ತತ್ಫಲಃ
ಭಜತಿ ಪರಮಂ ಸಾಮ್ಯಂ ಭೋಗೇ ನಿವೃತ್ತಿ ಕಥೋಜ್ಝಿತಂ ॥"

—ಎಂದು ಮೇಲ್ಕಂಡ ಗತಿ ವಿಶೇಷದಿಂದ ಪರಮಪದವನ್ನು ಸೇರಿದವನಿಗೆ ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ಸರ್ವೇಶ್ವರನನ್ನು ಅನಂತವಾದ ಗುಣ-ವಿಗ್ರಹ-ವಿಭೂತಿ ಚೇಷ್ಟಿತಗಳಲ್ಲಿ ಯಾವುದರಲ್ಲಿಯೂ ಸಂಕೋಚವಿಲ್ಲದ ಹಾಗೆ ನಿರತಿಶಯ ಭೋಗ್ಯವಾಗಿ ಪಡೆಯುವ ಅನುಭವವೇ ಪರಿಪೂರ್ಣಾನುಭವ. ನಿರತಿಶಯ ಭೋಗರೂಪವಾದ ಈ ಅನುಭವದಲ್ಲಿ ಮುಕ್ತರಿಗೂ ಭಗವಂತನಿಗೂ ಸ್ವಲ್ಪವೂ ವ್ಯತ್ಯಾಸವಿಲ್ಲದಿರುವುದರಿಂದ ಅದು ಪರಮ ಸಾಮ್ಯವೆನಿಸಿದೆ.

ಇಲ್ಲಿ ಭಗವಂತನ ಸ್ವರೂಪವು ಭೋಗ್ಯವಾದುದರಿಂದ ಅದಕ್ಕೆ ಸಂಬಂಧಿಸಿದ ಪ್ರಕಾರವೆಲ್ಲವೂ ಮುಕ್ತರಿಗೆ ಭೋಗ್ಯವಾಗಿದೆ. ಭೋಗ್ಯ ಭೂತನಾದ ರಾಜನಿಗೆ ಸಂಬಂಧಿಸಿದ ಭೋಗ್ಯ-ಭೋಗಸ್ಥಾನ-ಭೋಗೋಪಕರಣಾದಿಗಳು ರಾಜಮಹಿಷಿಗೆ ಹೇಗೋಹಾಗೆ, ಸರ್ವಪ್ರಕಾರ ವಿಶಿಷ್ಟನಾಗಿಯೇ ಸರ್ವೇಶ್ವರನು ಮುಕ್ತರಿಗೆ ಭೋಗ್ಯ. ಇಲ್ಲಿ ನಿರತಿಶಯ ಅನುಕೂಲವೂ ಪರಮಪ್ರಾಪ್ಯವೂ ಆದುದರಿಂದ (i) ಭಗವತ್ಸ್ವರೂಪವೂ, (ii) ಪರಿಪೂರ್ಣಾನುಭವವು ಭೋಗ್ಯ ಭೂತವಾದ ಸತ್ತ್ವೋತ್ತರ ದೇಶ ವಿಶೇಷ ಪ್ರಾಪ್ತಿಯಾದ ಮೇಲೆ ಬರುವುದಾದ್ದರಿಂದ, ಅಂತಹ ದೇಶ ವಿಶೇಷವೂ, (iii) ಇವನಿಗೆ ಈ ಅನುಭವಕ್ಕೆ ಆಶ್ರಯವಾಗಿ ಅನುಭಾವ್ಯವಾದ್ದರಿಂದ, ಭಗವದ್ವಿಭೂತಿಭೂತವೂ, ಜ್ಞಾನಾನಂದ ಲಕ್ಷಣವೂ ಆದ ಸ್ವಸ್ವರೂಪವೂ - ಹೀಗೆ ಇವು ಮೂರೂ ಪರಮಪದವೆನಿಸಿವೆ.

ಹೀಗೆ ಭಗವತ್ಸ್ವರೂಪ ರೂಪಗುಣವಿಗ್ರಹಾದಿಯೂ, ನಿತ್ಯವಿಭೂತಿಯೂ, ಸ್ವಸ್ವರೂಪವೂ ಭೋಗ್ಯವಾದರೂ, ಪ್ರತಿಕೂಲವೆಂಬುದಾಗಿ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಪ್ರಸಿದ್ಧವೂ, ಮುಮುಕ್ಷುಗಳಿಗೆ ತ್ಯಾಜ್ಯವೆಂಬುದಾಗಿ ಶಾಸ್ತ್ರದಲ್ಲಿ ವಿಹಿತವೂ ಆದ ಲೀಲಾವಿಭೂತಿಯಲ್ಲಿಯ ವಸ್ತುಗಳೆಲ್ಲವೂ ಹೇಗೆ ಭೋಗ್ಯವಾದಾವು? ಎಲ್ಲಿಂದ,-ರೋಗಿಗೆ ಹಾಲು ಪ್ರತಿಕೂಲವಾದಾಗ್ಯೂ ಪಿತ್ತವು ಉಪಶಾಂತವಾದನಂತರ ಹೇಗೆ ಅನುಕೂಲವೇ ಆಗುತ್ತದೆಯೋ, ಸಂಕೋಲೆಯಿಂದ ಬಂಧಿತನಾದ ರಾಜಕುಮಾರನಿಗೆ ಪ್ರತಿಕೂಲವಾದ ಕಾರಾಗಾರವೂ ಬಂಧವಿಮೋಚನೆಯನಂತರ ಸಾರ್ವಭೌಮನಾದ ಪಿತೃವಿನೊಡನೆ ಸಮಾನ ಭೋಗವುಳ್ಳ ಅವನಿಗೆ ಹೇಗೆ ಅನುಕೂಲವಾಗಿರುತ್ತದೆಯೋ, ಹಾಗೆಯೇ ಭಗವತ್ಸಂಶ್ಲೇಷವಿಲ್ಲದಿದ್ದಾಗ ಕರ್ಮಾನುಗುಣವಾಗಿ ಪ್ರತಿಕೂಲವೂ ಅಲ್ಪಾನುಕೂಲವೂ ಆದ ಈ ವಸ್ತುಜಾತವೆಲ್ಲವೂ ನಿರಂತರವಾಗಿ ಭಗವಂತನನ್ನು ಅನುಭವಿಸುತ್ತಿರುವಾಗ ನಿರತಿಶಯಭೋಗ್ಯ ವರ್ಗದಲ್ಲಿಯೇ ಸೇರಲು ಅರ್ಹವಾಗುವುವು. ಹೀಗೆ ಬಂಧ-ಮುಕ್ತಿಗಳೆಂಬ ಅವಸ್ಥಾಭೇದದಿಂದ ಅದೇ ವಸ್ತುಗಳು ಸ್ವಭಾವತಃ ಭೇದ ಹೊಂದುವುದಕ್ಕೆ ಭಗವತ್ಸಂಕಲ್ಪಭೇದವೇ ನಿಬಂಧನ.

ಪರಿಪೂರ್ಣಾನುಭವದಿಂದುಂಟಾದ ಪ್ರೀತಿ ವಿಶೇಷ ಹೊರಹೊಮ್ಮುವುದೇ ಕೈಂಕರ್ಯವೆಂಬುದು ಸರ್ವತ್ರ ಸುಸ್ಪಷ್ಟಕ ಮುಕ್ತಿಗೆ ಆಗ ಶ್ರುತಿಸಿದ್ಧವಾದ,

"ಜಕ್ಷತ್ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಯಾ ನೈರ್ವಾ...॥" —ಇತ್ಯಾದಿ ವಿಹಾರಗಳಿರುವಾಗ ಕೈಂಕರ್ಯ ಪರ್ಯಂತವಾದ ಅನುಭವವೆಂಬುದು ಹೇಗೆ ?— ಎಂದಲ್ಲಿ, ಈ ಭಕ್ಷಣಾದಿಯೂ, "ಸ ಯದಿ ಪಿತೃಲೋಕಕಾಮೋ ಭವತಿ । ಸಂಕಲ್ಪಾದೇವಾಸ್ಯ ಪಿತರಸ್ಸಮುತ್ತಿಷ್ಠನ್ತೇ ॥ ಸ ಯದಿ ಸ್ತ್ರೀಲೋಕ ಕಾಮಃ...। ಸ ಯದಿ ಗೀತವಾದಿತ್ರಲೋಕ ಕಾಮಃ ಸಂಕಲ್ಪಾದೇವಾಸ್ಯ......॥"—ಇತ್ಯಾದಿ ಗಳಲ್ಲಿ ಹೇಳಿರುವ ಜ್ಞಾತ್ಯಾದಿ ಸಂಪಾದನೆಯೂ ಇವೇ ಮೊದಲಾದುವೆಲ್ಲವೂ ಪುಣ್ಯಾಪುಣ್ಯ ಕರ್ಮಫಲವಾಗಿಲ್ಲದೆ ಭಗವದಿಚ್ಛೆಗೆ ಅನುಗುಣವಾದ ಸ್ವೇಚ್ಛಾ-ಮೂಲಗಳಾದ್ದರಿಂದ, ಅನುಭವ ಪರೀವಾಹವಾದ ಕೇವಲಕೈಂಕರ್ಯದಲ್ಲಿಯೇ ಅಂತರ್ಭೂತಗಳು. ಅಭಿಮತಾನುವರ್ತನವೇ ಕೈಂಕರ್ಯವಾದ್ದರಿಂದ ಆಯಾ ವಿಗ್ರಹಪರಿಗ್ರಹದಿಂದಲೂ ನಿತ್ಯಾನಿತ್ಯ ವಿಗ್ರಹದಿಂದಲೂ ಕೂಡ ಭಕ್ಷಣಾದಿ ವಿಹರಣಶೀಲನಾದ ಪರಮ ಪುರುಷನು ತನ್ನ ಶೇಷಭೂತರನ್ನೂ ಕೂಡ ತನಗೆ ಸಮಾನವಾದ ವಿಹರಣಶೀಲರನ್ನಾಗಿಸಿಯೇ ಮುಕ್ತಿಯಲ್ಲಿಯೂ ಸಾರ್ವಭೌಮ ನಂತೆ ಆನಂದ ಪಡುತ್ತಾನೆಯಾಗಿ ಭಕ್ಷಣಾದಿಗಳೂ ಕೈಕಂರ್ಯದಲ್ಲಿಯೇ ಅಂತ ರ್ಭೂತಗಳೆಂದು ಭಾವ. ಈ ಅನುಭವಕ್ಕೆ ಕೊನೆಯೆಂಬುದಿಲ್ಲ, ಭಗವಂತ್ಕೈಂ-ಕರ್ಯದಲ್ಲಿ ಅಂತರ್ಭೂತವಾದ ಸ್ವಚ್ಛಂದ ವಿಹಾರದಿಂದ ಲೀಲಾ ವಿಭೂತಿಗೆ ಮುಕ್ತನು ಬಂದಾಗ್ಯೂ, ಈ ಅನುಭವಕ್ಕೆ ಸಂಕೋಚವಿಲ್ಲದ್ದರಿಂದ ಅದು ಪುನರಾವೃತ್ತಿಯೆನಿಸದು. ಹಳೆಯಮುಕ್ತರಿಗೂ, ಈಗ ಮುಕ್ತರಾದವರಿಗೂ ಬ್ರಹ್ಮಾನುಭವಾಂಶದಲ್ಲಿ ಕಾಲ ಪ ಯುಕ್ತ ಸಂಕೋಚವಿದಾಗ್ಯೂ, ಅನುಭವ ಸ್ವರೂಪದಲ್ಲಿ ವ್ಯತ್ಯಾಸವಿಲ್ಲ. ವಿಷ್ಣುಲೋಕಾದಿಗಳಲ್ಲಿ ಸಾಲೋಕ್ಯ-ಸಾಮೀ ಪ್ಯಾದಿಗಳುಳ್ಳವರನ್ನೂ ಮುಕ್ತರೆನ್ನುವುದಾದರೋ-ಮುಕ್ತಿಗೆ ಹತ್ತಿರವಾದ್ದರಿಂದ ಪರಮಪದಪ್ರಾಪ್ತಿಯಾದನಂತರ ಬರುವ ಸಾಯುಜ್ಯವೇ ಮೋಕ್ಷವೆಂಬುದರ ಮುಖ್ಯವಾದ ಅರ್ಥ. ಅಂತಹ ಮೋಕ್ಷದಲ್ಲಿ ಸಾಲೋಕ್ಯ ಮುಂತಾದ್ದು ಸಾವಿರದಲ್ಲಿ ನೂರು ಅಡಗಿರುವಂತೆಯೇ. ಆದ್ದರಿಂದ ಅಲ್ಲಿ ಯಾರಿಗೂ ವೈಷಮ್ಯವಿಲ್ಲ.

ಸಾಯುಜ್ಯವೆಂಬುದು ಸಯುಕ್ಕಿನಭಾವ : "ಸಮಾನಗುಣಕಃ ಸಯುಕ್ ಸಯುಜಃ ಭಾವಃ ಸಾಯುಜ್ಯಂ" : ಎಂದು ಅದರ ವ್ಯುತ್ಪತ್ತಿ. 'ಸಯುಕ್' ಎಂದರೆ ಒಂದು ಭೋಗ್ಯವಸ್ತುವಿನಲ್ಲಿ ಭೋಕ್ತೃವಾಗಿದ್ದು ಜತೆಯಲ್ಲಿ ಅನ್ವಯಿ

ಸುವುದೆಂದರ್ಥ. ಪ್ರಕೃತವಲ್ಲಿ ಸಪ್ರಕಾರವಾದ ಪರಬ್ರಹ್ಮವೆಂಬ ಭೋಗ್ಯದಲ್ಲಿ ಪರಮಾತ್ಮನೂ ಮುಕ್ತನೂ ಸಹಭೋಕ್ತೃಗಳು. ಆದ್ದರಿಂದ ಮುಕ್ತನು 'ಸಯುಕ್'. ಭೋಗ್ಯದಲ್ಲಿ ತಾರತಮ್ಯವಿಲ್ಲದಿರುವುದು "ಸಾಯುಜ್ಯ". ಭೋಗದಲ್ಲಿ ತಾರತಮ್ಯವಿಲ್ಲದ್ದು "ಸಾರ್ಷ್ಟಿತಾ".

ಮುಕ್ತನಿಗೆ, ಜಗದ್‌ವ್ಯಾಪಾರವಿಲ್ಲದಿದ್ದಾಗ್ಯೂ ಕೃಷಿಕರ್ತೃವಾದ ತಂದೆಯೂ, ನಿರ್ವ್ಯಾಪಾರರಾದ ಪುತ್ರಾದಿಗಳೂ ಕೃಷಿಯ ಫಲವನ್ನು ಅನುಭವಿಸುವ ಹಾಗೆ, ಜಗದ್ವ್ಯಾಪಾರ ಜನಿತವಾದ ಆನಂದವನ್ನು ಸೃಷ್ಟಿಕರ್ತನಾದ ಪರಮೇಶ್ವರನೂ, ದ್ರಷ್ಟೃವಾದ ಮುಕ್ತನೂ ಸಮವಾಗಿ, ಅನುಭವಿಸುತ್ತಾರೆ. ಆದ್ದರಿಂದ ಮುಕ್ತನಿಗೆ ಜ್ಞಾನ-ಸ್ವರೂಪ-ಭೋಗಾದಿಗಳಿಂದ ಮಾತ್ರವೇ ಪರಮಸಾಮ್ಯ. ಜಗತ್ಕಾರಣತ್ವ-ಮೋಕ್ಷಪ್ರದತ್ವ-ಸರ್ವಾಧಾರತ್ವ-ಸರ್ವನಿಯಂತೃತ್ವ, ಸರ್ವಶೇಷಿತ್ವ, ಸರ್ವಶರೀರತ್ವ-ಸರ್ವಶಬ್ದವಾಚ್ಯತ್ವ-ಸರ್ವವೇದವೇದ್ಯತ್ವ-ಸರ್ವಲೋಕಶರಣ್ಯತ್ವ-ಸರ್ವಮುಮುಕ್ಷೂಪಾಸ್ಯತ್ವ-ಸರ್ವಫಲಪ್ರದತ್ವ. ಸರ್ವವ್ಯಾಪ್ತ ಜ್ಞಾನಾನಂದ ಸ್ವರೂಪತ್ವ-ಲಕ್ಷ್ಮೀಸಹಾಯತ್ವ ಮುಂತಾದುವು ಛತ್ರ-ಚಾಮರ ಮುಂತಾದುವುಗಳಂತೆ ಈಶ್ವರನಿಗೇ ನಿಯತವಾದ ಧರ್ಮಗಳು. ಮುಕ್ತನಿಗಾದರೋ-ಆಧೇಯತ್ವ, ವಿಧೇಯತ್ವ, ಶೇಷತ್ವ ಅಣುತ್ವವೇ ಮುಂತಾದುವು ನಿಯತವಾದ ಧರ್ಮಗಳು.

ಕೆಲವೆಡೆಗಳಲ್ಲಿ ಮುಕ್ತನನ್ನು ಸ್ವತಂತ್ರನೆಂದಿರುವುದಕ್ಕೆ ಕರ್ಮವಶ್ಯನಲ್ಲವೆಂದರ್ಥ. ಹಾಗಾದರೆ ಅಸ್ವತಂತ್ರನಾದ್ದರಿಂದ ಮುಕ್ತನಿಗೆ ಎಂದಾದರೂ ಯಾವುದಾದರೊಂದು ಕಾರಣದಿಂದ ಪುನರಾವೃತ್ತಿಯುಂಟೆಂದು ಶಂಕಿಸಕೂಡದು. ಏಕೆಂದರೆ ಪುನರಾವೃತ್ತಿಗೆ ಹೇತುವಿಲ್ಲ. ಹೇತುವೇನು ? ಸ್ವೇಚ್ಛೆಯೇ ? ಅಥವಾ ಭಗವದಿಚ್ಛೆಯೇ ?

"ನ ಚ ಉಚ್ಛಿನ್ನ ಕರ್ಮ ಬಂಧಸ್ಯ ಅಸಂಕುಚಿತಜ್ಞಾನಸ್ಯ ಪರಬ್ರಹ್ಮಾನುಭವೈಕ ಸ್ವಭಾವಸ್ಯ ತದೇಕಪ್ರಿಯಸ್ಯ ಅನವಧಿಕಾತಿಶಯಾನಂದಂ ಬ್ರಹ್ಮ ಅನುಭವತಃ ಅನ್ಯಾಪೇಕ್ಷಾ, ತದರ್ಥಾರಂಭಾದ್ಯಸಂಭವಾತ್ ಪುನಾರಾವೃತ್ತಿಶಂಕಾ" ಇತ್ಯಾದಿ ಶ್ರೀ ಭಾಷ್ಯೋಕ್ತಿಪ್ರಕಾರದಿಂದ ಸ್ವೇಚ್ಛೆಗೆ ಸಂಭವವಿಲ್ಲ. "ನ ಚ ಪರಮಪುರುಷಃ ಸತ್ಯಸಂಕಲ್ಪಃ ಅತ್ಯರ್ಥ ಪ್ರಿಯಂ ಜ್ಞಾನಿನಂ ಲಬ್ಧ್ವಾ ಕದಾಚಿದಾವರ್ತಯಿಷ್ಯತಿ ಯ ಏವ ಮಾಹ-ಪ್ರಿಯೋ ಹಿ ಜ್ಞಾನಿನೋಽತ್ಯರ್ಥಂ ಅಹಂ

ಸಚಮುಪಪ್ರಿಯಃ... ಇತ್ಯಾದಿ ಶ್ರೀಸೂಕ್ತಿಪ್ರಕಾರವಾಗಿ ಭಗವದಿಚ್ಛೆಗೂ ಸಂಭವವಿಲ್ಲ. ಹೀಗೆ ವೈರಾಗ್ಯ-ಜ್ಞಾನ ಭಕ್ತಿಗಳಿಗೆ ಸಂಕೋಚವಿಲ್ಲದ್ದರಿಂದ ಸ್ವೇಚ್ಛೆಯಿಂದಲಾಗಲಿ, ಭಗವದನಭಿಮತಾನುಷ್ಠಾನಕ್ಕೆ ' ಸಂಭವವಿಲ್ಲದ್ದರಿಂದ ಇವನಲ್ಲಿ ಭಗವದಪ್ರೀತಿಗೆ ಕಾರಣವಿಲ್ಲವಾಗಿ ಭಗವದಿಚ್ಛೆಯಿಂದಲಾಗಲೀ ಪುನರಾವೃತ್ತಿಶಂಕೆಗೆ ಆಸ್ಪದವಿಲ್ಲ.

ಆದ್ದರಿಂದ, ಕೈಂಕರ್ಯಪರ್ಯಂತ ಪರಿಪೂರ್ಣ ಪರಬ್ರಹ್ಮಾನುಭವರೂಪ ಮೋಕ್ಷವೆಂಬ ಪುರುಷಾರ್ಥವು ಅರ್ಚಿರಾದಿ ಮಾರ್ಗದಿಂದ ದೇಶ ವಿಶೇಷ ಪ್ರಾಪ್ತಿಯಾದಮೇಲೆ, ಯಾವದಾತ್ಮಭಾವಿಯೆಂಬುದು ಸಿದ್ಧ. ಇವೆಲ್ಲವನ್ನೂ ಚಿಂತಿಸಿ "ಅನಾವೃತ್ತಿಶ್ಶಬ್ದಾತ್ ಅನಾವೃತ್ತಿಶ್ಶಬ್ದಾತ್" ಎಂದು ಸೂತ್ರಕಾರರೂ ಅಪ್ಪಣೆ ಕೊಟ್ಟಿದ್ದಾರೆ. ಜೀವಗುಣ ಸಂಬಂಧದಿಂದ ಬ್ರಹ್ಮಗುಣಗಳಿಗೆ ರಸಾಧಿಕ್ಯ –ಇದನ್ನು "ಮಧುಕ್ಷೀರನ್ಯಾಯ ಸ್ವಗುಣ ವಿಭವಾಸಂಜನ ಕನನ್ಮಹಾನಂದ ಬ್ರಹ್ಮಾನುಭವ ಪರೀವಾಹಾ ಬಹುವಿಧಾ : ಎಂದು" ಪರಿಪೂರ್ಣಾನುಭವದ ಪರಿವಾಹರೂಪವಾದ ಅಖಿಲ ಕೈಂಕರ್ಯಗಳು ತಮಗೆ ಆವಿರ್ಭವಿಸಬೇಕೆಂದು ಇಲ್ಲಿ ಆಚಾರ್ಯರು ಪ್ರಾರ್ಥಿಸಿದ್ದಾರೆ.

ಅತ್ರ–; ( ಶ್ರೀ ರಹಸ್ಯತ್ರಯ ಸಾರಾರ್ಥ ರತ್ನಾವಳೀ–ಶ್ರೀ ಕಪಿಸ್ಥಲಂ ಸ್ವಾಮ್ಯನುಗ್ರಹೀತಾ)

1. ಭೋಗ್ಯಂ ಚೇತ್ ಬ್ರಹ್ಮಮಾತ್ರಂ ಪ್ರಸಜತಿಹಿತದಾ ನಿರ್ವಿಶೇಷಾ ನುಭೂತಿಃ ಸಂಸ್ಕೃತ್ತಂ, ಕೃತ್ಸ್ನ ಭೂತ್ಯಾಯದಿಚನ ಘಟತೇ ಭೋಗ್ಯತಾಪ್ರಾಕೃತಾನಾಂ । ಸ್ತ್ರೀಭಿಃ ಕ್ರೀಡಾದಿಕಂಚ-ಶ್ರುತಮಿಹಭವಿತಾ ಸ್ವರ್ಗತಃ ಕೋವಿಶೇಷಃ ಸಂಕಲ್ಪಾತ್ ಜಾತುನೇತುಃ ಚ್ಯುತಿರಮೃತಜುಷಾಂ ಸ್ಯಾದಿತೀದಂ ರುಣದ್ಧಿ ॥

2. ಆರಾತ್ಪರ್ಯಂಕವರ್ಯಂತಮಯಮಥ ಸಮಾರುಹ್ಯ ಕೋಸೀತಿ ಪೃಷ್ಟಃ ಪತ್ಯಾದಾಸೋಽಸ್ಮಿ ನಿತ್ಯಂತವ ಪರಿಚರಣಂ ಸರ್ವಥಾಽಭ್ಯರ್ಥಯೇಽಹಂ ॥ ಇತ್ಥಂವಿಜ್ಞಾಪ್ಯ ಲಕ್ಷ್ಮೀಮುಖನಿಹಿತ ದೃಶಾ ಸಸ್ಮಿತಂ ತೇನದತ್ತಂ ಪಾದಾಬ್ಜಂ ಮೂರ್ಧ್ನಿ ಧೃತ್ವಾ ತಮಪಿ ಸುಖಭರಂ ಯಾತಿವಾಚಾಮಭೂಮಿಂ ॥

3. ಸದ್ಯೋವಿದ್ಯೋತಮಾನ ಶ್ರುತನಿಖಿಲ ನಿಜಾಕಾರ ಭೂಮಾಸ್ತ-ಪಾಪ್ಮತ್ವಾದೀನ್, ಲಬ್ಧ್ವಾಗುಣಾಂಸ್ತತ್ಫಲಮಪಿಚ ಪೃಥಕ್ಸಿದ್ಧ್ಯ ನ ಹರ್-

ಪ್ರಕಾರೈಃ ಭೋಗ್ಯಂ ಬ್ರಹ್ಮೈಷ ಭುಂಕ್ತೇ ವಿಭವ ಗುಣ ತನೂಚೇಷ್ಟಿತೈ ರ್ಭೋಗ್ಯ ರೂಪೈಃ ತೇನಾಕಾರೇಣ ಸಾಮ್ಯಂ ಭಜತಿ ಚ ಪರಮಂ ಬ್ರಹ್ಮಣಾ ನಿರ್ವ್ಯಪಾಯಂ ॥

4. ಭಾತಂ ಯತ್ಪ್ರಾಕೃತಂ ಪ್ರಾಗಹಿತಮಿವ ನಿಜೈಃ ಕರ್ಮಭಿಸ್ತನ್ನಿವೃತ್ತೌ, ಪಿತ್ತಾಪಾಯೇ ಪಯೋವದ್ವಿಲಸತಿ ಸಹಜಾ ಭೋಗ್ಯತಾ ತಸ್ಯ ಮುಕ್ತೌ । ಸ್ತ್ರೀಭಿಃಕ್ರೀಡಾದಿಕಂ ಯಚ್ಛ್ರುತ ಮಘರಹಿತಂ ದೇವ ವಾಂಛಾನುರೋಧಿ ಸ್ವೇಚ್ಛಾಸಿದ್ಧಂಹಿ ದಿವ್ಯಂ ತದಪಿನಿವಿಶತೇ ತಸ್ಯ ಕೈಂಕರ್ಯಕೋಟಾ ॥

5. ಆವೃತ್ತಿರ್ನೇತಿನೇತಿ ಶ್ರುತಿಶಿರಸಿ ಸಮುದ್ಘುಷ್ಯತೇ ಮುಕ್ತಿಭಾಜೋ, ಗೀತಾಚಾರ್ಯೋಽಪ್ಯಗಾಯತ್ಪುನರಪಿ ಜನನಂ ಮಾಮುಪೇತಸ್ಯ ನೇತಿ । ತಚ್ಚೋಕ್ತಂ ಸೂತ್ರ ಕಾರೈಃ ನಖಿಲು ಸ ಭಗವಾನ್ ಹೃದ್ಯಮೇನಂ ವಿಜಹ್ಯಾತ್ ಧೇನುರ್ವತ್ಸಂ ಯಥಾ ತಾಂ ಇವ ಸುಖನಿಧಿಂ ಸ್ವಾಮಿನಂ ಮುಕ್ತಿಭಾಕ್ಚ ॥

6. ಜಾತ್ಯುತ್ಕರ್ಷಾಪ ಕರ್ಷಾನುಗುಣಮಿಹ ಭವೇತ್ ಭೋಗತಸ್ತಾರತಮ್ಯಂ, ಮುಕ್ತಾವಪ್ಯಾತ್ಮನಾ ಮಿತ್ಯಭಿದಧತಿ ಪರಂ ಮಧ್ವಸಿದ್ಧಾಂತ ನಿಷ್ಠಾಃ । ನೈತದ್ರಮ್ಯಂ ತಥಾ ಸತ್ಯಪರನರಕ ಇತ್ಯಾಪತೇನ್ಮುಕ್ತಿರೇಷಾಂ, ದುಃಖಸ್ಯೈವಾನಪಾಯಾತ್ ಸ್ವಸಮಧಿಕಸುಖಾಲಾಭತೋಽತ್ರೇವ ತತ್ರ ॥

7. ಆನಂದನ್ಯೂನತಾಸ್ಯಾತ್ ವಿಭುನಿಯತಜಗತ್ಕಾರಣತ್ವಸ್ಯ ಬಾಧಾತ್ ಮುಕ್ತಸ್ಯತ್ವನ್ಮತೇಽಪೀತಿಯದಿ ನ ಪರಮಂ ಸಾಮ್ಯಮೇತೀತಿ ಸೂಕ್ತೇಃ । ಶ್ರುತ್ಯನ್ತೇ ಸೂತ್ರಿತತ್ವಾದಪಿ ಮುನಿ ಹರಿಣಾ ಭೋಗಸಾಮ್ಯಸ್ಯ ವಿಶ್ವಸೃಷ್ಟ್ಯ ರ್ದುಷ್ಟುಶ್ಚ ಭೋಗಂ ಪಿತ್ಯಕೃಷಿ ಫಲಿತತತ್ತತ್ಸುತನ್ಯಾಯತಸ್ಸ್ಯಾತ್ ॥

8. ಸಾಲೋಕ್ಯಾ ದೌ ಪ್ರಸಿದ್ಧಾನನು ತರತಮತಾ ಶ್ರೂಯತೇ ಮುಕ್ತಿಶಬ್ದಃ ತತ್ರಾನಂದೇವ ಸಾಮ್ಯಂ ತದಿತಿಯದಿ ನ ತದ್ವಿಷ್ಣುಲೋಕೇ ಹಿ ಕಾರ್ಯೇ । ಭಾಕ್ತೋಽಸ್ಮಿನ್ ಮುಕ್ತಿಶಬ್ದೋಽವ್ಯವಹಿತ ಗಮನಾನ್ನಿತ್ಯಲೋಕಸ್ಯ ತಸ್ಮಾತ್ ಮುಕ್ತಿಸ್ಸಾಯುಜ್ಯಮೇವ ತ್ವಕೃತಕಭುವನೇ ಯತ್ಪರಬ್ರಹ್ಮಣಾಸ್ಯಾತ್ ॥

9. ಯೇಷಾಂ ಸಾಯುಜ್ಯಮೈಕ್ಯಂ ಮತಮನಧಿಗತಾ ಶಬ್ದ ಶಕ್ತಿರ್ಧ್ರುವಂ ತೈಃ, ಬ್ರೂತೇ ಸಾಯುಜ್ಯ ಶಬ್ದಃ ಸ್ವರಸತ ಉಭಯೋಃ ಏಕಕರ್ಮಾನ್ವಯಿತ್ವಂ । ತಚ್ಚೈಕ ಬ್ರಹ್ಮಭೋಗಾನ್ವಿತಿರಿಹ ಭವತಿ ಬ್ರಹ್ಮಣೋ ಮುಕ್ತಿ

ಭಾಜೋಽಪ್ಯೇವಂ ವಿಸ್ಪಷ್ಟಮಾಹ ಶ್ರುತಿರಪಿ ವಿಭುನಾ ಸೋಽಶ್ನುತೇ ಸರ್ವ ಕಾಮಾನ್ ॥

10. ಸಿಕ್ತಂ ಶುದ್ಧಂ ವಿಶುದ್ಧಾಂಬುನಿ ಭವತಿಯಥಾ ಕಾದ್ಯಗೇಪ್ಯೈವ ಮಾತ್ಮಾ, ಮುಕ್ತಾವಿತ್ಯುದ್ಗೃಣನ್ತೀ ಶ್ರುತಿರಯುತಿ ಮ್ಯಪಾವಾದಿ ಕಂಠೇ ಗರುತ್ವಂ । ಬಹ್ವೀನಾಂ ಭೇದವಾಚಾಂ ದಧತಿಕತಿಪಯಾಭೇದವಾಚಃ ಕಥಂವಾ, ಪ್ರತ್ಯರ್ಥಿಕ್ವಂ ತದಾಸಾಂಭವತಿ ತದವಿರೋಧೇನ ನೇಯತ್ವ ಮೇವ॥

11. ಸ್ವಾತ್ಮೋಪಾ ಸ್ತೈಕನಿಷ್ಠ ಸ್ತ್ವತಿಪತಿತತಮಾ ದೇವಯಾನೇನ ಮಾರ್ಗೇ, ಣಾವಿಶ್ಯಕ್ವಾಪಿಲೋಕೇ ವಿತಮುಸಿ ವಿರಜಾ ನಿತ್ಯಭೂತ್ಯನ್ತರಾಳೇ । ಬ್ರಹ್ಮಾನಂದಾನುಭೂತಿಂ ವಿಜಹದಿಹ ನಿಜಸ್ತನ್ಯಪಾನೋತ್ಕರ್ಧೇನುನ್ಯಾಯಾ ದಾತ್ಮಾನಮೇವಾನುಭವತಿ ಸುಖಮಿತ್ಯಾಹು ರೇಕೇ ಸಯೂಥ್ಯಾಃ ॥

12. ಮ್ಯೈವಂ ನಿಶ್ಯೈಷಕರ್ಮತ್ಯಜಿನ ಹಿ ಘಟತೇ ಬ್ರಹ್ಮಭೋಗಾನ ವಾಪ್ತಿ, ಸ್ತಸ್ಯಸ್ವಾಭಾವಿಕತ್ವಾತ್ ಅಪಕಲುಷಮಣೇರಪ್ರಕಾಶೋಽಹ್ಯದೃಷ್ಟಃ । ನೃಷ್ಕಮ್ಯೇಽಪೀಶ್ವರೇಚ್ಛಾ ವಶತ ಇತಿ ನಸಸ್ಥಾನಹೇತುಂ ವಿನಾಸ್ಯಾತ್, ಯದ್ಯಸ್ಮಿನ್ ಕರ್ಮಶೇಷೋ ಭವತಿ ಕಥಮುಸಾರರ್ಚಿರಾದ್ಯಧ್ವಯೋಗ್ಯಃ ॥ —ಇತಿ.

## ೨೩. ಸಿದ್ಧೋಪಾಯ ಶೋಧನಾಧಿಕಾರ :

ಅವತರಣಿಕೆ :—ಹೀಗೆ ಅನಾದಿ ಸಂಸಾರಿಯಾಗಿದ್ದು ಯಾದೃಚ್ಛಿಕಸುಕೃತ ಮೂಲವಾದ ಭಗವತ್ಕಟಾಕ್ಷದಿಂದ ತತ್ತ್ವಹಿತ ಪುರುಷಾರ್ಥಜ್ಞಾನವನ್ನು ಪಡೆದು ಮುಮುಕ್ಷುವಾಗಿ, ಪ್ರಪದನವನ್ನು ಅನುಷ್ಠಿಸಿ ಕೃತಕೃತ್ಯನೂ, ಯಾವಜ್ಜೀವವೂ ಶಾಸ್ತ್ರೋಕ್ತ ರೀತಿಯಲ್ಲಿ ಸ್ವನಿಷ್ಠೆಯಿಂದ ಕೈಂಕರ್ಯರೂಪ ಪರಮಪುರುಷಾರ್ಥವನ್ನು ಅನುಷ್ಠಿಸುವವನೂ ಆಗಿ ಮರಣಾನಂತರ ಪ್ರಾಪ್ತವಾದ ಅರ್ಚಿರಾದಿ ಗತಿಯಿಂದ ಅಪ್ರಾಕೃತ ದೇಶವಿಶೇಷವನ್ನು ಸೇರಿ ಅಳವಿಲ್ಲದ ಭಗವದನುಭವ ಪರೀವಾಹ ರೂಪವಾದ ಕೈಂಕರ್ಯರೂಪ ಪರಮಪುರುಷಾರ್ಥವನ್ನೂ ಕ್ಷೇತ್ರಜ್ಞನು ಅನುಭವಿಸುವ ಪ್ರಕಾರವು ನಿರೂಪಿತವಾಯಿತು.

ಈ ಉಕ್ತಾರ್ಥಗಳ ಸ್ಥಿರೀಕರಣಕ್ಕಾಗಿ ಮುಂದಿನ ನಾಲ್ಕು ಅಧಿಕಾರಗಳು ಹೊರಟಿವೆ. ಇವುಗಳಲ್ಲಿ ಮೊದಲು, ಸಿದ್ಧೋಪಾಯದ ವಿಚಾರ ಮಾಡಲ್ಪ-

ಡುತ್ತೆ. ಇವುಗಳ ನಿರ್ಣಯ ನಮಗೆ ಉಂಟಾಗಬೇಕಾದರೆ ಇದಕ್ಕೆ ಮೂಲ ಸ್ವತಂತ್ರನಾದ ಈಶ್ವರನ ಸಂಕಲ್ಪ. ಲಕ್ಷ್ಮೀಕಟಾಕ್ಷ, ಸದಾಚಾರ್ಯಾನುಗ್ರಹ, ಸತ್ಸಂಪ್ರದಾಯ ಸಿದ್ಧಿಗಳಿಂದ ಇದು ನಮಗೆ ಉದಿಸಬೇಕು. ಇವುಗಳಲ್ಲಿ ಲಕ್ಷ್ಮೀಕಟಾಕ್ಷವೆಂಬುದು, "ಅಸ್ತುಮೇ"—ಎಂದು ನಾವು ಪ್ರಾರ್ಥಿಸಿದಲ್ಲಿ, "ಅಸ್ತುತೇ, ತಯ್ಯೆವ ಸರ್ವಂ ಸಂಪತ್ಸ್ಯತೇ"–ಎಂಬ ಶ್ರೀ ಸೂಕ್ತಿ ಸಿದ್ಧವಾದ ಲಕ್ಷ್ಮಿಯ ಅನುಗ್ರಹ.

ಸದಾಚಾರ್ಯಾನುಗ್ರಹವೂ ಇದರ ವ್ಯಾಜ ವಿಶೇಷಗಳೂ ಫಲ ವಿಶೇಷಗಳೂ ಪರಾಶರ - ಮೈತ್ರೇಯ, ಸಂಜಯ - ಆಶ್ವಲಾಯನಾದಿ ವೃತ್ತಾಂತಗಳಲ್ಲಿ ಸುವ್ಯಕ್ತ.

ಸಂಪ್ರದಾಯ ಸಿದ್ಧಿಯಾದರೋ–ಸತ್ಪೋತ್ತರನೂ ಸಮ್ಯಗುಪಪನ್ನನೂ ಸಾವಧಾನಚಿತ್ತನೂ ಆದ ತನಗೆ ಕೇವಲ ಕಾರುಣ್ಯಕ್ಕೆ ಪರತಂತ್ರನಾದ ಸದಾಚಾರ್ಯನಿಂದ, ಸರ್ವೇಶ್ವರನಾದ ಪರಮಾಚಾರ್ಯನಿಂದ ಹಿಡಿದು ಉಪದೇಶಪರಂಪರಾ ಪ್ರಾಪ್ತವಾದ ತತ್ತ್ವ-ಹಿತ-ಪುರುಷಾರ್ಥಗಳ ಯಥೋಚಿತ ಉಪದೇಶಪ್ರಾಪ್ತಿ.

"ಶಾಸ್ತ್ರಜ್ಞಾನಂ ಬಹುಕ್ಲೇಶಂ ಬುದ್ಧೇಃ ಚಲನಕಾರಣಂ । ಉಪದೇಶಾತ್ ಹರಿಂ ಬುದ್ಧ್ವಾ ವಿರಮೇತ್ ಸರ್ವಕರ್ಮಸು ॥"—ಎಂಬಂತೆ ಶಾಸ್ತ್ರ ಪರಿಶ್ರಮದ ಕ್ಲೇಶವನ್ನು ಸಹಿಸದ ಪರಮಾಸ್ತಿಕರಿಗೆ ಈ ಉಪದೇಶವೇ ಪ್ರಧಾನವಾದುದು. ಶಾಸ್ತ್ರಪರಿಶ್ರಮಕ್ಲೇಶವನ್ನು ಸಹಿಸಬಲ್ಲ ಅಧಿಕಾರಿಗಳಾದರೋ-ಬಾಹ್ಯ-ಕುದೃಷ್ಟಿ ಪ್ರಭೃತಿಗಳವ್ಯಾಮೋಹದ ಪ್ರಶಮನಕ್ಕಾಗಿ ಇದನ್ನು ಸಮೀಚೀನ ಯುಕ್ತಿಗಳಿಂದ ಚೆನ್ನಾಗಿ ಗ್ರಹಿಸಬೇಕು.

ಈ ರೀತಿಯಾದ ಶಾಸ್ತ್ರಶ್ರವಣವಿಲ್ಲದ ಹೈತುಕರು ವೇದವಿರುದ್ಧವಾದ ತತ್ತ್ವಗಳ ಕಲ್ಪನೆಯಿಂದ ವಿಭೂತಿ ಮತ್ತು ವಿಭೂತಿನಾಥನ ವಿಷಯಕವಾದ ಪ್ರಾಮಾಣಿಕ ಅರ್ಥಗಳನ್ನೇ ಅಪಹರಿಸುವರು. ಇದರಲ್ಲಿ ಮೊದಲನೆಯದು ವಿಭೂತಿಯನ್ನೇ ಇಲ್ಲವೆನ್ನುವುದು ; ಇದೆಯೆಂದರೂ ಅದಕ್ಕೂ–ಸರ್ವೇಶ್ವರನಿಗೂ ಸಂಬಂಧವಿಲ್ಲವೆನ್ನುವುದು. ಅದನ್ನು ಸ್ವತಂತ್ರವೆನ್ನುವುದು, ಪರತಂತ್ರವೆಂದಾಗ್ಯೂ, ತನಗ್ಯೋ ತನ್ನಂತಹವರಿಗೋ ಅದು ಪರತಂತ್ರವೆನ್ನುವುದು ಇದೇ ಮೊದಲಾದುದು. ವಿಭೂತಿಯೆಂದರೆ - ಈಶ್ವರನಿಗೆ ನಿಯಾಮ್ಯವಾದ ಚೇತನಾಚೇತನ ಪ್ರಪಂಚ.

ಎರಡನೆಯದು ವಿಭೂತಿಯುಳ್ಳ ಸರ್ವೇಶ್ವರನನ್ನೇ ಇಲ್ಲವೆನ್ನುವುದು. ಶ್ರೀಯಃ ಪತಿಯನ್ನು ಬಿಟ್ಟು ಬೇರೊಬ್ಬನನ್ನು ಸರ್ವೇಶ್ವರನೆನ್ನುವುದು, ಸರ್ವೇಶ್ವರನಾದ ಶ್ರೀಯಃ ಪತಿಯನ್ನು ವಿಭೂತಿ ಕೋಟಿಯೊಳಗೇ ಸೇರಿಸುವುದು, - ಇತ್ಯಾದಿ, ಇಂತಹ ಅಪಹಾರಗಳಲ್ಲಿ ಯಾವುದೊಂದು ಮೃದು ಪ್ರಜ್ಞರಾದ ಪ್ರಪನ್ನರಿಗೆ ವಿಪರೀತ ಸಂಸರ್ಗದಿಂದ ಬಂದದ್ದೇ ಆದರೆ ಸ್ವದತ್ತಾಪಹಾರದಲ್ಲಿ ಪರ್ಯವಸಿತವಾಗುವುದು. ಆದ್ದರಿಂದ ಬಹುವಿಧ ವ್ಯಾಮೋಹಕರವಾದ ಹೈತುಕ ಸಂಸರ್ಗವನ್ನು ದೂರದಲ್ಲಿಯೇ ತ್ಯಜಿಸಬೇಕು. ಆದ್ದರಿಂದ ಮೊದಲು ಸಿದ್ಧೋಪಾಯದ ಮೇಲಣ ಶಂಕೆಗಳು ಪರಿಹರಿಸಲ್ಪಡುತ್ತವೆ. 'ಆ ಶಂಕೆಗಳು (i) ಸ್ವಾತಂತ್ರ್ಯ ಸಹಜ ಕಾರಣ್ಯ ಮೂಲಗಳು. (ii) ಶೇಷ - ಶೇಷಿಭಾವ ಸಂಬಂಧ ವಿಶೇಷಮೂಲಗಳು. (iii) ಪತ್ನೀಸಂಬಂಧ ಮೂಲಗಳೆಂದು ಮೂರು ಪ್ರಕಾರಗಳಾಗಿವೆ.

ಇವುಗಳಲ್ಲಿ ಮೊದಲನೆಯದು :—ಅನಾದಿಕಾಲದಿಂದ ಅನಾವರಿಸಿದ್ದು ಯಾವನಾದರೂ ಒಬ್ಬೊಬ್ಬ ಚೇತನನನ್ನು ಪರಿಗ್ರಹಿಸುವುದು ಈಶ್ವರನಿಗೆ ಕೇವಲ ಸ್ವಾತಂತ್ರ್ಯ ನಿಬಂಧನ. ಇದಕ್ಕೆ ನಾವೇಕೆ ಉಪಾಯವನ್ನು ಅನುಷ್ಠಿಸಬೇಕು ?- ಎಂಬ ಶಂಕೆ. ಇದಕ್ಕೆ ಉತ್ತರ :—ಈಶ್ವರನು ಸರ್ವಸ್ವತಂತ್ರನಾದಾಗ್ಯೂ, ಸಹಜಕಾರುಣ್ಯದಿಂದ. ವೈಷಮ್ಯ ನೈರ್ಘೃಣ್ಯಗಳ ಪರಿಹಾರಕ್ಕಾಗಿ ಚೇತನರಲ್ಲಿ ಒಂದು ವ್ಯಾಜವನ್ನು ಉಂಟುಮಾಡಿ ಅದರ ಮೂಲಕವೇ ರಕ್ಷಿಸುವನು. ಆ ವ್ಯಾಜವೆಂಬುದೇ ಉಪಾಯಾನುಷ್ಠಾನ. ಅದನ್ನು ನಾವು ಅನುಷ್ಠಿಸುವುದೂ ಅವನ ಸಂಕಲ್ಪದಿಂದಲೇ- ಹಾಗಾದರೆ ಮೊದಲೇ ಏಕೆ ಅವನು ಹಾಗೆ ಸಂಕಲ್ಪಿಸಲಿಲ್ಲ ?—ಎಂದರೆ, ಅದಕ್ಕೆ ಅಡ್ಡಿಯಾದ ಕರ್ಮಪ್ರವಾಹವು ಅನಾದಿ, ಕರ್ಮಾನುಗುಣ ಫಲವನ್ನು ಕೊಡದಿದ್ದಲ್ಲಿ ಅವನಿಗೆ ವೈಷಮ್ಯ ದೋಷವು ಪ್ರಸಂಗಿಸುವುದು. ಈ ವ್ಯಾಜ ವಿಶೇಷಕ್ಕೆ ಅವಸರವೊದಗಬೇಕಾದರೆ ಚೇತನನಲ್ಲಿ ಯಾದೃಚ್ಛಿಕಾದಿ ಒಂದು ಸುಕೃತ ವಿಶೇಷ ಕಂಡುಬರಬೇಕು. ಅದು ಆತನ ಕರ್ಮ ಸ್ವಲ್ಪ ವಿಪಾಕಕ್ಕೆ ಒಂದಾಗಲೇ. ಆದ್ದರಿಂದ ಇದುವರಿಗೆ ವ್ಯಾಜ ವಿಶೇಷಕ್ಕೆ ಅವನಿಗೆ ಪ್ರಸಂಗವೊದಗಲಿಲ್ಲವಾದ್ದರಿಂದ ಅವನು ಸಂಕಲ್ಪಿಸಲಿಲ್ಲ. ಹಾಗಾದರೆ ಈಶ್ವರನ ಸ್ವಾತಂತ್ರ್ಯವೆಂಬುದೇನಾಯಿತು ? —ಎಂದಲ್ಲಿ ಒಂದು ವ್ಯಾಜವಿಶೇಷವನ್ನು ಅವಲಂಬಿಸಿ ಅಭೀಷ್ಟಸಮಯದಲ್ಲಿ ರಕ್ಷಿಸಲು

ಉನ್ಮುಖನಾಗುವುದು - ಇದಕ್ಕೆ ತಡೆ ಮಾಡುವ ಸ್ವತಂತ್ರ ಬೇರೊಬ್ಬನಿಲ್ಲ ದಿರುವುದು - ಇವು ಇವನ ಸ್ವಾತಂತ್ರ್ಯ ನಿಬಂಧನ. ಚೇತನನನ್ನು ಈಶ್ವರನು ತನ್ನ ಲೀಲೋಪಕರಣವನ್ನಾಗಿ ಮಾಡಿಕೊಳ್ಳುವುದು ಸ್ವಂತ ಸ್ವಾತಂತ್ರ್ಯದಿಂದ. ಈ ಸ್ವಾತಂತ್ರ್ಯ-ಇದಕ್ಕೆ ಪ್ರಧಾನ ಕಾರಣ-ಇದಕ್ಕೆ ಸಹಕಾರಿ ಕಾರಣ-ಪ್ರವಾಹಾ ನಾದಿಯಾದ, ಅವನ ಆಜ್ಞೋಲ್ಲಂಘನ-ಹಾಗೆಯೇ ಭೋಗೋಪಕರಣವನ್ನಾಗಿ ಮಾಡಿಕೊಳ್ಳಲು ಪ್ರಧಾನಕಾರಣ-ಈಶ್ವರನ ಸ್ವಾಭಾವಿಕ ಕಾರುಣ್ಯ. ಸಹ ಕಾರಿ ಕಾರಣ - ವಶೀಕರಣ ವಿಶೇಷ. ಇದು ಯಾದೃಚ್ಛಿಕಾದಿ ಸುಕೃತದಿಂದುಂ ಟಾದ ಈಶ್ವರನ ಕೃಪಾನಿಬಂಧನವೂ, ಕಾರುಣ್ಯ ಪ್ರವಾಹವನ್ನು ಅಡ್ಡಿಪಡಿ ಸುವ ನಿಗ್ರಹಶಮನ ದ್ವಾರಕವೂ ಆದುದು.

ಹೀಗೆ ಈಶ್ವರನ ಸ್ವಭಾವವನ್ನೂ, ವೈಷಮ್ಯ ನೈರ್ಘೃಣ್ಯರಾಹಿತ್ಯವನ್ನೂ ಬಂಧಮೋಕ್ಷಾದಿವ್ಯವಸ್ಥೆಯನ್ನೂ ಪ್ರಮಾಣಾನುಗುಣವಾಗಿ ಚಿಂತಿಸಿ ಅವನ ಸ್ವಾತಂತ್ರ್ಯ ವಿಶಿಷ್ಟವಾದ ಕಾರುಣ್ಯವನ್ನೇ ಚೇತನರು ಅವಲಂಭಿಸಬೇಕು. ಏಕೆಂದರೆ, ನಿಷ್ಕರುಣನ ಸ್ವಾತಂತ್ರ್ಯವು ಕೆಲವು ವೇಳೆ ಬಾಧಕವಾದೀತು. ಅಸ್ವತಂತ್ರನ ಕಾರುಣ್ಯದಿಂದ ಇತರರಿಗೆ ಉಪಕಾರವಾಗದು ; ಅಲ್ಲದೆ ತನಗೂ ಕ್ಲೇಶಾವಹ. ಸ್ವತಂತ್ರನ ಕಾರುಣ್ಯವಾದರೋ—ಅವನು ಸತ್ಯಸಂಕಲ್ಪನಾದ್ದ ರಿಂದ, ತನಗೆ ಆನಂದಾವಹ, ಮತ್ತು ಆಶ್ರಿತರ ಅನಿಷ್ಟ ನಿವೃತ್ತಿ ಮತ್ತು ಇಷ್ಟಪ್ರಾಪ್ತಿಯಲ್ಲಿಯೂ ಸಮರ್ಥವಾದುದು. ಆದ್ದರಿಂದಲೇ ಅವತಾರ ವೃತ್ತಾಂತಗಳಲ್ಲಿ ಕೇಳಿಬರುವ ದುಃಖ, ಪಲಾಯನ ಮುಂತಾದುವು ಅಸುರ ಪ್ರಕೃತಿಗಳನ್ನು ಮೋಹಗೊಳಿಸುವುದಕ್ಕೂ ಸಾತ್ವಿಕ ಪ್ರಕೃತಿಗಳನ್ನು ರಂಜಿಸು ವುದಕ್ಕೂ ತೋರಿಸಲ್ಪಡುವ ಕೇವಲ ಅಭಿನಯ ಮಾತ್ರ, ಅದಕ್ಕೂ ಈಶ್ವರನ ಕೃಪೆಯೇ ಮೂಲ. ಸ್ವತಂತ್ರನಿಗೆ ಲೀಲಾರಸವನ್ನೂ ಉಂಟುಮಾಡುತ್ತವೆ.

ಹೀಗೆ ಇವನ ಸ್ವಾತಂತ್ರ್ಯ-ಸಹಜಕಾರುಣ್ಯಗಳು ಪರರ ಹಿತಕ್ಕಾಗಿಯೇ ಆದುದರಿಂದ ಇವನು ಆಶ್ರಿತರಕ್ಷಕ. ಉಪಾಯಾಂತರಸ್ಥಾನದಲ್ಲಿಯೂ ನಿಲ್ಲು-ವುದರಿಂದ ಉಪಾಯ. ರಕ್ಷಣ ವ್ಯಾಪಾರದ ಫಲಕ್ಕೂ ಆಶ್ರಯವಾದರಿಂದ, ಶೇಷೀ, ಆದ್ದರಿಂದಲೇ ಪ್ರಾಪ್ಯನೂ ಆಗಿದ್ದಾನೆ. ಈ ವಿಧವೈಶಿಷ್ಟ್ಯವು ಸ್ವರೂಪ ಪ್ರಯುಕ್ತವೆಂಬುದು ಪ್ರಮಾಣಸಿದ್ಧ, ಆ ಈಶ್ವರನಿಗೆ ಜ್ಞಾನ, ಶಕ್ತಿ, ಕಾರುಣ್ಯಗಳು ಪ್ರಧಾನ ಗುಣಗಳು. ಇದರೊಳಗೆ ಜ್ಞಾನ ಮತ್ತು ಶಕ್ತಿಯು

ನಿಗ್ರಹಾನುಗ್ರಹಗಳೆರಡಕ್ಕೂ ಸಾಧಾರಣ, ಕಾರುಣ್ಯವು ಅನುಗ್ರಹಕ್ಕೇ ಅಸಾಧಾರಣ. ಪರಹಿತಪ್ರಾವಣ್ಯವೇ ಅದಕ್ಕೆ ಲಕ್ಷಣ.

ಈ ಕಾರುಣ್ಯವು ಸರ್ವವಸ್ತುಗಳ ಸತ್ತೆ, ಸ್ಥಿತಿ, ಪ್ರವೃತ್ತಿಗಳಲ್ಲಿಯೂ, ಮುಕ್ತರ ಅನಾವೃತ್ತಿಯಲ್ಲಿಯೂ, ಲೀಲಾವಿಭೂತಿ ಸೃಷ್ಟಿಯಲ್ಲಿಯೂ, ಸ್ವಾವತಾರರೂಪ ಶುದ್ಧ ಸೃಷ್ಟಿಯಲ್ಲಿಯೂ, ಶಾಸ್ತ್ರಪ್ರವರ್ತನದಲ್ಲಿಯೂ, ಅದರ ಮೂಲಕ ತತ್ತ್ವಹಿತ ಜ್ಞಾನೋತ್ಪಾದನೆಯಲ್ಲಿಯೂ, ಮೋಕ್ಷದಲ್ಲಿ ಶ್ರದ್ಧೆ ಹುಟ್ಟಿಸುವುದರಲ್ಲಿಯೂ, ಅದಕ್ಕೆ ವ್ಯಾಜವಾದ ಸುಕೃತವಿಶೇಷದಲ್ಲಿಯೂ, ಆಯಾ ಅಧಿಕಾರಕ್ಕೆ ಅನುರೂಪವಾಗಿ ನಿಗ್ರಹ ಶಮನೋಪಾಯ ಪ್ರದಾನ ದಲ್ಲಿಯೂ, ಅದರಲ್ಲಿ ಮನಸ್ಸೇ ಮುಂತಾದ ಕರಣಗಳನ್ನು ಪ್ರೇರಿಸುವುದ ರಲ್ಲಿಯೂ, ಉಪಾಸಕನಿಗೆ ವಿಘ್ನ ಶಮನಮಾಡುವುದರಲ್ಲಿಯೂ, ಅಕಿಂಚನನಿಗೆ ಉಪಾಯಾಂತರ ಸ್ಥಾನದಲ್ಲಿ ನಿಲ್ಲುವುದರಲ್ಲಿಯೂ, ವ್ಯಾಜಮಾತ್ರದಿಂದ ಅನಾದಿ ಕಾಲದಿಂದ ಸಂಚಿತವಾದ ಅನಂತಾಪರಾಧಗಳ ಅನಾದರಣೆಯಲ್ಲಿಯೂ, ಸಂಸಾರ ನಿವೃತ್ತಿ ಪೂರ್ವಕವಾದ ಅನಂತಸುಖಾನುಭವ ಪ್ರದಾನದಲ್ಲಿಯೂ, ಆರ್ತರಿಗೆ ಆಗಲೇ ಮೋಕ್ಷವನ್ನು ಕೊಡುವುದರಲ್ಲಿಯೂ, ದೃಪ್ತಪ್ರಪನ್ನರಿಗೆ ಪ್ರಾರಬ್ಧ ಕರ್ಮಾಧೀನವಾದ ಅಪರಾಧಗಳಿಗೆ ಅನುತಾಪಾದಿಗಳನ್ನು ಹುಟ್ಟಿಸು- ವುದರಿಂದ ಆಯಾ ಅಧಿಕಾರಕ್ಕೆ ಅನುರೂಪವಾದ ಪ್ರಾಯಶ್ಚಿತ್ತ ವಿಶೇಷದಲ್ಲಿ ಪ್ರವರ್ತನಗೊಳಿಸುವುದರಲ್ಲಿಯೂ, ಮೃದುಪ್ರಕೃತಿಗಳಲ್ಲದವರಿಗೆ ಯಮ ವಿಷಯಗಮನವೂ ಕೋರಿದ ಫಲಕ್ಕೆ ಪ್ರತಿಬಂಧಕವೂ ಇಲ್ಲದಹಾಗೆ ಉಪಕ್ಲೇಶ ಗಳಿಂದ ಶಿಕ್ಷಿಸುವುದರಲ್ಲಿಯೂ ಪ್ರಧಾನವಾದ ಸಾಮಾನ್ಯ ಕಾರಣವಾಗಿದೆ.

ಇಂತಹ ಕೃಪಾವಿಶಿಷ್ಟನಾದ ಭಗವಂತನು ಸರ್ವಪುರುಷಾರ್ಥಸಾಧಕನೂ ಪೂರ್ವವೇ ಸಿದ್ಧವಾದವನೂ ಆದುದರಿಂದ ಸಿದ್ಧೋಪಾಯವೆನಿಸಿದ್ದಾನೆ. ಅವನನ್ನು ಪ್ರಸನ್ನವಾಗಿಸುವ ಭಕ್ತಿ - ಪ್ರಪತ್ತಿಗಳು ಸಾಧ್ಯೋಪಾಯಗಳೆನಿಸಿವೆ. ಒಬ್ಬ ಅಧಿಕಾರಿಗೆ ಕರ್ತವ್ಯವಾಗಿ, "ಮಾಮೇಕಂ ಶರಣಂ ವ್ರಜ," —ಎಂದು ವಿಧಿಸಲ್ಪಡುವ ಪ್ರಪತ್ತಿಯನ್ನು ಸಂಧ್ಯೋಪಾಸನಾದಿಗಳಿಗೆ ಶುಚಿತ್ವಾದಿಯು ಅಧಿಕಾರಿ ವಿಶೇಷಣವಾಗಿರುವಂತೆ ಪ್ರಪತ್ತಿಯೂ ಪ್ರಪನ್ನನಿಗೆ ಈಶ್ವರನು ಉಪಾಯವೆಂದು ಬೋಧಿಸುವುದರಲ್ಲಿ ತಾತ್ಪರ್ಯವಾದ್ದರಿಂದ ಅದು ಅಧಿಕಾರಿ ವಿಶೇಷಣವೇ ಹೊರತು ಉಪಾಯುವಲ್ಲವೆಂದು ಕೆಲವರೆನ್ನುವುದು,—"ಕರ್ತವ್ಯ

ತಯಾ ವಿಧೀಯಮಾನ ಕ್ರಿಯಾಪ್ರಯೋಜಕತಯಾ ವಿಧಿಗಮ್ಯಾಧಿಕಾರಿ ವಿಶೇಷತ್ವಂ ತಲ್ಲಕ್ಷಣಂ" - ಎಂಬ ಅಧಿಕಾರಿ ವಿಶೇಷಣಕ್ಕೆ ಹೇಳುವ ಲಕ್ಷಣವು ಕೂಡದಿರುವುದರಿಂದ ಕೇವಲ ಅತಿವಾದ. ಹೀಗಿಲ್ಲದಿದ್ದಲ್ಲಿ ಈಶ್ವರನು ಉಪಾಯವಾಗಿರಲು ಉಪಾಸನಾದಿ ಶಾಸ್ತ್ರಾರ್ಥಗಳೂ ಅಧಿಕಾರಿ ವಿಶೇಷಣ ಗಳಾದಾವು - "ಸಿದ್ಧಮೇವಹಿ ಸರ್ವತ್ರ ನಿಯೋಜ್ಯಸ್ಯ ವಿಶೇಷಣಂ"—ಎಂಬ ಮೀಮಾಂಸೋಕ್ತಿಯಂತೆ, ಅಧಿಕಾರಿ ವಿಶೇಷಣ ಪೂರ್ವಸಿದ್ಧವಾದುದರಿಂದ ಅದಕ್ಕೆ ವಿಹಿತತ್ವವು ಕೂಡದು. ಒಬ್ಬ ಅಧಿಕಾರಿ ವಿಶೇಷಕ್ಕೆ ಕರ್ತವ್ಯವಾಗಿ ಪ್ರಪತ್ತಿ ವಿಹಿತವಾಗಿದೆಯಷ್ಟೆ ! ಈ ಅಭಿಪ್ರಾಯದಿಂದ ಶ್ರೀಮದ್ವೇದಾಂತ ದೇಶಿಕರವರೂ - "ಫಲಾದಿಭ್ಯೋ ವಿಭಿನ್ನತ್ವಾತ್ ಪ್ರಪತ್ತಿರ್ವಿಧ್ಯನನ್ವಯಾತ್ । ವಿಧೇಯಾಂತರಹಾನೇಶ್ಚನಾಧಿಕಾರಿ ವಿಶೇಷಣಂ ॥" —ಎಂದು ಅಪ್ಪಣೆ ಕೊಟ್ಟಿದ್ದಾರೆ. ಪ್ರಪತ್ತಿಯೂ ಭಕ್ತ್ಯಾದಿತುಲ್ಯವಾದ್ದರಿಂದ ಅದನ್ನು ಉಪಾಯವಲ್ಲ ವೆಂದು ಕೆಲವರನ್ನುವುದು ಸಿದ್ಧೋಪಾಯಕ್ಕೆ ಪ್ರಾಧಾನ್ಯ ಸೂಚಿಸುವುದಕ್ಕಾಗಿ. ಅದಕ್ಕೆ ಪ್ರಾಧಾನ್ಯವಾದರೋ—ಪ್ರಸಾದನದಿಂದ, ನಿಗ್ರಹವು ಶಾಂತವಾಗಲು ಸ್ವಾಭಾವಿಕವಾದ ಭಗವದನುಭವಕ್ಕೆ ಪ್ರಯೋಜಕವಾದುದರಿಂದ. ಹೇಗೆಂದರೆ,– ಮಹಾರತ್ನಕ್ಕೆ ಇರುವ ಕಲ್ಮಷ ನೀಗಿದಲ್ಲಿ ಸ್ವಾಭಾವಿಕವಾದ ಪ್ರಭಾವಿಕಾಸವು ಅದಕ್ಕೆ ಅನುಗುಣವಾದ ಭಗವತ್ಸಂಕಲ್ಪಕ್ಕೆ ಮಾತ್ರವೇ ಅಧೀನ. ಹಾಗೆಯೇ ಮುಕ್ತನಿಗೆ ಜ್ಞಾನವಿಕಾಸವೂ ಅದಕ್ಕೆ ಅನುಗುಣವಾದ ಸಂಕಲ್ಪ ವಿಶೇಷ ಮೂಲಕವಾದದ್ದು. ಆದ್ದರಿಂದ ಸಿದ್ಧೋಪಾಯಕ್ಕೆ ಪ್ರಾಧಾನ್ಯವಿದ್ದಾಗ್ಯೂ ಅದರ ವಶೀಕರಣಕ್ಕಾಗಿ ಸಾಧ್ಯೋಪಾಯವನ್ನು ಅನುಷ್ಠಿಸುವುದರಲ್ಲಿ ಏನೂ ವಿರೋಧವಿಲ್ಲ.

**ಇನ್ನು ಮುಂದೆ ಸಂಬಂಧ ವಿಶೇಷ ಮೂಲಕವಾದ ಶಂಕೆಗೆ ಪರಿಹಾರ :**

ಈಶ್ವರನು ಶೇಷಿಯಾಗಿದ್ದು ನಾವು "ಗರ್ಭಭೂತಾಸ್ತಪೋಧನಾಃ" ಎಂದಿರುವಂತೆ ಸ್ತನಂಧಯ ಪ್ರಾಯರಾಗಿರುವಲ್ಲಿ, ತಾಯಿಯ ಸ್ತನ್ಯಕ್ಕಾಗಿ ಆರ್ತನಾಗಿ ಅಳುವುದೊಂದನ್ನು ಬಿಟ್ಟು ಕೂಲಿ ಕೊಡುವವರ ಹಾಗೆ ನಾವು ಆತ್ಮ ಸಮರ್ಪಣೆ ಮಾಡುವುದೂ, ರಕ್ಷಿಸಬೇಕೆಂದು ಅಪೇಕ್ಷಿಸುವುದೂ. ವಿಶ್ವಾಸ ಮಾಡುವುದು–ಇತ್ಯಾದಿಯಲ್ಲವೂ ಸ್ವರೂಪಕ್ಕೆ ಹೊಂದುವುದೆ? –ಎಂದು ಕೆಲ

ವರು ಸಿದ್ಧೋಪಾಯದ ಮೂಲಕ ಸಾಧ್ಯೋಪಾಯದ ಸ್ವರೂಪವನ್ನು ಅರಿಸಲು ನೋಡುತ್ತಾರೆ. ಮಹರ್ಷಿಗಳ ಮತ್ತು ಶ್ರೀಭಾಷ್ಯಕಾರಾದಿಗಳ ವಿಶ್ವಾಸ ಪೂರ್ವಕವಾದ ಆತ್ಮ ನಿಕ್ಷೇಪಾದ್ಯನುಷ್ಠಾನವೂ, ಶಾಸ್ತ್ರಸಂಪ್ರದಾಯವೂ, ಉಪದೇಶ ಪರಂಪರೆಯೂ ಇದಕ್ಕೆ ಎದಿರೇಟುಗಳಾಗಿವೆ. ಆದ್ದರಿಂದ ಶೇಷಿತ್ವಾದಿ ಸಂಬಂಧ ನಿತ್ಯವಾದಾಗ್ಯೂ, ಶೇಷನಾದವನ ರಕ್ಷಣೆಯು ಶೇಷಿಗೆ ಪ್ರಾಪ್ತವಾದಾಗ್ಯೂ ಕರ್ಮವಶ್ಯರಾದ ನಮ್ಮನ್ನು ಈಶ್ವರನು ಸಾಧ್ಯೋಪಾಯ ವಿಶೇಷ ಪೂರ್ವಕವಲ್ಲದೆ ರಕ್ಷಿಸನೆಂಬುದು ಶಾಸ್ತ್ರವಶ್ಯರ ಸಿದ್ಧಾನ್ತ.

ಶಾಸ್ತ್ರವನ್ನು ಅನಾದರಿಸಿ ಕೇವಲ ಯುಕ್ತಿಯನ್ನೇ ಅವಲಂಬಿಸಿದಲ್ಲಿ ಈಶ್ವರನೇ ಸಿದ್ಧಿಸದೆ ಶೇಷ-ಶೇಷಿಭಾವ ರೂಪ ಸಂಬಂಧವೂ ಸಿದ್ಧಿಸದು. ಆದ್ದರಿಂದ "ಪರಮೇಶ್ವರಃ ಶೇಷೀ ರಕ್ಷಣೇ ಪ್ರಾಪ್ತಃ, ಶೇಷಭೂತೋಽಯಮುಪಾಪ್ತಃ" – ಎಂಬ ವಚನವು ಲೋಕ ದೃಷ್ಟಿ ಪ್ರಕ್ರಿಯೆಯಿಂದ ರಕ್ಷ್ಯ–ರಕ್ಷಕ ಭಾವಕ್ಕೆ ಔಚಿತ್ಯ ಪ್ರದರ್ಶನಪರ. ಸಂಬಂಧ ಮಾತ್ರವೇ ನಿಯಾಮಕವೆಂದಲ್ಲಿ ಸರ್ವಮುಕ್ತಿ ಪ್ರಸಂಗ. ಸ್ವಾತಂತ್ರ್ಯದಿಂದ ವ್ಯವಸ್ಥಾಪನೆಯೆಂದಲ್ಲಿ ಹಿಂದೆ ಹೇಳಿದಂತೆ ವೈಷಮ್ಯ ನೈರ್ಘೃಣ್ಯ ಪ್ರಸಂಗವೂ.

ಇಂತಹ ಸಂಬಂಧ ಜ್ಞಾನ ಮಾತ್ರವೇ ಬೇಕಾದದ್ದು – ರಕ್ಷಾಪೇಕ್ಷೆಯೇ ಮುಂತಾದುದು ಬೇಕಿಲ್ಲವೆಂದರೆ ತಪ್ಪೇನು? ಎಂಬುದೂ ಯುಕ್ತವಲ್ಲ. ಸಂಬಂಧ ಜ್ಞಾನವಿಲ್ಲದಾಗ್ಯೂ ಅಚಿದ್ದ್ರವ್ಯಗಳನ್ನೂ ರಕ್ಷಾಪೇಕ್ಷಾರಹಿತಗಳಾದ ಮೃಗ ಪಕ್ಷ್ಯಾದಿಗಳನ್ನೂ ಸ್ತನಂಧಯಾದಿಗಳನ್ನೂ ರಕ್ಷಿಸುವುದನ್ನು ಲೋಕದಲ್ಲಿ ಕಂಡಿದ್ದೇವೆ. ಹಾಗಿದ್ದಾಗ್ಯೂ ಶಾಸ್ತ್ರ ಬಲದಿಂದ ಸಂಬಂಧಜ್ಞಾನವು ಬೇಕೆಂದಲ್ಲಿ, ಶಾಸ್ತ್ರಬಲದಿಂದಲೇ ರಕ್ಷಾಪೇಕ್ಷೆಯೂ ಅಪೇಕ್ಷಣೀಯವಾಗುವುದು. ಸಂಬಂಧ ಸಹಿತ ಪ್ರತಿಷೇಧಾಭಾವವು ಅಪೇಕ್ಷಿತವೆಂದಲ್ಲಿ, ಸುಷುಪ್ತ್ಯಾದ್ಯವಸ್ಥೆಗಳಲ್ಲಿ ಸರ್ವ ಮುಕ್ತಿ ಪ್ರಸಂಗ. ಪ್ರತಿಷೇಧ ಯೋಗ್ಯದಶೆಯಿರುವಾಗ ಅಂತಹ ಪ್ರತಿಷೇಧಾಭಾವವು ವಿವಕ್ಷಿತವೆಂದಲ್ಲಿ ಪ್ರತಿಷೇಧ ಯೋಗ್ಯತೆಯಿಲ್ಲದ ಅಚಿತ್ತುಗಳಿಗೂ, ಪ್ರತಿಷೇಧಿಸುವ ಪಶು ಪುತ್ರಾದಿಗಳಿಗೂ ರಕ್ಷಣೆಯಿಲ್ಲದಂತಾದೀತು. ಹಾಗಾದರೆ ಸ್ವರಕ್ಷಣಾರ್ಥ ವ್ಯಾಪಾರದಲ್ಲಿ ತನಗೆ ಅನ್ವಯವಿಲ್ಲವೆಂಬ ಆಪ್ತ ವಚನಕ್ಕೇನು ತಾತ್ಪರ್ಯ?

" ಯೇನಾಥವನ್ತೋಹಿ ಭವನ್ತಿಲೋಕೇ ತೇನಾತ್ಮಕರ್ಮಾಣಿ ಸಮಾರಭನ್ತೇ!

ತೇಷಾಂ ಹಿ ಕಾರ್ಯೇಷು ಭವನ್ತಿನಾಥಾಃ ಶೈಬ್ಯಾದಯೋ ರಾಮಯಥಾ ಯಯಾತೇಃ॥" –ಎಂದಿದೆಯಷ್ಟೆ!

— ಎಂದರೆ ಇಲ್ಲಿಯೂ, 'ನಾಥ' – ಶಬ್ದವ್ಯುತ್ಪತ್ತಿಯಿಂದಲೂ (ನಾಥ್ಯತೇ ಇತಿನಾಥಃ), ನಿರ್ಭರತೆಗೆ ಉಪಯುಕ್ತವಾದ ಸಂಬಂಧ ವಿಶೇಷವನ್ನು ಹೇಳುವ 'ಮತುಪ್' –ಪ್ರತ್ಯಯದಿಂದಲೂ ಆತ್ಮನಿಕ್ಷೇಪವು ವ್ಯಂಜಿತ ಸರ್ವರಕ್ಷಕನಾದ ಈಶ್ವರನಿರುವಲ್ಲಿ ಸ್ವರಕ್ಷಣಾರ್ಥ ಸ್ವವ್ಯಾಪಾರದಲ್ಲಿ ನಮಗೆ ಅನ್ವಯವಿಲ್ಲವೆಂಬುದಕ್ಕೆ ತಾತ್ಪರ್ಯ– "ಯದರ್ಥಂತು ಕೃತೋನ್ಯಾಸಃ ತದರ್ಥಂ ನ ಪುನಃ ಕ್ರಿಯಾ। ಪೂರ್ವಮಪ್ಯಪರಾಧೀನ ಪ್ರವೃತ್ತೌ ಅಸ್ಯನಾನ್ವಯಃ"॥ –ಎಂದರೆ, ಯಥಾಪ್ರಮಾಣ ಸ್ವರಕ್ಷಣ ಭರವನ್ನು ಸಮರ್ಪಿಸಿದವನಿಗೆ ಅನಂತರ ಸ್ವರಕ್ಷಣಾರ್ಥ ವ್ಯಾಪಾರದಲ್ಲಿ ಪ್ರಾಪ್ತಿಯಿಲ್ಲ. ಮೊದಲು–ತಾನು ಸ್ವರಕ್ಷಣಾರ್ಥವಾಗಿ ಮಾಡಿದ ಸಮರ್ಪಣಾದಿ ವ್ಯಾಪಾರವೂ ಸರ್ವಕರ್ತನಾದ ಅವನೇ ಬೀಜಾಂಕುರ ನ್ಯಾಯದಿಂದ ಅನಾದಿಯಾಗಿ ಪ್ರವರ್ತನೆಗೊಳಿಸಿದ ಕರ್ಮ ಪ್ರವಾಹ ವಿಪಾಕ ವಿಶೇಷದಲ್ಲಿ ಬಂದ ಒಂದು ಯಾದೃಚ್ಛಿಕ ಸುಕೃತಾದಿ ವಿಶೇಷ ಕಾರಣವನ್ನು ಮುಂದಿಟ್ಟುಕೊಂಡು ಮಾಡಿದ್ದನಾದ್ದರಿಂದ ನಾವೇ ನಮ್ಮನ್ನು ರಕ್ಷಿಸಿ ಕೊಳ್ಳುವೆವೆಂದಿರಲು ಪ್ರಾಪ್ತಿಯಿಲ್ಲ. ಸರ್ವರಕ್ಷಕನಾಗಿ ಮೂಲ ಮಂತ್ರಾದಿಗಳಲ್ಲಿ ಕಾಣುವ ಇವನು ತಾನೇ ನಮ್ಮನ್ನು ಒಂದು ಉಪಾಯದಲ್ಲಿ ಎರಗಿಸಿ ಆ ವ್ಯಾ ಪಾ ರ ದಿ ೦ ದ ಪ್ರಸನ್ನನಾಗಿ ರಕ್ಷಿಸುತ್ತಾನೆಯೆಂದಿರತಕ್ಕದ್ದು ನಮಗೆ ಪ್ರಾಪ್ತ. "ಸ್ವಾಮೀ ಸ್ವಶೇಷಂ ಸ್ವವಶಂ ಸ್ವಭರತ್ವೇನ ನಿರ್ಭರಂ। ಸ್ವದತ್ತ ಸ್ವಧಿಯಾ ಸ್ವಾರ್ಥಂ ಸ್ವಸ್ಮಿನ್ ನ್ಯಸ್ಯತಿ ಮಾಂ ಸ್ವಯಂ ॥"–ಎಂಬುದು ಆತ್ಮ ಸಮರ್ಪಣದಶೆಯಲ್ಲಿ ಖ್ಯಾತಿ-ಲಾಭ-ಪೂಜಾ-ಫಲಸಂಗ - ಕರ್ತೃತ್ವೋಪಾಯತ್ವಗಳೆಂಬ ಕಲ್ಮಷವಿಲ್ಲದ ಭಗವದನುಸಂಧಾನದ ಕಟ್ಟಳೆ. ಆದ್ದರಿಂದ ತಾಯಿಯ ಮೊಲೆಹಾಲಿನಂತೆ ಬರುವ ಈಶ್ವರ ಪ್ರಸಾದಕ್ಕೆ ಸ್ತನಂಧಯನ ಮೊಲೆಯುಣ್ಣುವ ವ್ಯಾಪಾರದಂತೆ ಇವನ ಅಪೇಕ್ಷಾದಿಗಳು. ಇದರಿಂದ ಸಿದ್ಧೋಪಾಯದ ಸ್ವರೂಪಕ್ಕೆ ದೋಷವು ಬರದು. ಹೀಗಿಲ್ಲದಿದ್ದಲ್ಲಿ ಭೋಜನಾದಿ ಲೌಕಿಕ ವ್ಯವಹಾರ ಪ್ರವೃತ್ತಿ ಮೊದಲಾದುವನ್ನೂ ಬಿಟ್ಟುಬಿಡಬೇಕಾದೀತು.

**ಪತ್ನೀ ಸಂಬಂಧ ನಿಬಂಧನವಾದ ಶಂಕೆಗೆ ಪರಿಹಾರ :**

ದ್ವಯದ ಪೂರ್ವ ಖಂಡದಲ್ಲಿಯ "ಶ್ರೀಮತ್"—ಶಬ್ದವು ಉಪಲಕ್ಷಣ ಪರವೆಂದೂ, ಉತ್ತರಖಂಡದಲ್ಲಿಯ 'ಶ್ರೀಮತ್'-ಶಬ್ದವು ವಿಶೇಷಣ ಪರ ವೆಂದೂ ಕೆಲವರು ಭಿನ್ನಪ್ರಕಾರವಾಗಿ ಹೇಳುತ್ತಾರೆ. ಇಲ್ಲಿ ಶಬ್ದವು ಏಕ ರೂಪವಾಗಿದ್ದು ಸ್ವರಸವಾದ ಅರ್ಥಕ್ಕೂ ಬಾಧಕವಿಲ್ಲದಿರುವಲ್ಲಿ, "ಸ್ವರೂಪಂ ಸ್ವಾತಂತ್ರ್ಯಂ ಭಗವತ ಇದಂ ಚಂದ್ರವದನೇ .... " ಇತ್ಯಾದಿಗಳಲ್ಲಿ ಪ್ರಸಿದ್ಧ ವಾದ ಕೂಟಸ್ಥಸಂಪ್ರದಾಯಕ್ಕೆ ವಿರುದ್ಧವಾಗಿ ಹೇಳುವ ಈ ವಿಭಾಗವು ಉಪಪನ್ನವಲ್ಲ. ಅನನ್ಯೋಪಾಯತ್ವಕ್ಕೆ ವಿರುದ್ಧವಾದ ಉಪಾಯದ್ವಿತ್ವ ಪ್ರಸಂಗವು ಇಲ್ಲಿ ಬಾಧಕವಾದರೋ ?— ಎಂದಲ್ಲಿ, ಅನನ್ಯಪ್ರಯೋಜನತ್ವಕ್ಕೆ ವಿರುದ್ಧವಾದ ಪ್ರಾಪ್ಯದ್ವಿತ್ವ ಪ್ರಸಂಗದಿಂದ ಉತ್ತರಖಂಡದಲ್ಲಿಯೂ ವಿಶೇಷ-ಣತ್ವವಿಲ್ಲವೆಂದಾದೀತು. ಹಾಗಾದರೆ ಎರಡು ಕಡೆಗಳಲ್ಲಿಯೂ ಉಪಲಕ್ಷಣ ವಾದರೋ ?— ಎಂದಲ್ಲಿ ಗುಣವಿಗ್ರಹ ವ್ಯಾಪಾರ ವಿಶೇಷಗಳೂ ಎರಡೆಡೆಗಳ-ಲ್ಲಿಯೂ ಉಪಲಕ್ಷಣಗಳೆನ್ನಬೇಕಾಗುವುದು. ಉಪಯುಕ್ತಗಳಾದ್ದರಿಂದ ಅವು ವಿಶೇಷಣಗಳೆಂದಲ್ಲಿ ಇದೂ ಪೂರ್ವೋತ್ತರ ಖಂಡಗಳಲ್ಲಿ ಪತ್ನೀಸಂಬಂಧ ರೂಪ ವಿಶೇಷಣದಲ್ಲಿಯೂ ತುಲ್ಯ.

[ವಿಶೇಷ್ಯದೊಂದಿಗೆ ಸದಾಸೇರಿದ್ದು ಅದನ್ನು ಬೇರೆಯುವುಗಳಿಂದ ಪ್ರತ್ಯೇ-ಕಿಸಿ ತಿಳಿಸುವುದು — ವಿಶೇಷಣ. ಉದಾ. — "ನೀಲಃಘಟಃ". ವಿಶೇಷ್ಯ ದೊಂದಿಗೆ ಕದಾಚಿತ್ ಕೂಡಿದ್ದು ಅವನ್ನು ಬೇರೆಯವುಗಳಿಂದ ಪ್ರತ್ಯೇಕಿಸಿ ತಿಳಿಯಲು ಸಾಧನವಾದದ್ದು ಉಪಲಕ್ಷಣ. ಉದಾ :—"ಸಾರಸವಾನ್ ದೇವದತ್ತಕೇದಾರಃ"—"ಕಾಕವತ್ ದೇವದತ್ತಗೃಹಂ". – ಇತ್ಯಾದಿ. ಆದ್ದರಿಂದ ವಿದ್ಯಮಾನಂ ಸತ್ ವ್ಯಾವರ್ತಕಂ-ವಿಶೇಷಣಂ ; ಅವಿದ್ಯಮಾನಂ ಸತ್ ವ್ಯಾವ-ರ್ತಕಂ - ಉಪಲಕ್ಷಣಂ _ ಎಂಬುದು ಇವುಗಳ ಲಕ್ಷಣ] ಉಪಯೋಗ ವಿಶೇಷವು ಆಯಾ ವಸ್ತುವಿನ ಸ್ವಭಾವಕ್ಕೆ ಅನುಗುಣವಾದದ್ದು. ಪ್ರಕೃತದಲ್ಲಿ, ಪುರುಷ ಕಾರತ್ವ, ಅನುಮತಿಪ್ರದಾತೃತ್ವ - ಭರಸ್ವೀಕರ್ತೃತ್ವಾದಿಗಳು ಪ್ರಮಾಣ ಸಂಪ್ರದಾಯ ಸಿದ್ಧಗಳೆಂದು ತಿಳಿಯಕತಕ್ಕದ್ದು. ಪರಾಂಕುಶ-ವಾಲ್ಮೀಕಿ-ಹಿರಣ್ಯ ಗರ್ಭ-ಕಾಶ್ಯಪ-ಶೌನಕ-ಪರಾಶರ-ಶ್ರೀಪತಿ-ಯಾಮುನಾರ್ಯ-ರಾಮಾನುಜಾಚಾರ್ಯ ಶ್ರೀವತ್ಸಾಂಕಮಿಶ್ರ-ವೃದ್ಧಮುನಿ (ಪೆರಿಯಜೀಯರ್) ಪ್ರಭೃತಿಗಳು ಹೀಗೆಯೇ

ಶ್ರೀದೇವಿಯ ಉಪಯೋಗ ವಿಶೇಷವನ್ನು ತಮ್ಮ ಪ್ರಬಂಧಗಳಲ್ಲಿ ಉದಾಹರಿಸಿದ್ದಾರೆ. ಆದ್ದರಿಂದ ಶ್ರೀ'-ಯಿಂದಲೂ, ಗುಣವಿಗ್ರಹಾದಿಗಳಿಂದಲೂ ವಿಶಿಷ್ಟನಾಗಿಯೇ ಪರಮೇಶ್ವರನು ಉಪಾಯ ಮತ್ತು ಉಪೇಯನೆಂಬುದು ಸಿದ್ಧ. ವಿಶಿಷ್ಟೈಕ್ಯದಿಂದ ಉಪಾಯೈಕ್ಯವೆನ್ನುವುದು. ಹಾಗಾದರೆ, ಉಪಾಯದ ವಿಶೇಷಣಗಳೆಲ್ಲವನ್ನೂ ಬಿಟ್ಟು ಕೇವಲ ಧರ್ಮಿಗೇ ಉಪಾಯತ್ವವನ್ನು ಹೇಳಿದರೋ ?— ಎಂದಲ್ಲಿ, ಆಗ್ಗೆ ಉಪಾಯತ್ವವೂ ವಿಶೇಷಣವಾದ್ದರಿಂದ ಅದನ್ನೂ ಬಿಟ್ಟಂತಾಗುವುದು. ಆದ್ದರಿಂದ ವಿಶೇಷಣ ಪ್ರಯುಕ್ತವಾದ ಅತಿಶಯದಿಂದ ವಿಶೇಷ್ಯಕ್ಕೆ ವೈಗುಣ್ಯವನ್ನು ಶಂಕಿಸುವುದು ಯುಕ್ತವಲ್ಲ. "ಸ್ವತಃ ಶ್ರೀಸ್ತ್ವಂ ವಿಷ್ಣೋಃ ಸ್ವಮಸಿ ತತಏವೈಷ ಭಗವಾನ್, ತ್ವದಾಯತ್ತರ್ದ್ಧಿತ್ವೇಽಪ್ಯಪರಾಧೀನ ವಿಭವಃ । ಸ್ವಯಾದೀಪ್ತ್ಯಾರತ್ನಂ ಭವದಪಿ ಮಹಾರ್ಘಂ ನ ವಿಗುಣಂ ನ ಕುಂಠಸ್ವಾತಂತ್ರ್ಯಂ ಭವತಿ ಚ ನ ಚಾನ್ಯಾಹಿತ ಗುಣಂ ॥" ಎಂಬ ಶ್ಲೋಕವು ಇದಕ್ಕೆ ಪ್ರಮಾಣ.

ಅಲ್ಲದೆ, ವಿಶೇಷಣದಿಂದಲೇ ವಿಶೇಷ್ಯಕ್ಕೆ ಅತಿಶಯವೆಂಬ ನಿಯಮವಿಲ್ಲ-ಸ್ವರೂಪಾನುಬಂಧಿಯಾದ ಅತಿಶಯವೂ ಪ್ರಮಾಣಸಿದ್ಧವಾಗಿದೆ. "ಅನನ್ಯಾ ರಾಘವೇಣಾಹಂ ಭಾಸ್ಕರೇಣ ಪ್ರಭಾಯಥಾ ॥"— ಎಂಬ ದೃಷ್ಟಾಂತದಲ್ಲಿ ಇದನ್ನು ಕಾಣಬಹುದು. "ಭಾಃ + ಕರೋತಿ, ಇತಿ ಭಾಸ್ಕರಃ"—ಎಂಬ ವ್ಯುತ್ಪತ್ತಿಯಂತೆ ಸ್ವತಃ ಅತಿಶಿಯ ಮತ್ತು ಪ್ರಭೆಯಿಂದಲೂ ಅತಿಶಯವುಳ್ಳವನು ಸೂರ್ಯ. ಇದರಿಂದ ಭಾಸ್ಕರನಲ್ಲಿ ವೈಗುಣ್ಯಶಂಕೆಗೆ ಆಸ್ಪದವಿಲ್ಲವೆಂದರ್ಥ. ಭಾಸ್ಕರನಿಗೂ ಪ್ರಭೆಗೂ ಸ್ವತಸ್ಸಿದ್ಧವಾದ ತೇಜಸ್ಸಿದ್ದಂತೆ ದಿವ್ಯದಂಪತಿಗಳಿಬ್ಬರಿಗೂ,

"ಅನನ್ಯಾಧೀನ ಕಲ್ಯಾಣಂ ಅನ್ಯಮಂಗಳ ಕಾರಣಂ । ಜಗನ್ನಿದಾನಮುದ್ವನ್ದ್ವಂ ದ್ವನ್ದ್ವಂ ವನ್ದಾಮಹೇ ಮಹಃ॥"—ಎಂಬ ಲಕ್ಷ್ಮೀಕಲ್ಯಾಣದ ನಾಂದೀ ಶ್ಲೋಕದಂತೆಯೇ ಸ್ವಭಾವಸಿದ್ಧ ಕಲ್ಯಾಣಳಾದ್ದರಿಂದ, 'ಅಪ್ರಮೇಯಂ ಹಿ ತತ್ತೇಜೋಯಸ್ಯ ಸಾ ಜನಕಾತ್ಮಜಾ ॥"—ಎಂದೂ, "ತವಶ್ರಿಯಾ",—ಎಂದೂ, "ಉನ್ತಿರುವರುಳುಂ"—ಎಂದೂ, "ಶ್ರಿಯಃಶ್ರೀಃ" -- ಎಂದೂ, "ತಿರುವುಕ್ಕುಂ-ತಿರು",-ಎಂದೂ ಅನ್ಯೋನ್ಯಾತಿಶಯಾವಹಗಳಾಗಿ ವಿಶೇಷಣ - ವಿಶೇಷ್ಯಗಳನ್ನು ನಿರ್ದೇಶಿಸಿರುವುದಕ್ಕೆ ಕೊರತೆಯಿಲ್ಲ. "ದ್ವಾ ಚ ಸದೈಕ ಶೇಷೀ"—ಎಂಬಂತೆಯೇ

"ಉಭಯಾಧಿಷ್ಠಾನಂಚೈಕಂ ಶೇಷಿತ್ವಂ" — ಎಂದು ಶ್ರೀ ಸೋಮಯಾಜಿ ಯಾಂಡಾರ್ ಅವರ ಷಡರ್ಥ ಸಂಕ್ಷೇಪದಲ್ಲಿ ನಿಷ್ಕರ್ಷಿಸಿರುವಂತೆ, ಈರ್ವರೂ ಏಕ ಶೇಷಿತ್ವಕ್ಕೆ ಆಶ್ರಯವಾಗಿರುವುದರಿಂದ, ಹವಿರ್ವಿಶೇಷಗಳಲ್ಲಿ "ಅಗ್ನಾ-ವಿಷ್ಣು"–ಪ್ರಭೃತಿಗಳಿಗೆ ಹೇಗೋ ಹಾಗೆ ಆತ್ಮಹವಿಸ್ಸಮರ್ಪಣಕ್ಕೆ ಉದ್ದೇಶ್ಯ ರಾಗುವುದರಲ್ಲಿಯೂ ತಪ್ಪಿಲ್ಲ. ಹೀಗೆ ವಿಶೇಷಣೀ ಭೂತಗಳಾದ 'ಶ್ರಿ'–ಗೂ ಸ್ವರೂಪಾನುಬಂಧಿಯಾದ ಅತಿಶಯವಿರುವುದರಿಂದ ಅನ್ಯೋನ್ಯಾತಿಶಯಾ ವಹರೆಂಬುದಾಗಿ ವಿಶೇಷಣ - ವಿಶೇಷ್ಯಗಳನ್ನು ನಿರ್ದೇಶಿಸಿದೆ. ನಿತ್ಯ ಪತಿ ಪಾರಾರ್ಥ್ಯ (ಶೇಷತ್ವ) ದಿಂದ ಯಾಗ ಕರ್ಮದಲ್ಲಿಯಂತೆಯೇ ಪತಿ ಪ್ರಾಧಾನ್ಯ ದಿಂದ ಶಾಸ್ತ್ರವು ಪ್ರವೃತ್ತವಾಗಿದೆ. ಯಜಮಾನೈಕ್ಯದಂತೆ ಇಲ್ಲಿಯು ಏಕತ್ವವ್ಯಪ ದೇಶ. "ಅಗ್ನಾವಿಷ್ಣು"–ಎಂಬಲ್ಲಿಯೂ, ಪ್ರಮಾಣಾಂತರದಿಂದ ಅಗ್ನಿಯು ವಿಷ್ಣುವಿಗೆ ಶೇಷಭೂತನಾಗಿ ವಿಶೇಷಣವಾಗಿದ್ದಾಗ್ಯೂ, ಹವಿರ್ವಿಶೇಷಗಳಲ್ಲಿ ಉದ್ದೇಶ್ಯಕಾರಕತ್ವವು

ತುಲ್ಯವಾಗಿರುವ ಹಾಗೆಯೇ ಇಲ್ಲಿಯೂ ಇರುವರಿಗೂ ಏಕ ಶೇಷಿತ್ವಾಶ್ರಯ. ಶ್ರೀದೇವಿಯು ಭಗವಂತನ ಸ್ವರೂಪ ನಿರೂಪಕಳಾಗಿ ತತ್ಪ್ರತೀತ್ಯಂತರ್ಭೂತಳಾದ್ದರಿಂದ ಭಗವಂತನನ್ನು ಹೇಳುವ ವಾಕ್ಯಗಳೆಲ್ಲವೂ 'ಶ್ರೀ'ದೇವಿಯನ್ನೂ ಹೇಳುತ್ತವೆಯೆಂದು ಸಂಪ್ರದಾಯವಿದೆ. "ತದನ್ತ ರ್ಭಾವಾತ್ ತ್ವಾಂ ನ ಪೃಥಗಭಿಧತ್ತೇ ಶ್ರುತಿರಪಿ"-ಎಂಬ ಶ್ರೀಭಟ್ಟರ ಶ್ರೀಸೂಕ್ತಿಯೂ ಇದಕ್ಕೆ ಪ್ರಮಾಣ.

ಹೀಗೆ 'ಶ್ರೀ'-ಯು ಭಗವದವಿನಾಭೂತಳಾದಲ್ಲಿ ಭಗವದಾಲಯಾದಿಗಳಲ್ಲಿ 'ಶ್ರೀ'ಗೆ ಪ್ರತ್ಯೇಕಪ್ರತಿಷ್ಠಾರ್ಚನಾದಿಗಳು ನಡೆಯುತ್ತಿರುವುದು ಸರಿಯೇ ? ಎಂದಲ್ಲಿ.-ಭಗವಂತನ ಅರ್ಚಾರೂಪವು—ಅಧಿಕಾರ, ಲಯ, ಭೋಗಗಳೆಂಬು ದಾಗಿ ಮೂರು ಬಗೆ. ಅಧಿಕಾರವೆಂಬುದು ಕಾಮಪ್ರಧಾನವಾದ ಮದನ ಗೋಪಾಲಾದಿ ರೂಪ, ಲಯ, ಭೋಗಗಳೆಂಬವು ಮೋಕ್ಷ ಪ್ರಧಾನವಾದ ರಾಮಕೃಷ್ಣಾದಿ ರೂಪಗಳು ಹೀಗೆಯೇ 'ಶ್ರೀ'-ಯ ರೂಪವೂ ಮೂರು ಬಗೆ-ಆಲಯಸಮೃದ್ಧಿಗಾಗಿ ಪ್ರತ್ಯೇಕವಾಗಿ ಪ್ರತಿಷ್ಠೆಯಾಗಿವುದು 'ಅಧಿಕಾರಾರ್ಚನೆ'. ಭಗವಂತನ ವಕ್ಷಃಸ್ಥಲದಲ್ಲಿರುವುದು 'ಲಯ', ಪಾರ್ಶ್ವದಲ್ಲಿರುವುದು 'ಭೋಗ' -ಇವುಗಳಲ್ಲಿ ಅಧಿಕಾರ ರೂಪವಾದ 'ಶ್ರೀ'-ರೂಪವು ಆಲಯಸಮೃದ್ಧ್ಯರ್ಥವಾಗಿ

ಶಾಸ್ತ್ರದಲ್ಲಿ ಚೋದಿತವಾಗಿರುವುದರಿಂದ, ಉಪಪನ್ನವಾಗುತ್ತೆ. ಹಾಗದಲ್ಲಿ, ಲಯ-ಭೋಗಗಳ ಅರ್ಚನಪರರಾಗಿ ಅನನ್ಯಪ್ರಯೋಜನರಾದ ಮುಮುಕ್ಷುಗಳಿಗೆ ಕಾಮ್ಯ ಪ್ರಧಾನವಾದ ಅಧಿಕಾರಾರ್ಚನ ಪ್ರಣಾಮಾದಿಯು ಹೇಗೆ ಯೋಗ್ಯ?-ಎಂವಲ್ಲಿ. ಅಲ್ಲಿಯೂ ವಿಷ್ಣುಪತ್ನೀ'-ಎಂಬುದು ಸುಪ್ರತಿಷ್ಠಿತವಾಗಿರುವುದರಿಂವ ಕಾಮ್ಯಪ್ರಧಾನ ಭಗವದ್ರೂಪಗಳಲ್ಲಿಯಂತೆಯೇ ಮಾತೃತ್ವಸ್ವಾಮಿತ್ವಾದ್ಯು ಪಾಧಿಕವಾಗಿ ಪ್ರಣಾಮಾದ್ಯಾಚಾರಗಳಿಗೆ ಅನುಪಪತ್ತಿಯಿಲ್ಲ. ಆದ್ದರಿಂದ, ಸಿದ್ಧೋಪಾಯಶಬ್ದವಾಚ್ಯಮೀಮಾಂಸೆಯಲ್ಲಿ ಏಕಶೇಷಿತ್ವಾಶ್ರಯವಾಗಿರುವುದ ರಿಂದಲೂ. ಏಕಾಭಿಪ್ರಾಯವುಳ್ಳೋಣದರಿಂದಲೂ. ಪರಸ್ಪರ ಪ್ರಾವಣ್ಯಾತಿಶಯವುಳ್ಳೋಣದರಿಂದಲೂ, ಸ್ವರೂಪರೂಪಾದಿಗಳಲ್ಲಿ ಅಪೃಥಕ್ಸಿದ್ಧಸಂಸರ್ಗ ವಿಶೇಷವುಳ್ಳೋಣದರಿಂದಲೂ, ಸುಶ್ಲಿಷ್ಟ ಶ್ರೀವಿಶಿಷ್ಟನಾದ ಪರಮಾತ್ಮನನ್ನೇ 'ಶ್ರೀಮನ್ನಾರಾಯಣ'-ಶಬ್ದವು ಪ್ರತಿಪಾದಿಸುತ್ತದೆಯೆಂಬುದು ಸಾತ್ತ್ವಿಕ ಸಿದ್ಧಾಂತದ ತತ್ತ್ವ.

"ತದ್ಯಥಾ ಹಿರಣ್ಯನಿಧಿಂ ನಿಹಿತಂ ಅಕ್ಷೇತ್ರಜ್ಞಾಃ ಉಪರ್ಯುಪರಿ ಸಂಚರನ್ತೋ ನ ವಿಂದೇಯುಃ ಏವಮೇವೇಮಾಸ್ಸರ್ವಾ: ಅಹರಹರ್ಗಚ್ಛನ್ತ್ಯಃ ಏತಂ ಬ್ರಹ್ಮಲೋಕಂ ನವಿನ್ದನ್ತಿ ಅನೃತೇನ ಹಿ ಪ್ರತ್ಯೂಢಃ"-ಎಂಬ ಶ್ರುತ್ಯರ್ಥದಂತೆ ಈ ಸಿದ್ಧೋಪಾಯವೆಂಬ ನಿಧಿಯು ಈಗಲೂ ಕೂಡ ಬಾಹ್ಯಕುದೃಷ್ಟಿಗಳಿಗೆ ದೃಷ್ಟವಾಗಿಲ್ಲ. ಸಾತ್ತ್ವಿಕರಿಗಾದರೋ-ತಾನಾಗಿಯೇ ಕಾಣುವುದೆನ್ನುತ್ತಾರೆ:—

"ವಿಶ್ರಾಮ್ಯದ್ಭಿರುಪರ್ಯುಪರ್ಯಪಿ ದಿವಾನಕ್ತಂ ಬಹಿರ್ದರ್ಶನೈಃ ಅಸ್ಮದ್ದೇಶಿಕ ಸಂಪ್ರದಾಯರಹಿತೈರದ್ಯಾಪಿ ನಾಲಕ್ಷಿತಃ। ಸ್ವಪ್ರಾಪ್ತೇಃ ಸ್ವಯಮೇವ ಸಾಧನತಯಾ ಜೋಘುಷ್ಯಮಾಣಃ ಶ್ರುತೌ. ಸತ್ತ್ವಸ್ಥೇಷು ಭಜೇತಸನ್ನಿಧಿಮಸೌ ಶಾನ್ತಾವಧಿಶ್ಶೇವಧಿಃ ॥"-ಇತಿ.

## 24 ಸಾಧ್ಯೋಪಾಯ ಶೋಧನಾಧಿಕಾರಃ

ಹೀಗೆ ಸಿದ್ಧೋಪಾಯದ ಸ್ವರೂಪವು ವಿಶೋಧಿತವಾದಾಗ್ಯೂ, ಸರ್ವಜ್ಞನೂ ಸರ್ವಶಕ್ತನೂ ಪರಮಕಾರುಣಿಕನೂ ಸರ್ವಶೇಷಿಯೂ, ಸಪತ್ನೀಕನೂ ಸರ್ವಲೋಕಶರಣ್ಯನೂ ಆದ ಭಗವಂತನೇ ಆ ಸಿದ್ಧೋಪಾಯ ವೆಂಬುದು ತಿಳಿದಾಗ್ಯೂ, ಸಂಸಾರದಲ್ಲಿ ವೈರಾಗ್ಯವೂ ಸಂಪೂರ್ಣವಾಗಿರುವು

ದಾಗರೂ, ಅನಾದಿಕಾಲದಿಂದ ಅನುಸರಿಸಿಬರುತ್ತಿರುವ ಆಜ್ಞಾತಿಲಂಘನ ಮೂಲಕ ಭಗವನ್ನಿಗ್ರಹದ ಪ್ರಶಮನಕ್ಕೆ ಮೂಲಕಾರಣವಾದ ಸಾಧ್ಯೋಪಾಯ ವಿಶೇಷವ ಪರಿಜ್ಞಾನವಿಲ್ಲವಲ್ಲಿ ಸಿದ್ಧೋಪಾಯದ ವಶೀಕರಣವು ಸಾಧ್ಯವಿಲ್ಲ. ಆದ್ದರಿಂದ ಆ ಸಾಧ್ಯೋಪಾಯವನ್ನು ತಿಳಿಯಲಿಚ್ಛೆಯಿರತಕ್ಕವರಿಗಾಗಿ ಅವರ ಅಧಿಕಾರ, ಸ್ವರೂಪ, ಪರಿಕರಗಳ ವಿಷಯದಲ್ಲಿ ಶಂಕಿತವಾದ ದೋಷಗಳನ್ನು ಇದರಲ್ಲಿ ಪರಿಹರಿಸುತ್ತಾರೆ. ಅದರಲ್ಲ ಮೊದಲು ಅಧಿಕಾರ ಗೋಚರವಾದ ವಿಚಾರವು ಮಾಡಲ್ಪಡುತ್ತೆ.

ಪ್ರಪತ್ತಿಯೆಂಬುದು ಒಂದು ವೈದಿಕಧರ್ಮ, ಅದೊಂದು ಯಾಗ ವಿಶೇಷ ವೆಂಬುದಾಗಿ ನ್ಯಾಸ ವಿದ್ಯೆಯಲ್ಲಿ ಶ್ರುತವಾಗಿದೆ. ಅದು ಹೇಗೆ ಸರ್ವಾಧಿಕಾರ ವಾಗಬಲ್ಲದು ?-ಎಂಬ ಕೆಲವರ ವಿವಾದವು ಸರ್ವೇಶ್ವರನಿಗೆ ಸರ್ವಶರಣ್ಯತ್ವನ್ನು ಪ್ರತಿಪಾದಿಸುವ ಶ್ವೇತಾಶ್ವತರಶ್ರುತ್ಯಾದ್ಯನೇಕ ಪ್ರ ಮಾ ಣ ಗ ಳಿ ಂ ದ ಪರಿ ಹೃತವಾಗಿದೆ. "ಸರ್ವಸ್ಯ ಶರಣಂ ಸುಹೃತ್......"-ಇತ್ಯಾದಿ ಶ್ರುತಿಗಳಿಂದ ಭರನ್ಯಾಸವು ಸರ್ವಾಧಿಕಾರವೆಂಬುದು ಸಿದ್ಧವಾಗಿದೆ. ಉಪಾಸನವು ತ್ರೈವರ್ಣಿ ಕಾಧಿಕಾರವಾದಾಗ್ಯೂ, ಪ್ರಪದನವು "ಸತ್ಯಂವದ, ಧರ್ಮಂಚರ-" ಇತ್ಯಾದಿ ಸತ್ಯ ನುಡಿಯುವುದು ಹೇಗೋ ಹಾಗೆ ಭರನ್ಯಾಸವೂ ಸಾಮಾನ್ಯ ಧರ್ಮ. ಅವರವರ ಅಧಿಕಾರಕ್ಕೆ ತಕ್ಕ ಹಾಗೆ ವೈದಿಕ ಮಂತ್ರದಿಂದಲೋ, ತಾಂತ್ರಿಕ ಮಂತ್ರದಿಂದಲೋ ಇದು ಎಲ್ಲರಿಗೂ ಅನುಷ್ಠಿಸಲು ಯೋಗ್ಯ. ಆದ್ದರಿಂದಲೇ ಕಾಕಾದಿಗಳೂ ಪ್ರಪನ್ನರೆಂಬುದು ಕಂಡುಬರುತ್ತೆ. "ಮಾಂ ಹಿ ಪಾರ್ಥವ್ಯ ಪಾಶ್ರಿತ್ಯಯೇಽಪಿಸ್ಯುಃ ಪಾಪಯೋನಯಃ। ಸ್ತ್ರಿಯೋವೈಶ್ಯಾಸ್ತಥಾಶೂದ್ರಾಃ ತೇಽಪಿ ಯ ನ್ತಿ ಪರಾಂಗತಿಂ,"—ಎಂಬ ಭಗವದ್ವಚನದಿಂದಲೇ ಭಗವದಾ ಶ್ರಯಣಕ್ಕೆ ಸರ್ವರಿಗೂ ಅಧಿಕಾರವುಂಟೆಂಬುದು ಸ್ಪಷ್ಟವಾಗಿದೆ. ಉಪಾಸನಕ್ಕೂ ಅದರ ಪ್ರಾರಂಭಕ್ಕೆ ತ್ರೈವರ್ಣಿಕ ಶರೀರವ ನಿಯಮವೇ ಹೊರತು ಅದರ ಅವಸಾನವು ಯಾವ ಶರೀರದಲ್ಲಿಯಾದರೂ ಆಗಬಹುದೆಂಬುದು,—"ಧರ್ಮ- ವ್ಯಾಧಾದಯೋಽಪ್ಯನ್ಯೇ ಪೂರ್ವಾಭ್ಯಾಸಾತ್ ಜುಗುಪ್ಸಿತೇ। ವರ್ಣಾವರತ್ವೇ ಸಂಪ್ರಾಪ್ತಾಃ ಸಂಸಿದ್ಧಿಂ ಶ್ರಮಣೀಯಥಾ॥"—ಎಂಬ ಶ್ರೀ ವಿಷ್ಣುಧರ್ಮ ದಲ್ಲಿಯ ಶ್ರೀಸೂಕ್ತಿಯಿಂದ ಸುವ್ಯಕ್ತ. ತ್ರೈವರ್ಣಿಕ ಶರೀರದಲ್ಲಿಯೇ ಅನುಷ್ಠಿಸ

ಬೇಕೆಂಬ ನಿಯಮ ಪ್ರಪದನಕ್ಕೆ ಕಂಡುಬಂದಿಲ್ಲ ಆದ್ದರಿಂದ ಎಂತಹ ಶರೀರದಲ್ಲಿ ಯಾದರೂ ಅದನ್ನು ಅನುಷ್ಠಿಸುವುದಕ್ಕೆ ಅಡ್ಡಿಯಿಲ್ಲ. ಶರಣ್ಯನಲ್ಲಿ ಶರಣಾಗತಿ ಮಾಡಬೇಕೆಂಬ ಜ್ಞಾನವೂ ಆಕಿಂಚನ್ಯವೂ ಉಳ್ಳ ಸರ್ವವರ್ಣದವರಿಗೂ ಪ್ರಪತ್ತಿಗೆ ಅಧಿಕಾರವಿದೆ. ಇನ್ನು ಇದರ ಸ್ವರೂಪ ವಿಚಾರ ;—ವಿಶ್ವಾಸವೇ ಪ್ರಪತ್ತಿಯೆಂದು ಕೆಲವರೆನ್ನುವರು. ಇದು ಅಧಿಕಾರ ಕೋಟಿಲ್ಲಿಯೂ ಅಂಗ ಕೋಟಿಯಲ್ಲಿಯೂ ಪ್ರವಿಷ್ಟವಾಗಿರುವುದರಿಂದ ಇದಕ್ಕೆ ಪ್ರಾಧಾನ್ಯ ಹೇಳುವುದ ರಲ್ಲಿ ಇವರ ತಾತ್ಪರ್ಯ. "ಪ್ರಪತ್ತಿರ್ವಿಶ್ವಾಸಃ ಸಕೃತ್ಪ್ರಾರ್ಥನಾಮಾತ್ರೇಣ ಅಪೇಕ್ಷಿತಂ ದಾಸ್ಯತೀತಿ ವಿಶ್ವಾಸ ಪೂರ್ವಕಂ ಪ್ರಾರ್ಥನಮಿತಿ ಯಾವತ್"-ಎಂಬ ಶ್ರೀ ಭಾಷ್ಯಕಾರರ ಶ್ರೀ ಸೂಕ್ತಿಯೂ ಪ್ರಾಧಾನ್ಯ ವಿವಕ್ಷೆಯಿಂದ ಮೊದಲು ವಿಶ್ವಾಸವನ್ನು ಹೇಳಿ, "ಅನನ್ಯಸಾಧ್ಯೇ ಸ್ವಾಭೀಷ್ಟೇ ಮಹಾ ವಿಶ್ವಾಸ ಪೂರ್ವಕಂ । ತದೇಕೋಪಾಯತಾ ಯಾಚ್ಞಾ ಪ್ರಪತ್ತಿಶ್ಶರಣಾಗತಿಃ ॥"-ಎಂಬ ಭರತಮುನಿ ಪ್ರಣೀತ ಲಕ್ಷಣವಾಕ್ಯದ ಪ್ರಕಾರ, ವಿಶ್ವಾಸ ಪೂರ್ವಕ ಪ್ರಾರ್ಥನೆಯೆಂದು ನಿಷ್ಕರ್ಷಿಸಿದೆ. ಈ ವಾಕ್ಯವೂ, ಆತ್ಮ ನಿಕ್ಷೇಪವು ಅಂಗಿ, ಮಿಕ್ಕವು ಅಂಗಗಳೆಂದು ಹೇಳುವ - "ನ್ಯಾಸಃ ಪಂಚಾಂಗಸಂಯುತಃ,–" ಇತ್ಯಾದಿ ವಚನಗಳಿಂದ ಪ್ರಾರ್ಥನೆಯೂ ಅಂಗವಾದ್ದರಿಂದ "ರಕ್ಷಾಪೇಕ್ಷಾಂ ಪ್ರತೀಕ್ಷತೇ,"-ಎಂದಿರುವಂತೆಯೇ ಈಶ್ವರನು ರಕ್ಷಾಪೇಕ್ಷೆಯನ್ನು ಮಾತ್ರವೇ ಕಾಯುತ್ತಿರುವವ ನೆಂದು ಈ ಅಂಗದ ಪ್ರಾಧಾನ್ಯವನ್ನು ವಿವಕ್ಷಿಸಿದೆ. ಹಾಗಿಲ್ಲದಿದ್ದಲ್ಲಿ, "ಸ್ನಾನಂ ಸಪ್ತವಿಧಂ ಸ್ಮೃತಂ ॥"—ಎಂಬಂತೆ, "ಷಡ್ವಿಧಾ ಶರಣಾಗತಿಃ,"—ಎ ೦ ಬ ವಚನವೂ ಆಪಾತ ಪ್ರತೀತಿಯಿಂದ ಪ್ರಪತ್ತಿಯೂ ಆರು ವಿಧವೆಂಬ ಪ್ರಸಂಗ ವೊದಗುತ್ತಿದ್ದಿತು. ಆದ್ದರಿಂದ "ನ್ಯಾಸಃ ಪಂಚಾಂಗ ಸಂಯುತಃ,"–ಇತ್ಯಾದಿ ಪ್ರಮಾಣ ಬಲದಿಂದ ಆತ್ಮ ನಿಕ್ಷೇಪವೇ ಅಂಗಿ, ಮಿಕ್ಕಿದ್ದೆಲ್ಲವೂ ಅಂಗವೆಂಬುದೇ ಯುಕ್ತ. ಪ್ರಧಾನನೆಂಬ ಭಾವನೆಯಿಂದ ರಾಜಭೃತ್ಯನನ್ನೇ ರಾಜನೆಂದು ವ್ಯವ-ಹರಿಸುವಂತೆ ವಿವಕ್ಷಾಭೇದದಿಂದ ಅಂಗಗಳಿಗೂ ಪ್ರಾಧಾನ್ಯವನ್ನು ನಿರ್ದೇಶಿಸುವು ದುಂಟು.

"ಶರಣಂ ವ್ರಜ,"—ಇತ್ಯಾದಿಗೆ ನನ್ನೊಬ್ಬನನ್ನೇ ಉಪಾಯವೆಂದು ದೃಢವಾಗಿ ನಿಶ್ಚಯಿಸಿಕೋ - ಎಂದರ್ಥವಾಗುವುದರಿಂದ ಆತ್ಮಸಮರ್ಪಣವೆಂದು

ಹೇಗಾಗುತ್ತೆ?- ಎಂದಲ್ಲಿ, "ಅಗ್ನೀಷೋಮೀಯಂ ಪಶುಮಾಲಭೇತ"—ಎಂಬ ಶ್ರುತಿಯ 'ಆಲಭತಿ' ಶಬ್ದವು ಅಗ್ನಿಷೋಮೀಯ ಯಾಗಕ್ಕೆ ಅಂಗವಾದ ಆಲಂಭನ (ಪಶು ಹಿಂಸೆ) ಪ್ರತಿಪಾದನದ ಮೂಲಕ ಯಾಗ ಪರ್ಯಂತವಾಗುವ ಹಾಗೆ, "ವ್ರಜ" ಇತ್ಯಾದಿ ಧಾತುಗಳಲ್ಲಿಯೂ ಅಂಗಭೂತ ಉಪಾಯತ್ವಾಧ್ಯವಸಾಯವು ಆತ್ಮಸಮರ್ಪಣಪರ್ಯಂತವೆನ್ನಲು ವಿರೋಧವಿಲ್ಲ. ಯಾಗವೆಂಬುದು "ಈ ದೇವತೆಗೆ ಇದು ಹವಿಸ್ಸು" ಎಂಬ ಒಂದು ಬುದ್ಧಿ ವಿಶೇಷ. ಪ್ರಕೃತವಲ್ಲಿ ಶ್ರೀಮನ್ನಾರಾಯಣ ರೂಪ ದೇವತೆಗೆ ಸ್ವಾದುತಮವಾದುದು ಸ್ವಾತ್ಮವೆಂಬ ಹವಿಸ್ಸು—ಎಂಬ ಬುದ್ಧಿ—ವಿಶೇಷವೇ ಯಾಗ. ಇದೇ ಮುಮುಕ್ಷುಗಳಿಗೆ ಸ್ವರೂಪ–ಭರ–ಫಲ–ಸಮರ್ಪಣ ರೂಪ ದಳತ್ರಯಾತ್ಮಕ. ಕೆಲವೆಡೆಗಳಲ್ಲಿ ಪ್ರ-ವೃತ್ತಿ ನಿವೃತ್ತಿಯನ್ನೂ ಭರನ್ಯಾಸವೆಂದಿರುವುದು ಅದು ಅವರ ಕಾರ್ಯವಾದ್ದರಿಂದ

ಹೀಗೆ ಅಂಗಪಂಚಕ ಸಂಪನ್ನವಾದ ಆತ್ಮ ರಕ್ಷಾಭರನ್ಯಾಸವೇ ನಿಖಿಲ ಪ್ರವೃತ್ತಿರೂಪ ಶಾಸ್ತ್ರಗಳಲ್ಲಿ ಪ್ರಧಾನವಾಗಿ ವಿಧಿಸಲ್ಪಟ್ಟಿದೆಯೆಂಬುದು ಪೂರ್ವಾಚಾರ್ಯರ ಸಿದ್ಧಾಂತ.

ಇಲ್ಲಿ ಕೆಲವರು—ಶಾಸ್ತ್ರಾರ್ಥತತ್ತ್ವವು ತಿಳಿದಾಗಲೇ ಶೇಷತ್ವಾನುಸಂಧಾನ ಮಾಡುವನಲ್ಲವೆ? "ಸ್ಥೋಜ್ಜೀವನೇಚ್ಛಾಯದಿ ತೇ ಸ್ವಸತ್ತಾಯಾಂ ಸ್ಪೃಹಾಯದಿ। ಆತ್ಮದಾಸ್ಯಂ ಹರೇಃ ಸ್ವಾಮ್ಯಂ ಸ್ವಭಾವಂಚ ಸದಾ ಸ್ಮರ॥" —ಎಂಬುದೂ, ಪರಮ ಪುರುಷಾರ್ಥವನ್ನೂ ಅವಕ್ಕೆ ಉಪಾಯಗಳನ್ನೂ ಅಪೇಕ್ಷಿಸುವಿಕೆಯೇ ಆದರೆ, ನೀನು ದಾಸನಾಗಿ ಈಶ್ವರನು ಸ್ವಾಮಿಯಾಗಿರುವುದು ಸ್ವಭಾವ ಸಿದ್ಧವೆಂದು ಅರಿತುಕೋ ಎಂದಂತೆಯಲ್ಲವೆ? ಆದ್ದರಿಂದ, ಈಗ ಆತ್ಮಸಮರ್ಪಣವೆಂದು ವಿಧೇಯ ವೊಂದುಂಟೋ? —ಎಂದು ಶಂಕಿಸುವರು. ಇದೂ, ವಾಕ್ಯಜನ್ಯಜ್ಞಾನಮಾತ್ರದಿಂದಲೇ ಮೋಕ್ಷ ಎಂಬುದರಂತೆ ಅನಾದರಣೀಯ. "ಜಿತಕೌಸ್ತುಭ ಚೌರ್ಯಸ್ಯ ಸಮ್ರಾಜಃ ಸರ್ವಪಾಪ್ಮನಾಂ। ಶಿಷ್ಟಂ ಹ್ಯಾತ್ಮಾಪಹಾರಸ್ಯ ನಿಷ್ಕೃತಿಃ ಸ್ವಭರಾರ್ಪಣಂ॥ ಪರಶೇಷತ್ವಧೀ ಮಾತ್ರಂ ಅಧಿಕಾರ ವಿಶೇಷಕಂ। ಪಶ್ಚಾದಾತ್ಮಾಪಹಾರಸ್ಯ ನಿರೋಧಾಯಚ ಕಲ್ಪತೇ ॥"-ಎಂಬಂತೆ ಶೇಷತ್ವ ಜ್ಞಾನಕ್ಕೆ – ಉಪಾಯಕ್ಕೆ ಮುಂಚೆ, ಅಧಿಕಾರ ಸಂಪಾದನೆಯೂ, ಅನಂತರ ಆತ್ಮಾಪಹಾರಾದ್ಯಪರಾಧಕ್ಕೆ ನಿರೋಧ

(ಅನುತ್ಪಾದ)ವೂ ಪ್ರಯೋಜನ. ಶೇಷತ್ವಜ್ಞಾನವಿಲ್ಲದೆ ಮೋಕ್ಷಕ್ಕಾಗಿ ವಿಹಿತವಾದ ಧರ್ಮವನ್ನು ಅನುಷ್ಠಿಸಿದಾಗ್ಯೂ, ಅದು ತಾನೇ ಶೇಷತ್ವಜ್ಞಾನವನ್ನು ಉಂಟುಮಾಡಿ ಪೂರ್ಣಾನುಷ್ಠಾನದ ಮೂಲಕ ಮೋಕ್ಷವನ್ನು ಕೊಡುತ್ತದೆ. ಆದ್ದರಿಂದ ಇಲ್ಲಿ ವಿಧಿಸಲ್ಪಟ್ಟಿರುವುದು ಶೇಷತ್ವ ಜ್ಞಾನಮಾತ್ರವೇ ಅಲ್ಲ : ಮತ್ತೇನೆಂದರೆ, ಅದರೊಂದಿಗೆ ಕೂಡಿದ ಭರಸಮರ್ಪಣೆ.

ಮತ್ತೆ ಕೆಲವರಾದರೋ-ಭಗವಂತನೇ ಉಪಾಯವೆಂಬ ನಿಶ್ಚಯ ಜ್ಞಾನವೇ ಪ್ರಪತ್ತಿ ಅದು ವಾಕ್ಯಮಾತ್ರದಿಂದಲೇ ಸಿದ್ಧವಾದ್ದರಿಂದ ಸಿದ್ಧೋಪಾಯವೆಸಿದೆ. "ಶರಣಂವ್ರಜ"–ಎಂಬಲ್ಲಿ ವ್ರಜ್-ಧಾತು ಜ್ಞಾನಾರ್ಥಕವಷ್ಟೆ !–ಎನ್ನುವರು. ಇದು ವಿಧಿಪ್ರತ್ಯಯಘಟಿತವಾದ ಶಬ್ದದ ಸ್ವಾರಸ್ಯಕ್ಕೆ ವಿರುದ್ಧ. ಅಲ್ಲದೆ ಸಪರಿಕರ ಪ್ರಪತ್ತಿಯನ್ನು ವಿಧಿಸುವ ಸ್ಫುಟತರ ಶಾಸ್ತ್ರಕ್ಕೂ ವಿರುದ್ಧ. ಪ್ರಸ್ತುತ ಭಕ್ತಿಯೋಗದಿಂದ ಪ್ರಸನ್ನನಾದ ಭಗವಂತನು ಸಿದ್ಧೋಪಾಯ ಎಂದು ಜ್ಞಾಪಿಸುವುದರಲ್ಲಿ ಮಾತ್ರವೇ ಪರ್ಯವಸಾನವಾಗುವುದು. ಆಗ್ಗೆ ಮೋಕ್ಷೋಪಾಯ ಪರವೆಂಬುದಾಗಿ ಮಾಡಿಸುವ ಆದರ ವ್ಯಾಖ್ಯಾನಕ್ಕೂ ವಿರುದ್ಧ. ವಿಧಿಯಿಲ್ಲದ್ದರಿಂದ ಪ್ರಪತ್ತಿರೂಪ ಉಪಾಯದ ಸ್ವರೂಪಚ್ಛೇದವೂ ಪ್ರಸಂಗಿಸುವುದು.

ಇನ್ನು ಕೆಲವರಾದರೋ - ಮುಮುಕ್ಷುವಿಗೆ ಸರ್ವಧರ್ಮ ಸ್ವರೂಪತ್ಯಾಗ ವಿಶಿಷ್ಟವಾದ ಸ್ವರಕ್ಷಣಾರ್ಥ ಸ್ವವ್ಯಾಪಾರ ನಿವೃತ್ತಿಯೇ ಪ್ರಪತ್ತಿಯೆಂಬುದಾಗಿ ಚರಮ ಶ್ಲೋಕದಿಂದ ವಿಧಿಸಲ್ಪಟ್ಟಿದೆ. ವಿಶೇಷ್ಯವಾದ ನಿವೃತ್ತಿಯಲ್ಲಿ ವಿಧಿ ಸಂಭವವಿಲ್ಲದ್ದರಿಂದ. "ಸವಿಶೇಷಣೇಹಿ ವಿಧಿ ನಿಷೇಧೌ ವಿಶೇಷ್ಯ ಬಾಧೇ ವಿಶೇಷಣಮುಪ ಸಂಕ್ರಾಮತಃ"– ಎಂಬ ನ್ಯಾಯದಿಂದ ವಿಶೇಷಣವಾದ ಸರ್ವ ಧರ್ಮ ಸ್ವರೂಪ ತ್ಯಾಗದಲ್ಲಿ ಮಾತ್ರವೇ ವಿಧಿಯು ಪರ್ಯವಸಾನ ಹೊಂದಿದೆ. ಅದೇ ಸಾಧ್ಯೋಪಾಯವಾಗಿ ವಿಹಿತವಾಗಿದೆ—ಎನ್ನುತ್ತಾರೆ. ಇಲ್ಲಿ ನಿವೃತ್ತಿಯೇ ವಿಶೇಷ್ಯವಾದರೂ ಅದಕ್ಕಾಗಿ ಯತ್ನಿಸಬೇಕಾದ್ದು ಅಗತ್ಯವಾದ್ದರಿಂದಲೂ—ಆಗ್ಗೆ ಸಾಧ್ಯವೆಂಬುದಾಗಿ ವಿಹಿತವಾದ ಸರ್ವ ಧರ್ಮ ಸ್ವರೂಪತ್ಯಾಗವೇ ಸ್ವರಕ್ಷಣಾರ್ಥ ಸ್ವವ್ಯಾಪಾರವಾದ್ದರಿಂದಲೂ ಅವರಿಗೆ ಸ್ವವಚನ ವಿರೋಧ ಮತ್ತು ಸಾಂಗ ಪ್ರಪದನವನ್ನು ವಿಧಿಸುವ ಶಾಸ್ತ್ರಕ್ಕೂ ವಿರೋಧವೆಂದು ತಿಳಿಯತಕ್ಕದ್ದು.

ಇಲ್ಲಿ ಕೆಲವರು - ಪ್ರಪತ್ತಿಯು ಸಾಧನವೋ ಅಥವಾ ಸಿದ್ಧಸಾಧನ ಸಹಕಾರಿಯೋ ಆದಲ್ಲಿ. ಸಿದ್ಧೋಪಾಯನಾದ ಈಶ್ವರನಲ್ಲಿ ನಿಷ್ಠವಾದ ಏಕತ್ವ, ಸಿದ್ಧತ್ವ, ಪರಮ ಚೇತನತ್ವ, ಪರಮಕಾರುಣಿಕತ್ವಶ ಸರ್ವಶಕ್ತತ್ವ, ನಿರಪೇಕ್ಷತ್ವವೇ ಮೊದಲಾದ ಸ್ವಭಾವ ವಿಶೇಷಕ್ಕೆ ವಿರುದ್ಧ—ಎನ್ನುತ್ತಾರೆ. ಇದೂ ಶ್ರುತಿ-ಸ್ಮೃತಿ ಮುಂತಾದುವುಗಳಿಗೆ ವಿರುದ್ಧ. ಅಲ್ಲದೆ ಭಕ್ತಿಗೆ ಸಾಧನತ್ವವೇ ಇಲ್ಲವೆಂದಾಗುವುದು. ಮೋಕ್ಷಕ್ಕೆ ಸಾಧನವಾದ ಉಪಾಸನದ ಪರವಾಗಿ ಚರಮಶ್ಲೋಕದಲ್ಲಿಯ 'ಧರ್ಮ'-ಶಬ್ದಕ್ಕೆ ವ್ಯಾಖ್ಯಾನಮಾಡಿರುವುದರಿಂದ ಇದು ಇಷ್ಟಾಪತ್ತಿಯೂ ಆಗದು, ಒಂದು ಎತ್ತಿನ ಕೊಬ್ಬನ್ನು ಅಡಗಿಸಿ ವಶಕ್ಕೆ ತರುವುದಕ್ಕಾಗಿ ಮರಳಿನ ಭಾರವನ್ನು ಅದರ ಮೇಲೆ ಹೇರುವಂತೆ ಉಪಾಯವಲ್ಲದವುಗಳನ್ನು ಉಪಾಯವಾಗಿ ಉಪದೇಶಿಸಿ ಅರ್ಜುನನ ಬುದ್ಧಿಗೆ ವಿಷಯಗಳಾದ ಅಧರ್ಮಗಳೂ ಧರ್ಮಶಬ್ದದಿಂದ ಅನುವಾದ ಮಾಡಲ್ಪಟ್ಟಿವೆಯೆಂದಲ್ಲಿ. ಪರಮಧರ್ಮಗಳೆಂಬುದಾಗಿ ಪ್ರಸಿದ್ಧಗಳಾದ ಕರ್ಮಯೋಗಾದಿ ನಿವೃತ್ತಿಧರ್ಮಗಳೂ ಅಧರ್ಮವೆಂದ ಮೇಲೆ ಪ್ರವೃತ್ತಿಧರ್ಮಗಳೂ ಸುತರಾಂ ಅಧರ್ಮಗಳೆಂದಾಗಿ ಸಕಲಶಾಸ್ತ್ರಗಳಿಗೂ ವ್ಯಾಕುಲವು ಪ್ರಸಂಗಿಸುತ್ತೆ.

ಆದರೂ, ಉಪಾಸನಾದಿಗಳ ಹಾಗೆ ಶರಣವರಣವೂ ಧರ್ಮವೆನಿಸುವುದರಿಂದ ಇಲ್ಲಿ 'ಸರ್ವ' ಶಬ್ದಕ್ಕೆ ಸಂಕೋಚಬಾರದಿರುವುದಕ್ಕಾಗಿ ಇದೂ ಸಾಧನತ್ವರೂಪದಿಂದ ತ್ಯಾಜ್ಯವಲ್ಲವೆ ? ಆದ್ದರಿಂದ ಪ್ರಪತ್ತಿಗೂ ಸಾಧನತ್ವವನ್ನಾಗಲಿ ಸಿದ್ಧಸಾಧನಕ್ಕೆ ಸಹಕಾರಿತ್ವವನ್ನಾಗಲಿ ಸ್ವೀಕರಿಸಬೇಕು - ಎಂದರೆ - ಇಲ್ಲಿ ಪ್ರಪತ್ತಿಗೆ ಸಾಕ್ಷಾತ್ ಸಾಧನವೆಂಬ ಬುದ್ಧಿ ತ್ಯಾಜ್ಯವೋ ಅಥವಾ ಪರಂಪರೆಯಾಗಿ (ಪ್ರಸಾದನತ್ವವೇಷದಿಂದ) ಸಾಧನವೆಂಬ ಬುದ್ಧಿ ತ್ಯಾಜ್ಯವೋ ? — ಇಲ್ಲ ಸಾಕ್ಷಾತ್ ಸಾಧನವೆಂಬ ಬುದ್ಧಿಯನ್ನು ಬಿಡಬೇಕೆಂದಲ್ಲಿ ಇದು ಭಕ್ತಿಯೋಗಾದಿಗಳಿಗೂ ತುಲ್ಯ. ಪ್ರಸಾದನತ್ವರೂಪದಿಂದಲೂ ಧರ್ಮವಲ್ಲವೆಂದಲ್ಲಿ "ಸರ್ವ" —ಶಬ್ದಕ್ಕೆ ಸಂಕೋಚವಾಗದಿರುವುದಕ್ಕಾಗಿ 'ಕೃಷ್ಣಂ' ಧರ್ಮಂ ಸನಾತನಂ,— ಇತ್ಯಾದಿಗಳಲ್ಲಿಯಂತೆಯೇ ಧರ್ಮವಾದ ಸಿದ್ಧೋಪಾಯದಲ್ಲಿಯೂ ಸಾಧನವೆಂಬ ಬುದ್ಧಿಯನ್ನು ಬಿಡಬೇಕೆಂದಾದೀತು. ಈ ವಾಕ್ಯದಲ್ಲಿ ಪ್ರತಿಪಾದ್ಯವಾದ ಧರ್ಮವನ್ನು ಬಿಟ್ಟು ಮಿಕ್ಕ ಧರ್ಮಗಳಲ್ಲವೇ ತ್ಯಾಜ್ಯಗಳು ?—ಎಂದಲ್ಲಿ ಇದು ಇಲ್ಲಿ ವಿಧಿಸಲ್ಪಟ್ಟಿರುವ ಶರಣಾಗತಿಗೂ ತುಲ್ಯ-ಹಾಗಾದರೆ-ಭಕ್ತಿ ಪ್ರಪತ್ತಿಗಳೆ

ರವೂ ಸಾಕ್ಷಾತ್ ಸಾಧನಗಳಾಗದುದರಿಂದ, ಸಿದ್ಧೋಪಾಯಕ್ಕೆ ಉಪಕಾರ ಗಳೆನ್ನಬೇಕು. ಅದೂ - ಉತ್ಪಾದಕವಾಗಿಯಲ್ಲ - ಏಕೆಂದರೆ ಸಿದ್ಧೋಪಾಯವು ನಿರುಪಾಧಿಕ ನಿತ್ಯವಾದುದಷ್ಟೆ ! ವರ್ಧಕವಾಗಿಯೂ ಅಲ್ಲ - ಅದು ಉಪಚಯ ರಹಿತವಾದುದಷ್ಟೆ ! ಸದಾ ಪರಿಪೂರ್ಣ ಸಹಜಕಾರುಣ್ಯವುಳ್ಳದ್ದರಿಂದ ಸಹಕಾರಿ ಯಾಗಿಯೂ ಅಲ್ಲ. ದ್ವಾರನಿರಪೇಕ್ಷವಾಗಿಯೇ ಕಾರ್ಯೋತ್ಪಾದಕ ಸಮರ್ಥ ಸತ್ಯಸಂಕಲ್ಪವುಳ್ಳೋಣದರಿಂದ, ಅದಕ್ಕೆ ದ್ವಾರವಾಗಿಯೂ ಅಲ್ಲ–ಮತ್ತೇ ನೆಂದರೆ - ಅನಾದ್ಯಪಚಾರ ಪರಂಪರಾಮೂಲವಾದ ಸಂಸಾರಕ್ಕೆ ಹೇತುವಾದ ನಿಗ್ರಹದ ಉಪಶಮನದ್ವಾರಾ ಭಕ್ತಿಪ್ರಪತ್ತ್ಯಾದಿಯು ಸಿದ್ಧೋಪಾಯಕ್ಕೆ ಉಪಕಾರವೆಂಬುದು ತತ್ತ್ವ.

ಹೀಗೆ ಮುಮುಕ್ಷುವಿಗೆ ಸರ್ವಾನಿಷ್ಟ ನಿವೃತ್ತಿ ಪೂರ್ವಕ ಪರಿಪೂರ್ಣ ಕೈಂಕರ್ಯಪರ್ಯಂತವಾದ ಫಲಪರಂಪರೆಯೆಲ್ಲವೂ ಸಿದ್ಧೋಪಾಯದಿಂದ ಸಾಧ್ಯವೂ, ಪ್ರಸಾದನರೂಪ ಸಾಧ್ಯೋಪಾಯ ಮೂಲವೂ ಆದ್ದರಿಂದ ಸಕಲಪ್ರಮಾಣ ಗಳೂ ಸುಸಂಗತಗಳು. ಲೋಕದಲ್ಲಿ ತನ್ನನ್ನು ತನ್ನಿಂದಲೇ ರಕ್ಷಿಸಿಕೊಳ್ಳಲು ಸಮರ್ಥನಲ್ಲದವನು ಸಂನಿಹಿತನೂ ರಕ್ಷಣ ಸಮರ್ಥನೂ ಆದವನನ್ನು ತಾನೇ ಆಶ್ರಯಿಸುತ್ತಾನೆ. ಹಾಗೆಯೇ ಸ್ವಸ್ವರೂಪ-ಪರಸ್ವರೂಪಗಳನ್ನು ಸಿದ್ಧಪರ ವಾದ ಶಾಸ್ತ್ರದಿಂದ ತಿಳಿಯುತ್ತಾನೆ-ತಾನಾಗಿಯೇ ಆ ಸಿದ್ಧ ವಸ್ತುವನ್ನು ಆಶ್ರಯಿ ಸುತ್ತಾನೆ. ಹೀಗೆ ರಾಗದಿಂದಲೇ ಶರಣವರಣದಲ್ಲಿ ಪ್ರವೃತ್ತಿ ಸಂಭವವಾದ್ದ ರಿಂದ, ಇದನ್ನು ಶಾಸ್ತ್ರವು ವಿಧಿಸಬೇಕೆ ? - ಎಂದಲ್ಲಿ, ಲೌಕಿಕಾಶ್ರಯಣದಲ್ಲಿಯೂ ಆಶ್ರಯಿಸಬೇಕಾದ ಪ್ರಕಾರವನ್ನು ತಿಳಿಯಬೇಕಾಗಿರುವಂತೆ, ಅಲೌಕಿಕಾಶ್ರಯ ದಲ್ಲಿಯೂ. ಈ ಪ್ರಕಾರವಾಗಿ ಆಶ್ರಯಿಸಿದಲ್ಲಿ ಇಂತಹ ಅಧಿಕಾರಿಯನ್ನು ಭಗವಂತ ಸ್ವೀಕರಿಸುವನೆಂದು ತಿಳಿಯುವುದು ಆವಶ್ಯಕ - ಇದನ್ನು ಕರ್ತವ್ಯ ಪರವಾದ ಶಾಸ್ತ್ರದಿಂದಲೇ ತಿಳಯಬೇಕು. ಉಪಾಸನ – ಪ್ರಪದನಗಳಿಗೆ ಸಮರ್ಥಾಸಮರ್ಥರು ಯಾರೆಂಬುದನ್ನೂ ಅನುಮಾನದಿಂದ ತಿಳಿಯಲಾಗದು. ರಾಜಸೇವೆಯಲ್ಲಿಯಂತೆ, ಭಗವತ್ಸೇವೆಗೆ ಮಾಲಾಕಾರಣ - ದೀಪಾರೋಪಣಾದಿ ಗಳನ್ನು ಇಷ್ಟಬಂದಂತ ನಡೆಯಿಸಿದಲ್ಲಿ ಪ್ರತ್ಯವಾಯವುಂಟು - ಅದರ ಪರಿಹಾರ ಕ್ಕಾಗಿ ಶಾಸ್ತ್ರವನ್ನು ಅನುಸರಿಸುವಂತೆ, ಸದಾಚಾರ್ಯೋಪದೇಶ ಮಂತ್ರ ವಿಶೇಷಾದಿ ಪರಿಕರಗಳ ಸಹಿತ ಪ್ರಪತ್ತಿ-ತತ್ಫಲಗಳ ಸಾಧ್ಯ ಸಾಧನಭಾವ ಮತ್ತು

ಅನುಷ್ಠಾನ ಪ್ರಕಾರಗಳಿಗೆ ಶಾಸ್ತ್ರವನ್ನೇ ಅನುಸರಿಸಬೇಕು. ಆದ್ದರಿಂದ ಪ್ರಪತ್ತಿಯನ್ನು ವಿಧಿಸಬೇಕಾಗಿಲ್ಲವೆಂಬವಾದವು ನಿರ್ಮೂಲ. ಹಾಗೆಯೇ, ಆತ್ಮಸ್ವರೂಪವು ನಿತ್ಯವಾದ್ದರಿಂದಲೂ, ಭಗವದಧೀನ ಕೃರ್ತೃತ್ವವು ಜೀವಾತ್ಮನಿಗೆ ಉಂಟೆಂಬುದರಿಂದಲೂ, ನಿಷಿದ್ಧಕಾಮ್ಯಗಳಂತೆ ಬಂಧಕವಲ್ಲದ್ದರಿಂದಲೂ, ಉಪಾಸನಾದಿಗಳು ಸ್ವರೂಪವಿರುದ್ಧವೆಂಬುದೂ ಸರಿಯಲ್ಲ.

ದೇಹಾತ್ಮ ವಿವೇಕವುಳ್ಳವರಿಗೇಯೇ ಪಾರಲೌಕಿಕ ಧರ್ಮದಲ್ಲಿ ಅಧಿಕಾರವಾದ್ದರಿಂದ, ಆ ಅಧಿಕಾರವು ಬ್ರಾಹ್ಮಣ್ಯಾದಿ ವಿಶಿಷ್ಟ ಶರೀರ ಸಂಬಂಧವೇ ಹೊರತು ಸ್ವರೂಪದಲ್ಲಿ ಬ್ರಾಹ್ಮಣ್ಯಾದಿ ಭ್ರಮವು ಅಧಿಕಾರವಲ್ಲದ್ದರಿಂದ ದೇಹಾತ್ಮ ವಿವೇಕವುಳ್ಳವರಿಗೆ ತಾನು ಬ್ರಾಹ್ಮಣ-ಕ್ಷತ್ರಿಯ ಇತ್ಯಾದಿ ಅಹಂಕಾರ ಗರ್ಭತ್ವಾರೋಪದ ಮೂಲಕ ಉಪಾಸನಾದಿಗಳು ಸ್ವರೂಪ ವಿರುದ್ಧವೆಂಬುದೂ ಅಪಹಾಸ್ಯ.

ಅತ್ಯಂತ ಪರತಂತ್ರನೂ ಅತ್ಯಂತ ಅಶಕ್ತನೂ ಆದವನಿಗೆ ಸ್ವರಕ್ಷಣಕ್ಕಾಗಿ ಕರ್ತವ್ಯವಾಗಿ ಭಕ್ತಿಯೋಗಾದಿ ಉಪಾಯವನ್ನು ವಿಧಿಸುವುದು ಶೇಷತ್ವಕ್ಕೆ ಅನನುರೂಪವೂ ಪರತಂತ್ರ್ಯಕ್ಕೆ ವಿರುದ್ಧವೂ ಆದ್ದರಿಂದ ಅಸಂಭಾವಿತವೆಂದಲ್ಲಿ ಅನೇಕಾನರ್ಥಗಳು ಪ್ರಸಂಗಿಸುವುವು. ಮೋಕ್ಷೋಪಾಯವನ್ನು ವಿಧಿಸುವ ಶಾಸ್ತ್ರಕ್ಕೆ ಅರ್ಥವಿಲ್ಲದೆ ಹೋಗುವುದು - ಭಗವತ್ಪ್ರೀತಿಯನ್ನೇ ಫಲವಾಗಿಯುಳ್ಳ ಕೈಂಕರ್ಯಾನುಷ್ಠಾನ - ಪ್ರಪದನಾನುಷ್ಠಾನದಲ್ಲಿಯೂ, ಸ್ವರೂಪ ವಿರುದ್ಧವೆಂಬ ಬುದ್ಧಿಯಿಂದ ಅನಧಿಕಾರ ಪ್ರಸಂಗಿಸುವುದು - ಆದ್ದರಿಂದ ಶೇಷತ್ವವೂ ಪಾರತಂತ್ರ್ಯವೂ ಭಗವಂತನಿಂದ ಪ್ರದತ್ತವಾದ ಮರ್ಯಾದೆಯಿಂದ ಅವನ ಅಭಿಮತಾನುಷ್ಠಾನದ ಮೂಲಕ ಅವನ ಕೈಂಕರ್ಯ ಲಾಭಕ್ಕೇ ಔಪಯಿಕವಾದದ್ದು, ವಿರುದ್ಧವಲ್ಲ.

ಪರಮಾತ್ಮನಿಗೆ ವಿಶೇಷಣಗಳಾದ ದೇವತಾವಾಚಕ ಅಗ್ನೀಂದ್ರಾದಿ ಶಬ್ದಗಳೂ ಕೆಲವು ವಿಶೇಷ್ಯ ಪರ್ಯಂತವಾದ್ದರಿಂದಲೂ, ಕೆಲವು ಸಾಕ್ಷಾತ್ತಾಗಿಯೂ ಭಗವದ್ವಾಚಕಗಳಾದ್ದರಿಂದಲೂ ಹಾಗೆ ನೆನೆದು ಫಲಾಭಿಸಂಧಿರಹಿತವಾಗಿ ಸ್ವಧರ್ಮಾನುಷ್ಠಾನ ಮಾಡಿದಲ್ಲಿ ಪಾರಮೈಕಾಂತ್ಯಕ್ಕೆ ವಿರೋಧವೂ ಅಲ್ಲ.

ಭಕ್ತಿ - ಪ್ರಪತ್ತಿಗಳು ಸಂಕಲ್ಪಭೇದದಿಂದ ಐಶ್ವರ್ಯ ಮೋಕ್ಷಾದಿ ರೂಪ ವಿರುದ್ಧ ಫಲ ಸಾಧನಗಳೆಂಬುದೂ ಸರಿಯಲ್ಲ - ಒಂದೇ ಬೀಜವು ಬಿತ್ತುವವನ

ಅಭಿಸಂಧಿ ಭೇದದಿಂದವಿಜಾತೀಯ ಅಂಕುರ ಜನನದಲ್ಲಿ ಸಮರ್ಥವಾದೀತೆ? —ಎಂದಲ್ಲಿ - ಧಾರ್ಮಿಕನೂ ಮಹೋದಾರನೂ ಆದ ರಾಜನಿಂದ, ಅವನಿಗೆ ಒಂದು ರತ್ನವನ್ನು ಮಾರಿ ಪಡೆಯುವ ಲಾಭಕ್ಕಿಂತ ಉಪಹಾರ ಬುದ್ಧಿಯಿಂದ ಸಮರ್ಪಿಸಿದಲ್ಲಿ ಅವನ ನಿರತಿಶಯ ಸಂತೋಷಕ್ಕೆ ಪಾತ್ರರಾಗಿ ಇನ್ನೂ ಅತಿಶಯ ಲಾಭವನ್ನು ಪಡೆಯಬಹುದಲ್ಲವೆ? ಹಾಗೆಯೇ ಪ್ರಬಲ ಪ್ರಮಾಣವಾದ ಶಾಸ್ತ್ರದಿಂದಲೇ ತಿಳಿಯಬೇಕಾದ ಈ ವಿಷಯದಲ್ಲಿ ಕೇವಲ ನ್ಯಾಯವನ್ನು ತರಕೂಡದು. "ನಹಿ ವಚನ ವಿರೋಧೇ ನ್ಯಾಯಃ ಪ್ರವರ್ತತೇ"—ಎಂದಿದೆಯಷ್ಟೆ! ಹಾಗೆಯೇ ಈ ಪ್ರಪತ್ತಿ ಭಕ್ತಿಗಳೆರಡೂ ಪ್ರಯೋಜನಾಂತರಪರರಿಗೆ ಪ್ರವೃತ್ತಿ ಧರ್ಮದ ಕೋಟಿಯಲ್ಲಿ ನಿಲ್ಲುವುದು. ಭಗವಚ್ಛರಣಾರ್ಥಿಗಳಿಗೆ ನಿವೃತ್ತಿ ಧರ್ಮಗಳಾಗುವುವು. ಈ ಅರ್ಥವು ನಿತ್ಯನೈಮಿತ್ತಿಕಾದಿಗಳಿಗೂ ಸಮಾನ.

ಇನ್ನು ಕೆಲವರು ದೃಷ್ಟಾರ್ಥ ಪ್ರಪತ್ತಿಗಳಲ್ಲಿ ಕೆಲವು ಫಲಿಸದಿರುವುದನ್ನು ಕಂಡು ಸಕಲ ಫಲ ಸಾಧನವಾದ ಪ್ರಶಸ್ತಿಯಲ್ಲಿ ಅತಿ ಶಂಕೆ ಮಾಡುವರು. ಹಾಗೆ ಕೆಲವು ಫಲಿಸದಿರಲು ಕಾರಣ—ಇತರ ಶಾಸ್ತ್ರಾರ್ಥಗಳಲ್ಲಿಯಂತೆಯೇ ಪ್ರಪತ್ತಿಯಲ್ಲಿಯೂ ಕರ್ಮ-ಕರ್ತೃ-ಸಾಧನ ವೈಗುಣ್ಯವೆಂಬದನ್ನು ಅವರು ತಿಳಿದುಕೊಳ್ಳಬೇಕು. ಕರ್ಮವೈಗುಣ್ಯ - ಮಹಾವಿಶ್ವಾಸಾದಿಗಳಲ್ಲಿ ನ್ಯೂನತೆ. ಕರ್ತೃವೈಗುಣ್ಯ—ಪ್ರಪತ್ತಿಗೆ ಹೇಳಿದ ಅಧಿಕಾರದಲ್ಲಿ ನ್ಯೂನತೆ. ಸಾಧನ ವೈಗುಣ್ಯ ಶಾಸ್ತ್ರದ ಪ್ರಕಾರ ಪ್ರಪತ್ತ್ಯನುಷ್ಠಾನಕ್ಕೆ ಮೂಲವಾದ ಸದುಪದೇಶಾದಿಗಳಿಲ್ಲದಿರುವುದು. ಈ ವೈಗುಣ್ಯಗಳಿಲ್ಲದೆ ಪ್ರಪತ್ತಿಯನ್ನು ಅನುಷ್ಠಿಸಿದಾಗ ಅದಕ್ಕೆ ಕೋರಿದ ದೃಷ್ಟ ಫಲಗಳೂ ಸಿದ್ಧಿಸುವುದು ಕಂಡುಬಂದಿದೆ.

ಮತ್ತೆ ಕೆಲವರು—ಸರ್ವ ಶಾಸ್ತ್ರ ಪ್ರವರ್ತಕರಾದ ವ್ಯಾಸ ಪ್ರಭೃತಿಗಳು "ಧ್ಯೇಯೋ ನಾರಾಯಣಸ್ಸದಾ" — "ಹರಿರೇವಸದಾ ಧ್ಯೇಯಃ, ಸ್ಮರ್ತವ್ಯಸ್ಸತತಂ ವಿಷ್ಣುಃ"—ಇತ್ಯಾದಿ ವಚನಗಳಿಂದ ಭಕ್ತಿಯನ್ನೇ ಮೋಕ್ಷಕ್ಕೆ ಸಾಧನವನ್ನಾಗಿ ಉಪದೇಶಿಸಿರುವುದರಿಂದ, ಚರಮ ಶ್ಲೋಕವೂ ಕೂಡ, "ಮಾಮೇವ ಯೇ ಪ್ರಪದ್ಯನ್ತೇ"-ಇತ್ಯಾದಿಯಂತೆ ಅಂಗ ಪ್ರಪತ್ತಿಯನ್ನೇ ವಿಧಿಸಿದೆಯೇ ಹೊರತು ಸ್ವತಂತ್ರ ಪ್ರಪತ್ತಿಯನ್ನಲ್ಲವೆನ್ನುವರು. ಇವರಿಗೆ ಉತ್ತರ—"ಶರಣಂ ತ್ವಾಂ ಪ್ರಪನ್ನಾಯೇ ಧ್ಯಾನಯೋಗ ವಿವರ್ಜಿತಾಃ।"— ಇತ್ಯಾದಿ ಪ್ರಮಾಣ

ಗಳಿಂದ ಸ್ವತಂತ್ರ ಪ್ರಪತ್ತಿ ಸಿದ್ಧವಾಗಿರಲಾಗಿ, 'ಧ್ಯೇಯೋನಾರಾಯಣಸ್ಸದಾ' –ಇತ್ಯಾದಿ ವಚನಗಳು ಅರೋಗನಿಗೆ ಕ್ಷೀರಪಾನದಂತೆ ಸ್ವಯಂ ಪ್ರಯೋಜನ ವಾಗಿ ಪ್ರಪನ್ನನಿಗೂ ಅನ್ವಯಿಸುತ್ತದೆಯೆಂಬದು.

ಆದ್ದರಿಂದ ಸಕಲ ಫಲ ಸಾಧನವೆಂಬುದಾಗಿ ಭಗವಚ್ಛಾಸ್ತ್ರಾದಿಗಳಲ್ಲಿ ವಿಹಿತವಾದ ಪ್ರಪದನವನ್ನು ಭಕ್ತಿಯೋಗಾರಂಭಕ್ಕೆ ವಿರೋಧಿಯಾದ ಪಾಪಗಳ ನೀಗುವಿಕೆಗೆ ಉದಾಹರಣ ವಿಶೇಷಪರವನ್ನಾಗಿ ಭಗವಾನ್ ಭಾಷ್ಯಕಾರರು ಅಪ್ಪಣೆ ಕೊಟ್ಟಿದ್ದಾರೆ. ಆದ್ದರಿಂದ ಭಾಷ್ಯ ಗ್ರಂಥಕ್ಕೂ ಗದ್ಯ ಸ್ತುತಿಗೂ ವಿರೋಧವಿಲ್ಲದ್ದರಿಂದ ಸರ್ವವೂ ಸುಸಂಗತ.

## ೨೫. ಪ್ರಭಾವ ವ್ಯವಸ್ಥಾಧಿಕಾರ

ಹೀಗೆ ಸಿದ್ಧೋಪಾಯ ಸಾಧ್ಯೋಪಾಯ ಸಂಬಂಧವಾದ ವ್ಯಾಮೋಹ ವನ್ನು ಪರಿಹರಿಸಲಾಯಿತು. ಮುಂದೆ, ಈ ಉಪಾಯ ವಿಶೇಷದಲ್ಲಿ ನಿಷ್ಠನಾ ದವನ ಪ್ರಭಾವದ ಅತಿರೇಕ-ಅನತಿರೇಕ(ಆಧಿಕ್ಯ–ನ್ಯೂನತೆ)ಗಳನ್ನು ಬೋಧಿಸುವ ಪ್ರಮಾಣಗಳ ವಿಚಾರದಿಂದ ಹೊರಡುವ ಕೆಲವು ಶಂಕೆಗಳು ಪರಿಹರಿಸಲ್ಪಡು ತ್ತವೆ. ಮೊದಲು ಜಾತಿ ವ್ಯವಸ್ಥೆಯ ಬಗ್ಗೆ—

"ನ ಶೂದ್ರಾ ಭಗವದ್ಭಕ್ತಾಃ ವಿಪ್ರಾ ಭಾಗವತಾಃ ಸ್ಮೃತಾಃ। ಸರ್ವವ ರ್ಣೇಷು ತೇ ಶೂದ್ರಾ ಯೇಹ್ಯಭಕ್ತಾ ಜನಾರ್ದನೇ॥" ಎಂದು, ಭಗವದ್ಭಕ್ತಿ ಯೆಂಬ ಗುಣವಿಶೇಷವುಳ್ಳ ಕೆಳ ಜಾತೀಯರನ್ನು ಮೇಲ್ಜಾತಿ ವಾಚಕ ಶಬ್ದ ದಿಂದಲೂ, ಅದಿಲ್ಲದ ಮೇಲ್ ಜಾತೀಯರನ್ನು ಕೆಳ ಜಾತಿ ವಾಚಕ ಶಬ್ದ ದಿಂದಲೂ ಹೇಳಿರುವುದು. ಇದರ ಅರ್ಥವನ್ನು ಆಪಾತತಃ ಗ್ರಹಿಸಿದ ಕೆಲವು ಮೃದು ಪ್ರಜ್ಞರು ಭಗವದ್ಭಕ್ತರೆಲ್ಲರೂ ಒಂದೇ ಜಾತೀಯರಲ್ಲವೆ?—ಎಂದು ತಿಳಿದಿರುವರು. ಹೀಗಾದಲ್ಲಿ, ಭಾಗವತ ಬ್ರಾಹ್ಮಣನು ಹೀಗೆ ವರ್ತಿಸುವನು. ಭಾಗವತ ಶೂದ್ರನು ಹೀಗೆ ವರ್ತಿಸುವನು—ಎಂದು ಪ್ರತ್ಯೇಕ ಪ್ರತ್ಯೇಕವಾಗಿ ಆಚಾರ ನಿಯಮಗಳನ್ನು ಹೇಳುವ ಶಾಸ್ತ್ರಗಳಿಗೆ ವಿರೋಧವಾಗುವುದು, ಕೇವಲ ಬ್ರಾಹ್ಮಣನಿಗೂ ಕೇವಲ ಶೂದ್ರನಿಗೂ ಇರುವ ಜಾತಿ ವ್ಯವಸ್ಥೆಯನ್ನು ಭಾಗವತ ಬ್ರಾಹ್ಮಣನಿಗೂ ಭಾಗವತ ಶೂದ್ರನಿಗೂ ಸ್ವೀಕರಿಸಬೇಕೆಂದೂ. ಇವರು ಸಮರು ಎಂಬ ಶಾಸ್ತ್ರಗಳಿಗೆ ಪರಮ ಪುರುಷಾರ್ಥದಲ್ಲಿ ಸಾಮ್ಯ ಹೇಳು

ವುದರಲ್ಲಿ ತಾತ್ಪರ್ಯವೆಂದೂ ಶ್ರೀ ಕಿಡಾಂಬಿ ಅಪ್ಪುಳ್ಳಾರ್‌ರವರು ಹೇಳಿದ್ದಾರೆ. ಜನ್ಮದಿಂದಲೂ ವೃತ್ತದಿಂದಲೂ ಕೀಳಾದವನೊಬ್ಬನಿಗೆ ಭಗವತ್ಸಂಬಂಧ ವುಂಟಾದಲ್ಲಿ, ಜನ್ಮವೃತ್ತಗಳುಳ್ಳವನು ಅವನನ್ನು ನಿಕೃಷ್ಟವಾಗಿ ನೆನೆಯಬಾರದು. ಇದು ಭಗವತ್ಪ್ರಭಾವದ ರೀತಿ. ಆದರೆ ಅವರೊಂದಿಗೆ ವಿವಾಹಾದಿ ಸಂಬಂಧ ನಡೆಯುವುದಿಲ್ಲವಲ್ಲ! – ಎಂದರೆ ಅದು ಜಾತಿ ನಿಬಂಧನ; ಶ್ಲಾಘಿಸುವುದೆಂಬುದು ಗುಣನಿಬಂಧನವೆಂದು ನಿಷ್ಕರ್ಷಿಸಿದ್ದಾರೆ. "ಕುಲನ್ತರುಮ್." ಎಂಬುದೂ. "ಪಣ್ಡೈ ಕುಲತ್ತೈತ್ತವಿರ್‌ನ್ದು"...... ಎಂಬುದೂ ತೊಣ್ಡ (ಭಗವದ್ದಾಸ) ಕುಲದಲ್ಲಿ ಉತ್ಕರ್ಷವನ್ನು ಹೇಳುತ್ತವೆ 'ಕುಲ-ಶಬ್ದವೂ 'ಜಾತಿ'–ಶಬ್ದವೂ ಭಿನ್ನಾರ್ಥಕಗಳಾದ್ದರಿಂದ, ಭಾಗವತನಿಗೂ ಕುಲವು ಭೇದಿಸಿದಾಗ್ಯೂ ಜಾತಿಯು ಭೇದವಾಗದು, ದೇವಸ್ಥಾನಕ್ಕೆ ಸೇರಿದ ಹಸುವಾದರೂ ಪಶುಸಾಮಾನ್ಯದಂತಿಲ್ಲದೆ, ಭಗವತ್ಸಂಬಂಧದ ಪ್ರಯುಕ್ತ ಮಹಾ ಪ್ರಭಾವವುಳ್ಳದ್ದಾದಾಗ್ಯೂ, ಗೋತ್ವಜಾತಿಯು ಅದಕ್ಕೆ ಹೋಗುವುದೆ? ಆದ್ದರಿಂದ ಭಗವದ್ಭಕ್ತರಲ್ಲದ ಬ್ರಾಹ್ಮಣರು ಶೂದ್ರರ ಹಾಗೆ ಅನಾದರಣೀಯರೆಂದೂ ಭಗವದ್ಭಕ್ತರಾದ ಶೂದ್ರರು ಬ್ರಾಹ್ಮಣರ ಹಾಗೆ ಶ್ಲಾಘನೀಯರೆಂದೂ ಶಾಸ್ತ್ರ ತಾತ್ಪರ್ಯ - "ಪ್ರತಿಪತ್ತಿ ವಿಶೇಷಾರ್ಥಂ ಅನ್ಯತ್ರಾನ್ಯತ್ವಕೀರ್ತನಂ! ವಿಶೇಷ ವಿಧಿಸಾಕಾಂಕ್ಷಾಃ ತತ್ರ ತತ್ತತ್ಪ್ರವೃತ್ತಯಃ ||",—ಎಂದಿದೆಯಷ್ಟೆ! ಇಲ್ಲಿ ಪ್ರತಿಪತ್ತಿ' - ಯೆನ್ನುವುದಕ್ಕೆ ಪ್ರಣಾಮಾದಿಗಳಿಲ್ಲದೆ ಕೇವಲ ಮಾನಸ ಪ್ರತಿಪತ್ತಿಯೆಂದು ವ್ಯಾಖ್ಯಾನಮಾಡಿದ್ದಾರೆ. [ಪ್ರತಿಪತ್ತಿ=ಗೌರವ] ಭಾಗವತಾಗ್ರೇಸರರಾದ ವಿದುರರೂ ತಮ್ಮ ಜಾತಿಗೆ ಅನುಗುಣವಾದ ವೃತ್ತದಲ್ಲಿಯೇ ನಿಷ್ಠರಾಗಿದ್ದರು. ಸರ್ವಜ್ಞರಾದ ವಾಸುದೇವಾದಿಗಳೂ ವಿದುರರಲ್ಲಿ ಶೂದ್ರತ್ವವನ್ನು ಅಂಗೀಕರಿಸಿದ್ದರು. ಯೋಗಪ್ರಭಾವದಿಂದ ದೇಹತ್ಯಾಗ ಮಾಡಿದ ವಿದುರರಿಗೆ ಧರ್ಮರಾಜನು ಬ್ರಹ್ಮಮೇಧ ಸಂಸ್ಕಾರ ಮಾಡಿದ್ದು ವ್ಯಕ್ತಿವಿಶೇಷ ನಿಯತ. ಪಾಂಡವರ ಪತ್ನೀಸಾಧಾರಣ್ಯವೂ ಒಬ್ಬಳಿಗೇ ಐವರೂ ಪತಿಗಳಾಗಿದ್ದುದು ನಿಯತಿ ವಿಶೇಷ ನಿಬಂಧನ. ಮಿಕ್ಕವರಿಗೆ ಇದು ದೃಷ್ಟಾಂತವಾಗದು. ಆದ್ದರಿಂದ ಸ್ವಜಾತಿಗೆ ಅನುಗುಣವಾದ ಪ್ರಕ್ರಿಯೆಯಿಂದ ಭಗವಂತನನ್ನು ಆರಾಧಿಸುವುದೇ ಯುಕ್ತ. ವಿಶ್ವಾಮಿತ್ರ-ಪರಶುರಾಮಾದಿಗಳಿಗೆ ವರ್ಣವ್ಯತ್ಯಾಸವು ಹವಿಸ್ಸುಗಳ ವ್ಯತ್ಯಾಸಾದಿಯಿಂದಾದದ್ದು. ಶಠಕೋಪ

ಮುನಿಪ್ರಭೃತಿಗಳ ವೃತ್ತಾಂತವು ನಮಗೆ ದೃಷ್ಟಾಂತವಾಗಲಾರವು. ಅಲ್ಲದೆ ಆಯಾ ಆಳ್ವಾರ್ರುಗಳ ವೃತ್ತಾಂತಗಳನ್ನು ಪರ್ಯಾಲೋಚಿಸಿದಲ್ಲಿಯೂ ಎಲ್ಲಿಯೂ ಅವರವರ ಜಾತಿವ್ಯತಿಕ್ರಮವು ಕಾಣಿಸುವುದಿಲ್ಲ. ಹೀಗಿದ್ದಾಗ್ಯೂ, ಪೂರ್ವ ಪೂರ್ವವರ್ಣದವರು ದೊರಕದಿದ್ದಲ್ಲಿ ಇತರ ವರ್ಣೀಯರಿಂದ ಭಗವದ್ ಜ್ಞಾನವು ಅವಶ್ಯ ಸಂಪಾದನೀಯ. ಮಂತ್ರಾದಿಗಳಾದರೋ--ಬ್ರಾಹ್ಮಣ ರಿಂದಲೇ ಪಡೆಯತಕ್ಕವೆನ್ನಲು ಸುಧೃಡ ಪ್ರಮಾಣಗಳಿವೆ.

ತುಲಾಧಾರ–ಧರ್ಮವ್ಯಾಧಾದಿಗಳೂ ಧ ರ್ಮ ಜಿ ಜ್ಞಾ ಸು ಗ ಳಾ ದ ಬ್ರಾಹ್ಮಣರನ್ನು ಪೂಜಿಸಿ ಅವರಿಗೆ ಸನ್ಮಾರ್ಗ ಮಂತ್ರವನ್ನು ಉಪದೇಶಿಸಿದರೇ ಹೊರತು ಆಚಾರ್ಯಕವನ್ನು ಮಾಡಲಿಲ್ಲ, ಆದ್ದರಿಂದಲೇ ಮ್ಲೇಚ್ಛಾದಿಗಳು ಭಕ್ತರಾದಾಗ್ಯೂ ಅವರಿಂದ ಕೊಳ್ಳು ಕೊಡುವುದೇ ಮುಂತಾದುವು ಜ್ಞಾನಕ್ಕೆ ಸಂಬಂಧಪಟ್ಟ ವಿಷಯವೇ ಹೊರತು ಕನ್ಯಾದಾನಜ ವಿಷಯುವಲ್ಲ.

ಹೀಗೆ ಸತ್ತ್ವಾದಿಗುಣತಾರತಮ್ಯ ನಿಬಂಧನವಾದ ಶಾರೀರ ಬ್ರಾಹ್ಮಣ್ಯಾ - ದಿಕವೇ ಬೇರೆ ಶಮದಮಾದಿ ಲಕ್ಷಣವಾದ ಮಾನಸಿಕ ಬ್ರಾಹ್ಮಣ್ಯವೇ ಬೇರೆ. ಇವುಗಳಲ್ಲಿ ಶಾರೀರ ಗುಣ ವಿಶೇಷ ಮೂಲಗಳಾದ ಜಾತಿ ವಿಶೇಷಗಳು ಉತ್ಪತ್ತಿ ಸಿದ್ಧಗಳು. ಅವು ಆ ಶರೀರವಿರುವ ಪರ್ಯಂತ ಇರತಕ್ಕವು. ಮಾನಸಿಕ ಬ್ರಾಹ್ಮಣ್ಯವಾದರೋ–ಸರ್ವಜಾತಿ ಸಾಧಾರಣಗಳು. ಪ್ರಹ್ಲಾದಾದಿಗಳಿಗೆ ಅವುಜನ್ಮದಿಂದಲೇ ಸಿದ್ಧ. ಇತರರಿಗೆ ಸದಾಚಾರ್ಯ ಸಂಬಂಧ ನಿಬಂಧನಗಳು ಶಾರೀರಬ್ರಾಹ್ಮಣ್ಯಾದಿಗಳಿಗೆ ಸಂಬಂಧಿಸಿದ ಕೆಲವು ಶಾಸ್ತ್ರಗಳು ಅವರಿಗೆ ಮಾತ್ರವೇ ಸೇರಿದವು. ಮಾನಸ ಬ್ರಾಹ್ಮಣ್ಯಾದಿಗೆ ಸಂಬಂಧಿಸಿದ ಕೆಲವು ಶಾಸ್ತ್ರಗಳು ಪುರುಷಾರ್ಥ ಮತ್ತು ಅದರ ಉಪಾಯಕ್ಕೆ ಅರ್ಹತೆ ಮತ್ತು ಪ್ರಶಂಸೆಯ ಪರಗಳು ಅವು ಸರ್ವಸಾಧಾರಣಗಳೂ. ಇಲ್ಲಿ ಶರೀರದಿಂದ ಉತ್ಕೃಷ್ಟರೂ ಮನಸಾ ಅಪಕೃಷ್ಟರೂ ಆದವರು ಆರೂಢಪತಿತರೆಂದು ಮಹಾನಿಂದನೆಗೆ ಪಾತ್ರರಾಗುವರು. ಶರೀರದಿಂದ ಅಪಕೃಷ್ಟರಾದಾಗ್ಯೂ ಗುಣೋತ್ತರರಾದವರು ಪರಮ ಪ್ರಶಂಸೆಗೆ ಅರ್ಹರು. ಈ ಶಾರೀರವೋ ಮಾನಸವೋ ಆದ ಸಮುತ್ಕರ್ಷವೂ ಗರ್ವಕ್ಕೆ ಹೇತುವಾದರೆಮಹದನರ್ಥಕಾರಿ. ಉಭಯ ವಿಧವಾದ ಅಪಕರ್ಷವಾದರೂ ತಮ್ಮ ಅನುಸಂಧಾನದ ಮೂಲಕ.

ನಿರ್ವೇದವನ್ನು ತಂದು ಅಕಿಂಚನನಿಗೆ ಅರ್ಹವಾದ ಸ್ವತಂತ್ರ ಪ್ರಪತ್ತಿಯಲ್ಲಿ ಪರಂಪರೆಯಾಗಿ ಪ್ರಯೋಜಕವಾದಲ್ಲಿ ಅದು ಪರಮಶ್ಲಾಘ್ಯ. ಹೀಗೆ ಜಾತಿ ವ್ಯವಸ್ಥೆಯಿದ್ದಾಗ್ಗೂ ಭಾಗವತತ್ವದ ಬಗ್ಗೆ ಪೂಜ್ಯ ಭಾವವಿಡುವುದಕ್ಕೆ ವಿರೋಧವಿಲ್ಲ. ಭಾಗವತರೊಳಗೆ ದೇವತಾಂತರ ಸ್ಪರ್ಶವಿಲ್ಲದವರು ಏಕಾಂತಿಗಳು, ದೇವತಾಂತರ-ಪ್ರಯೋಜನಾಂತರ ಸ್ಪರ್ಶವಿಲ್ಲದವರು ಪರಮೈಕಾಂತಿಗಳು. ಅದರೊಳಗೂ ಭಗವತ್ಪ್ರಾಪ್ತಿಗೆ ವಿಳಂಬತಾಳದವರು ಭಗವಂತನಲ್ಲಿಯೇ ನ್ಯಸ್ತಭರರಾಗಿ ಸ್ವಯಂ ಪ್ರಯೋಜನವಾಗಿ ಅವನ ಕೈಂಕರ್ಯವನ್ನು ಮಾಡುತ್ತಾ ಪರಮ ಭಾಗವತರೆನಿಸಿ ಷೋಡಶ (16) ವರ್ಣ ಸುವರ್ಣ ಸವರ್ಣರಾದ ಪರಮೈಕಾಂತಿಗಳು. ಭಾಗವತರ ಮಹಿಮೆಯ ವಿಷಯದಲ್ಲಿ,—

"ನಾರಾಯಣೈಕನಿಷ್ಠಸ್ಯ ಯಾ ಯಾವೃತ್ತಿಸ್ತದರ್ಚನಂ ।
ಯೋ ಯೋ ಜಲ್ಪಸ್ಸಜಪಃ ತದ್ಧ್ಯಾನಂ ಯನ್ನಿರೀಕ್ಷಣಂ ॥
ತತ್ಪಾದಾಂಬ್ವತುಲಂ ತೀರ್ಥಂ ತದುಚ್ಛಿಷ್ಟಂ ಸುಪಾವನಂ ।
ತದುಕ್ತಿಮಾತ್ರಂ ಮಂತ್ರಾಗ್ರ್ಯಂ ತತ್ಸ್ಪೃಷ್ಟಮಖಿಲಂ ಶುಚಿ ।

—ಇತ್ಯಾದಿ ವಚನಗಳು ಪ್ರಮಾಣವಾದಾಗ್ಗೂ. ಇಲ್ಲಿ "ವೃತ್ತಿ"-(ಜೀವಿಕೆ) ಶಬ್ದಕ್ಕೆ ನಿಷಿದ್ಧವೃತ್ತಿಯೆಂದರ್ಥವಲ್ಲ. "ಆಪತ್ಸ್ವನಂತರಾ ವೃತ್ತಿಃ,"—ಎಂದಿರುವಂತೆ ದೇಶ-ಕಾಲಾದಿ ದೋಷಗಳ ಪ್ರಯುಕ್ತ ಆಪತ್ಕಾಲದಲ್ಲಿ ಆಶ್ರಯಿಸಬಹುದಾದ ಗೌಣ ವೃತ್ತಿಪರವಿದು, "ಜಲ್ಪ"-(ಹರಟೆ. ಮಾತು) - ಇದೂ ವ್ಯರ್ಥ ಅಥವಾ ಪ್ರತಿಷಿದ್ಧವಾದ ಮಾತೆಂದಲ್ಲ ; ವೇದಬಾಹ್ಯ - ಕುದೃಷ್ಟಿಗಳನ್ನು ಜಯಿಸಲಿಚ್ಛೆಯಿಂದ ಅವರೊಡನೆ ನಡೆಸುವ ವಾದ ಪರವಿದು. ಅವನ "ನಿರೀಕ್ಷಣ" (ದಿಟ್ಟಿಸಿ-ನೋಡುವುದು) - ವನ್ನೇ ಧ್ಯಾನವೆಂದಿರುವುದು ನಿಷಿದ್ಧ ನಿರೀಕ್ಷಣ ಪರವಲ್ಲ. ಇದು ಶಾಸ್ತ್ರದೃಷ್ಟಿಪರ ಅಂದರೆ, ಕೈಂಕರ್ಯಕ್ಕೆ ತೊಡಗಿರುವಾಗ ಇವನ ಕಣ್ಣಿಗೆ ಬಿದ್ದುದೆಲ್ಲವೂ, "ಅಹಂ ಹರಿಃ ಸರ್ವಮಿದಂ ಜನಾರ್ದನಃ ॥" - "ನಿರ್ಕಿನ್ರ ದೆಲ್ಲಾಂ ನೆಡುಮಾಲೆನ್ನುಂ,"—ಇತ್ಯಾದಿಯಲ್ಲಿಯಂತೆ ಬ್ರಹ್ಮಾತ್ಮಕವಾಗಿಯೇ ತೋರುವ ಪ್ರಕಾರವನ್ನು ಹೇಳುವುದೆಂದು ಭಾವ. "ತತ್ಪಾದಾಂಬು,"-ಅಂದರೆ ಅವನ ಪಾದ ತೊಳೆದ ನೀರು. ಭಾಗವತರ "ಪಾದಾಂಬು"-ವನ್ನು ಸ್ವೀಕರಿಸುವಾಗ ಆ ಭಾಗವತರು ನಾರಾಯಣೈಕನಿಷ್ಠರಾಗಿದ್ದಲ್ಲಿ ಆ "ಪಾದಾಂಬು"-ವಿಗೆ

ಅಧಿಕ ಗುಣವನ್ನು ಹೇಳುವುದರಲ್ಲಿ ತಾತ್ಪರ್ಯ. "ತದುಚ್ಛಿಷ್ಟಂ ಸುಪಾವನಂ," ['ಉಚ್ಛಿಷ್ಟ' = ಊಟಮಾಡಿ ಮಿಕ್ಕದ್ದು] – ಪ್ರಸರುಪಸಯನಾದಿ ಪ್ರಕರಣ ಗಳಲ್ಲಿ ಪಾವನವಾಗಿ ಶಾಸ್ತ್ರಪ್ರಾಪ್ತವಾದ ಉಚ್ಛಿಷ್ಟ ವಿಶೇಷಕ್ಕೆ ವಿಶೇಷ ಗುಣ ವುಂಟೆಂಬುದರಲ್ಲಿ ಇದರ ತಾತ್ಪರ್ಯ. "ತದುಕ್ತಿಮಾತ್ರಂ ಮಂತ್ರಾಗ್ರ್ಯಂ"– ಎಂದರೆ. ಅವರು ಉಪದೇಶಿಸುವ ತತ್ತ್ವ-ಹಿತಪುರುಷಾರ್ಥ-ಪರವಾದ ವಾಕ್ಯಗಳು ಶ್ರೇಷ್ಠ ಮಂತ್ರಗಳ ಹಾಗೆ - ಸದಾ ಅನುಸಂಧೇಯಗಳೆಂದರ್ಥ. ಈ ರೀತಿ ವ್ಯವಸ್ಥೆಯಿಲ್ಲದಿದ್ದಲ್ಲಿ, ಸ್ಪೃಶ್ಯ-ಅಸ್ಪೃಶ್ಯ, ಭಕ್ಷ್ಯ-ಅಭಕ್ಷ್ಯ, ಗ್ರಾಹ್ಯ-ಅಗ್ರಾಹ್ಯಗಳನ್ನು ವ್ಯವಸ್ಥೆಗೊಳಿಸಿರುವ ಶಾಸ್ತ್ರಕ್ಕೇ ಭಂಗಪ್ರಸಂಗವೊದಗುವುದು.

ವೇದ-ವೈದಿಕ ಶಾಸ್ತ್ರೋಕ್ತ ನಿಯಮಗಳನ್ನು ಅನುಷ್ಠಿಸದೆ ಸ್ವರೂಪತಃ ಬಿಡುವುದು ತಾಮಸತ್ಯಾಗ. ಕಟ್ಟಿಕೊಂಡ ಕುಟುಂಬವನ್ನು ಭರಿಸಲು ಸಾಮರ್ಥ್ಯ ವಿಲ್ಲದೆ ಸನ್ಯಾಸಾಶ್ರಮ ಸ್ವೀಕರಿಸುವುದಕ್ಕಾಗಿ ಗೃಹಸ್ಥಾಶ್ರಮವನ್ನು ಬಿಡುವಂತೆ, ಆಲಸ್ಯಾದಿಯಿಂದ ಸರ್ವ ಕರ್ಮಗಳನ್ನೂ ಮಾಡದೆ ಬಿಡುವುದು ರಾಜಸತ್ಯಾಗ. ಭಗವಂತನು ತಾನೇ ತನ್ನದೇ ಆದ ಉಪಕರಣಗಳಿಂದ ತನ್ನ ಸ್ವಂತ ಆರಾಧನ ಕ್ಕಾಗಿಯೇ ತನಗೆ ಶೇಷಭೂತವಾದ ಈ ಕರ್ಮವನ್ನು ತನ್ನ ಶೇಷಭೂತನಾದ ನನ್ನಿಂದ ಮಾಡಿಸುತ್ತಾನೆ — ಎಂಬ ಅನುಸಂಧಾನದಿಂದ ತನ್ನ ಅಧಿಕಾರಾನು ಗುಣವಾದ ಕರ್ಮಗಳನ್ನು ಮಾಡಿ ಅದರ ಫಲವನ್ನೂ ಅವನಿಗೇ ಅರ್ಪಿಸುವುದು ಸಾತ್ತ್ವಿಕತ್ಯಾಗ, ಈ ವಿಧವಾದ ಕರ್ಮಾನುಷ್ಠಾನದಿಂದ ಉಂಟಾದ ಭಗವದನು ಗ್ರಹಕ್ಕೆ ಮೋಕ್ಷವನ್ನೂ ಫಲವನ್ನಾಗಿ ಕೋರದೆ, ಹಿಂದೆ ಆಚರಿಸಿದ ಪ್ರಪತ್ತಿ ಯಿಂದ ಸಿದ್ಧವಾದ ಭಗವತ್ಪ್ರಸಾದದಿಂದಲೇ ಮೋಕ್ಷ ಸಿದ್ಧವೆಂದು ಅನುಸಂಧಾನ ಮಾಡುವವನ ಕರ್ಮಾನುಷ್ಠಾನವು ಮುಕ್ತರ ಕೈಂಕರ್ಯದಂತೆಯೂ, ಆರೋಗನ-ಕ್ಷೀರ ಸೇವನೆಯಂತೆಯೂ ಸಾತ್ತ್ವಿಕ ತ್ಯಾಗದ ಪರಾಕಾಷ್ಠೆ ! "ಸರ್ವಧರ್ಮಾನ್ ಪರಿತ್ಯಜ್ಯ......"— ಎಂಬಲ್ಲಿ ಹೇಳಿರುವುದು ಇಂತಹ ಬುದ್ಧಿ ವಿಶೇಷ ರೂಪ ವಾದ ಸಾತ್ತ್ವಿಕತ್ಯಾಗವೇ ಹೊರತು, ಸರ್ವಕರ್ಮಗಳನ್ನು ಸ್ವರೂಪತಃ ಬಿಡುವು ದಲ್ಲ. ಹೀಗೆ ಪ್ರಪತ್ತಿಗೆ ಧರ್ಮಾಂತರದ ಅಪೇಕ್ಷೆಯಿಲ್ಲದಿದ್ದಾಗ್ಯೂ, ಸ್ವತಂತ್ರಾಧಿಕಾರದಿಂದ ಪ್ರಾಪ್ತವಾದ ನಿತ್ಯ - ನೈಮಿತ್ತಿಕ ಧರ್ಮಗಳನ್ನು ಮಾಡದೆಯೇ ಬಿಡುವುದು ಭಗವದಾಜ್ಞೆಗೆ ವಿರುದ್ಧ. ಆದ್ದರಿಂದ ವರ್ಣ-ಆಶ್ರಮ -ಜಾತಿ-ಗೋತ್ರ-ಪ್ರವರ-ಕುಲ-ದೇಶ-ಕಾಲಗಳ ಅವಸ್ಥೆಗಳಿಗೆ ಅನುಗುಣವಾಗಿ

ಕ್ಕೆಲ್ಲಾದಷ್ಟು ಭಗವದಾಜ್ಞಾನುಪಾಲನ ರೂಪ ಕೈಂಕರ್ಯದಿಂದಲೇ ವರ್ತಿಸತಕ್ಕದೆಂದು—

"ಆಹಾರಗೃಹ ಮಂತ್ರಾರ್ಥ ಜಾತ್ಯಾದಿನಿಯಮೈರ್ಯುತಃ ।
ಕುರ್ಯಾಲ್ಲಕ್ಷ್ಮೀಶ ಕೈಂಕರ್ಯಂ ಶಕ್ತ್ಯಾನನ್ಯ ಪ್ರಯೋಜನಃ ॥

—ಇತ್ಯಾದಿಯಿಂದ ಸಿದ್ಧವಾಗಿದೆ. ಹೀಗಾದಲ್ಲಿ, ಭಕ್ತನಿಗಿಂತ ಪ್ರಪನ್ನನಿಗೆ ವಿಶೇಷವೇನಾಯಿತು ?—ಎಂದಲ್ಲಿ, "ಆಚಾರಾತ್ಮಗುಣೋಪಾಯ ಪುರುಷಾರ್ಥ ವಿಶೇಷತಃ । ಅಧಿಕಾರಿಣಿ ವೈಶಿಷ್ಟ್ಯಂ ಪ್ರಕೃಷ್ಯೇತೋತ್ತರೋತ್ತರಂ ॥"—ಎಂದಿರುವಂತೆ, ಸಾಮಾನ್ಯವಾದ ಆಚಾರವುಳ್ಳವರಿಗಿಂತ ಆಚಾರ ವಿಶೇಷವುಳ್ಳವನು ಪೂಜ್ಯ. ಅವನಿಗಿಂತ ಶಾಂತ್ಯಾದ್ಯಾತ್ಮ ಗುಣವುಳ್ಳವನು ಅಧಿಕ, ಇವನಿಗಿಂತ ಭಕ್ತಿ ಪ್ರಪತ್ತಿಗಳೆಂಬ ಉಪಾಯಗಳಲ್ಲಿ ನಿಷ್ಠನಾದವನು ಅಧಿಕ, ಇವನಿಗಿಂತ ಮುಮುಕ್ಷುವು ಅಧಿಕ, ಇವನಿಗಿಂತಲೂ ವಿಳಂಬವಿಲ್ಲದೆಯೇ ಮೋಕ್ಷ ಸಾಧಿಸುವ ಉಪಾಯಾನುಷ್ಠಾನದಲ್ಲಿ ನಿಷ್ಠನು ಅಧಿಕ, ಇವನಿಗಿಂತ ಕೇವಲ ಭಗವಂತನ ಪ್ರೀತಿಯೊಂದನ್ನೇ ಪ್ರಯೋಜನವನ್ನಾಗಿ ಉದ್ದೇಶಿಸಿ ಕೈಂಕರ್ಯವೆಂಬ ಪುರುಷಾರ್ಥ ವಿಶೇಷದಲ್ಲಿ ನಿಷ್ಠನಾದವನು ಇನ್ನೂ ಅಧಿಕ,—ಎಂಬುದಾಗಿ ವಿಶೇಷ ತಾರತಮ್ಯವುಂಟು. ಈ ಪ್ರಭಾವ ವ್ಯವಸ್ಥೆಯು ಶ್ರೀ ರಹಸ್ಯತ್ರಯದಲ್ಲಿರುವ ನಾರಾಯಣಾದಿ ಪದಗಳಲ್ಲಿ ಕಾಣುವ ಈಶ್ವರನ ಪ್ರಶಾಸಿತೃತ್ವ-ಹಿತಪ್ರವರ್ತಕತ್ವಾದಿ ಗುಣಾನುಸಾರವಾಗಿ ಅನುಸಂಧೇಯ.

ದುರ್ಜನ ಭೂಯಿಷ್ಠವಾದ ಈ ಕಲಿಯುಗದಲ್ಲಿ ಇಂತಹ ಪ್ರಭಾವ ಶಾಲಿಯು ದುರ್ಲಭವಾದ್ದರಿಂದ ಈ ಪ್ರಭಾವ ವ್ಯವಸ್ಥೆಯನ್ನು ನಿರೂಪಿಸಿರುವುದು ವ್ಯರ್ಥವಲ್ಲವೆ ? ಎಂಬ ಶಂಕೆಗೆ ಪರಿಹಾರವನ್ನು—"ಚಾತುರ್ವರ್ಣ್ಯ ಚತುರ್ವಿಧಾಶ್ರಮಮುಖೇ ಭೇದೇಯಥಾವಸ್ಥಿತೇ, ವೃತ್ತಂ ತನ್ನಿಯತಂ ಗುಣಾನುಗುಣಯಾವೃತ್ತ್ಯಾ ವಿಶಿಷ್ಟಂಶ್ರಿತಾಃ । ತ್ಯಾಗೋಪಪ್ಲವ ನಿತ್ಯದೂರ ಶರಣವ್ರಜ್ಯಾ ವಿಧೌ ಕೋವಿದಾಃ, ಚಿಂತಾಮಭ್ಯುಪಗಂತುಮಂತಿಮಯುಗೇಽಪ್ಯೇಕಾಂತಿನಸ್ಸಂತಿನಃ ॥"—ಎಂಬ ಶ್ಲೋಕದಲ್ಲಿ ಸಂಗ್ರಹಿಸಿದ್ದಾರೆ. [ಆಯಾ ಜಾತ್ಯಾಶ್ರಮಾದಿ ನಿಯತವಾದ ಧರ್ಮಗಳನ್ನು ಬಿಡದೆಯೇ ಅವನ್ನು ಕೈಂಕರ್ಯಗಳೆಂಬ ಬುದ್ಧಿಯಿಂದ ಆಚರಿಸುತ್ತಾ, ಮೇಲೆ ಹೇಳಿದ ಪ್ರಪತ್ತಿಯ ಪ್ರಭಾವವ್ಯವಸ್ಥೆಯಲ್ಲಿ

ವಿಶ್ವಾಸವುಳ್ಳ ಪ್ರಪನ್ನರು ಈ ಯುಗದಲ್ಲಿಯೂ ಕೆಲವರಿದ್ದಾರೆ. ಈ ಅಧಿಕಾರ ವಿಷಯವಾದ ಚಿಂತೆ ವ್ಯರ್ಥವಲ್ಲವೆಂದು ಭಾವ.

## ೨೬. ಪ್ರಭಾವ ರಕ್ಷಾಧಿಕಾರ :

ಪ್ರಭಾವ ರಕ್ಷೆಯೆಂದರೆ—ಪ್ರಪತ್ತಿ ಪ್ರಭಾವವನ್ನು ಶಾಸ್ತ್ರೋಕ್ತ ಸ್ಥಿತಿಗಿಂತ ಕಡಿಮೆಯಾಗಿ ಶಂಕಿಸುವುದಾದರೆ, ಅದನ್ನು ಪ್ರಮಾಣಾನುಸಾರ ಪರಿಹರಿಸುವುದು. ಪ್ರಕೃತದಲ್ಲಿ ಪ್ರಪತ್ತಿಗೆ ಪ್ರಾರಬ್ಧ ಕರ್ಮವನ್ನು ಅಳಿಸುವ ಶಕ್ತಿಯಿಲ್ಲ. ಅವಕ್ಕೆ ಆ ಶಕ್ತಿಯುಂಟೆಂಬ ವಚನವು ಬಾಲರಿಗೂ ಆತುರರಿಗೂ ಉಪಯೋಗಿಸುವ ಉಪಚ್ಛಂದನ ವಾಕ್ಯದಂತ - ಎಂದು ಕೆಲವರು ಶಂಕಿಸುವರು. ಉಪಚ್ಛಂದನ ವಾಕ್ಯವೆಂಬುದು ಮನವೊಲಿಸುವುದು ಅಥವಾ ಪುಸಲಾಯಿಸುವುದಕ್ಕಾಗಿ ಆಡುವ ಸವಿ ನುಡಿ. ಈ ಶಂಕೆಯನ್ನು ನಿರಾಕರಿಸಿ ಪ್ರಪತ್ತಿಯು ಪ್ರಾರಬ್ಧವನ್ನೂ ಹೋಗಲಾಡಿಸುವುದೆಂಬುದನ್ನು ಕೈಮುತ್ಯನ್ಯಾಯದಿಂದ ದೃಢೀಕರಿಸಲು – ಭಗವಂತನ ವಿಚಿತ್ರಶಕ್ತಿಯೋಗವನ್ನು — "ಶಿಲಾದೇಃ ಸ್ತ್ರೀತ್ವಾದಿರ್ವಿಪರಿಣತಿರಸ್ತ್ವದ್ಭುತಮಿದಂ, ತತೋಽಪ್ಯೇತಚ್ಚಿತ್ರಂಯದುಪಶದಹನಸ್ಯೇವ ಹಿಮತಾ । ತೃಣಸ್ಯೈವಾಸ್ತ್ರತ್ವಂ ರಿಪುಷು ನಿಹತೇರೇವ ಹಿತತಾ ಪದತ್ರೇಣ್ಯೈವೇಹ ತ್ರಿಭುವನ ಪರಿತ್ರಾಣಮಿತಿ ಚ ॥" — ಎಂಬ ಶ್ಲೋಕದಿಂದ ಸಂಗ್ರಹಿಸಿದ್ದಾರೆ. ಅಂದರೆ—ಶ್ರೀರಾಮನ ಪಾದಸ್ಪರ್ಶದಿಂದ ಶಿಲೆಯಾಗಿದ್ದುದೊಂದು ರಮಣೀಯ ಸ್ತ್ರೀ ಯಾಗಿಯೂ, ಶ್ರೀ ಕೃಷ್ಣನ ಪಾದಸ್ಪರ್ಶದಿಂದ ಇದ್ದಿಲಾಗಿದ್ದುದೊಂದು ಸುಂದರ ಕುಮಾರನಾಗಿಯೂ ಪರಿಣಮಿಸಿದುದಿರಲಿ, ಇದಕ್ಕಿಂತ ಅದ್ಭುತ ಹಿರಣ್ಯನು ಪ್ರಹ್ಲಾದನ ಮೇಲೆ ಪ್ರೇರಿಸಿದ ಅಗ್ನಿಯು ಭಗವನುಗ್ರಹದಿಂದಲೂ, ಆಂಜನೇಯನ ಬಾಲಕ್ಕೆ ರಾಕ್ಷಸರು ಹೊತ್ತಿಸಿದ ಅಗ್ನಿಯು ಶ್ರೀ ಸೀತಾ ಪ್ರಭಾವದಿಂದಲೂ, ಹಿಮದಂತೆ ಹಿತವಾಗಿದ್ದುದು. ಇದಕ್ಕಿಂತ ಅದ್ಭುತ ಕಾಕಾಸುರನ ಮೇಲೆ ಶ್ರೀರಾಮನು ಪ್ರಯೋಗಿಸಿದ ಒಂದು ಹುಲ್ಲುಕಡ್ಡಿಯು ದೊಡ್ಡ ಅಸ್ತ್ರವಾದುದು - ಇದಕ್ಕಿಂತಲೂ ಅದ್ಭುತ - ಕಬಂಧ-ಯಮಳಾರ್ಜುನಾದಿ ವಿಷಯದಲ್ಲಿ-ಅವರ ವಧೆಯೇ ಅವರಿಗೆ ಹಿತರೂಪವಾದುದು, ಇದೆಲ್ಲಕ್ಕಿಂತ ಅದ್ಭುತ ಶ್ರೀಮದಯೋಧ್ಯೆಯಲ್ಲಿ ಅಭಿಷಿಕ್ತವಾದ ಶ್ರೀರಾಮಪಾದುಕೆಗಳಿಂದ ತ್ರಿಭುವನಗಳ ರಕ್ಷಣೆಯಾಯಿತೆಂಬುದು ! ಹೀಗೆ

ಒಂದಕ್ಕಿಂತ ಒಂದು ಅದ್ಭುತವಾಗಿರುವಲ್ಲಿ ಪ್ರಪತ್ತಿಯು ಪ್ರಾರಬ್ಧವನ್ನು ಅಳಿಸುವುದೆಂಬುದರಲ್ಲಿ ಆಶ್ಚರ್ಯವೇನು ?—ಎಂದಿದರ ಭಾವ.

ಇದು ತತ್ತ್ವವಾದಲ್ಲಿ—ಪ್ರಾರಬ್ಧಕರ್ಮ ವಿಶೇದ ಫಲವಾಗಿದ್ದುಕೊಂಡು ಬರುವ ದುಃಖಗಳೂ, ದುಃಖಕಾರಣಗಳಾದ ಕರ್ಮಗಳ ಆರ್ಜನವೂ ಕಳೆಯ ಬೇಡವೇ ? ಆರ್ತನಾಗಿ ಅಧಿಕಾರಿಯಾದವನು ಅರ್ಥಿಸಿದಲ್ಲಿ ಫಲದೊರಕುವ ದೆಂದಲ್ಲಿ, ಆನುಷಂಗಿಕ ಪಂಕ್ತಿ ಪಾವನತ್ವಾದಿಗಳಂತೆ ನಮಗೆ ಅಭಿಸಂಧಿಯಿಲ್ಲ ದ್ದನ್ನೂ ಹಿತೈಷಿಯಾದ ಈಶ್ವರನು ತಾನಾಗಿಯೇ ಕೊಡಬೇಡವೆ ? ಹೀಗೆ ಅವನು ಮಾಡುವುದು ಕಂಡುಬರದುದರಿಂದ ಶೋಕವಿಷಯವಾದ ಅಂಶವೆಲ್ಲವ-ನ್ನೂ ನಿಶ್ಶೇಷವಾಗಿ ಪ್ರಪತ್ತಿಯು ಕಳೆಯುವುದೆಂಬುದು ಪ್ರಪತ್ತಿಯ ಪ್ರಭಾವಾತಿ ಶಯವನ್ನು ಸ್ತುತಿಸುವುದು ಮಾತ್ರ—ಎಂದಲ್ಲಿ ಉತ್ತರ:—ಈ ಅಧಿಕಾರಿಯು ತನ್ನ ಅಭಿಲಾಷೆಗೆ ಅನುಗುಣವಾಗಿ ಸ್ವಲ್ಪ ಕಾಲ ಐಹಿಕ ಭೋಗಗಳನ್ನು ಪ್ರಾರಬ್ಧ ವಶದಿಂದ ಅನುಭವಿಸಿದಾಗ್ಯೂ ಅದನ್ನು ದುಃಖ ಪ್ರಸಂಗವಿಲ್ಲ ದಯೇ ಅನುಭವಿಸಿದಾಗ್ಯೂ ಅದರಲ್ಲಿ ಆಗ ಅವನಿಗೆ ವೈರಾಗ್ಯ ಹುಟ್ಟುವುದಿಲ್ಲ; ಇವನಿಗೆಭ ಗವದನುಭವದ ಭೋಗ್ಯತೆಯೂ ವೃದ್ಧಿಯಾಗುವುದಿಲ್ಲ. ಆದ್ದರಿಂದ ಕಠಿನ ಹೃದಯರಿಗೆ ಪ್ರಾರಬ್ಧದ ಮೂಲಕ ದುಃಖಾನುಭವವು ಶಿಕ್ಷಾ ರೂಪ ವಾದ ಅನುಗ್ರಹ ವಿಶೇಷವೆಂದು ನೆನೆಯಬೇಕು. ಇದರಲ್ಲಿ ನಿಯತಾಯುಸ್ಸು ಗಳಿಗೆ ಆಯುಸ್ಸು ಮುಗಿಯುವುದರೊಳಗೇ ಸಮುದ್ವೇಗವುಂಟಾಗುವುದಕ್ಕಾ ಗಿಯೂ, ಅನಿಯತಾಯುಸ್ಸಗಳಿಗೆ ಆಯುಷ್ಕಾಮೇಷ್ಟ್ಯಾದಿಗಳಿಂದ ಆಯುಸ್ಸ ನ್ನು ಹೆಚ್ಚಿಸಿಕೊಳ್ಳದಿರುವುದಕ್ಕಾಗಿಯೂ ದುಃಖಾನುಭವವು ಹಿತಪ್ರವರ್ತಕನಾದ ಉಪಾಧ್ಯಾಯನೆಂಬುದು ಪೂರ್ವಾಚಾರ್ಯರ ಅಭಿಸಂಧಿ. ಪ್ರಾಣಾರ್ಥಿಯಾಗಿದ್ದ ಕಾಕನಿಗೆ ಪ್ರಾಣದಾನದಿಂದ ಅವನ ಪ್ರಪದನವು ಸಫಲವಾದಾಗ್ಯೂ, ಒಂದು ಕಣ್ಣನ್ನೇಕೆ ತೆಗೆದುಕೊಂಡದ್ದು ? ಎಂದರೆ, ಮತ್ತೆ ಅಂತಹ ಅಪರಾಧವನ್ನು ಅವನು ಮಾಡದಿರುವುದಕ್ಕಾಗಿ. ದುಷ್ಪ್ರಕೃತಿಯಾದ ಅವನಿಗೆ ಆ ಶಿಕ್ಷಣವು ಅನುಗ್ರಹದ ಲಕ್ಷಣವೇ ಆದುದು. ಇದನ್ನೇ, "ಕೃಪೇ ಕಾಕಸ್ಯೈಕಂ ಹಿತಮಿತಿ ಹಿನಸ್ತಿಸ್ಮ ನಯನಂ। .......ದಿಶತ್ಯೇವಂ ದೇವೋ ಜನಿತ ಸುಗತಿಂ ದಂಡನಗತಿಂ" —ಎಂದಿದ್ದಾರೆ ಆಚಾರ್ಯರು.

ಪ್ರಪದನವು ಒಂದೇ ಸಲದ ಕರ್ತವ್ಯವಾದರೂ ಅದಕ್ಕೆ ಹೇಳಿರುವ ಪ್ರಭಾವವು

ಶಾಸ್ತ್ರಬಾಧೆಯ ಗಂಧವೂ ಇಲ್ಲದ ವಿಷಯದಲ್ಲಿ ಅದಕ್ಕೆ ಏನೂ ಸಂಕೋಚ ವಿಲ್ಲದೆಯೇ ಸ್ವೀಕರಿಸತಕ್ಕದ್ದು. ಒಂದು ಕ್ಷಣಕಾಲದಲ್ಲಿ ಮಾಡುವ ಪಾಪ ವಿಶೇಷಕ್ಕೆ ಬ್ರಹ್ಮನ ಪ್ರಳಯಕಾಲಾವಧಿಕ ಕಾಲವೂ ನರಕ ಪಾತವು ಅಂಗೀಕೃತ ವಾಗಿದೆಯಷ್ಟೆ! ಆದ್ದರಿಂದ ಮಾತಾಪಿತೃಹಂತೃವಾದಾಗ್ಯೂ ಪ್ರಪನ್ನನನ್ನು ಭಗವಂತ ಕಾಪಾಡುತ್ತಾನೆಯೆಂಬುದು, ಪ್ರಪತ್ತಿಯ ಪೂರ್ವ ಕಾಲದ ಪಾಪಕ್ಕೆ ಅನ್ವಯವಾದರೆ ಸರಿ. ಉತ್ತರಾಘ ವಿಷಯವಾದಲ್ಲಿಯಾದರೋ—ಅದಕ್ಕೆ, ನಿಸ್ತಾರ ಕ್ರಮವು ಹಿಂದೆ ಹೇಳಿರುವಂತೆಯೇ.

ಆದ್ದರಿಂದ, ನಮ್ಮ ಸಿದ್ಧಾಂತದಲ್ಲಿ ಬದ್ಧಾದರರಾದ ಮುಮುಕ್ಷುಗಳೂ ತಮಗೆ ಉಚಿತವಾದ ಉಪಾಯ ವಿಶೇಷದಲ್ಲಿ ಪ್ರವಿಷ್ಟರಾದ ಭಾಗವತರೂ ಅರ್ಥಾದ್ಯನುಷಂಗಗಳು ಇನ್ನೂ ಉಪಶಾಂತವಾಗದಿದ್ದಲ್ಲಿ ಅಸಂಭಾಷ್ಯರೆಂದು ಕೆಲವು ವೈರಾಗ್ಯ ಮಾತ್ರ ಪ್ರಧಾನರು ಹೇಳುವರು. ಆ ಮಾರ್ಗ ಪ್ರವಿಷ್ಟರ ವಿಷಯದಲ್ಲಿ ಹೇಳಬೇಕಾದ ಮಾತುಗಳನ್ನು ಸನ್ಮಾರ್ಗದಲ್ಲಿಯೇ ಇದ್ದು ಜಾರುವವರ ಬಗ್ಗೆ ಹೇಳಲೇ ಕೂಡದು. ಏಕಾಂತಿಗಳಾದ ಭಾಗವತರು ಎಂತಹವರಾದರೂ ದೋಷ ಅವರಲ್ಲಿ ಅನುವರ್ತಿಸಿದಾಗ್ಯೂ, ಉಪಕ್ಲೇಶಗಳಿಂದ ಪರಿಭೂತರಾದಾಗ್ಯೂ, "ನಿರ್ಧನಾಂಶ್ಚರತೋ ಲೋಕೇ ವೃತ್ತ್ಯರ್ಥಂ ಭೃಶಕರ್ಶಿತಾನ್ । ನಾವಮನ್ಯೇತ ತ್ರೈಲೋಕ್ಯಂ ಪವಿತ್ರೀ ಕುರುತೇ ಹರಿ ; ॥" ಇತ್ಯಾದಿ ಪ್ರಮಾಣಗಳ ಪ್ರಕಾರ ಅವರನ್ನು ಸಾಧುಗಳೆಂದೇ ಬಹುಮಾನಿಸಬೇಕು. ಅವರಲ್ಲಿ ಅಪಚಾರ ಪಡಕೂಡದೆಂಬುದು ಸಕಲ ಶಾಸ್ತ್ರಗಳ ಸಾರಾರ್ಥ. ಏಕೆಂದರೆ, ನಾರಕ ಲೋಕಕ್ಕೆ ಮೂಲ ಕಾರಣವಾದ ಸಂಸಾರ ಮಂಡಲದಲ್ಲಿ ತಮ್ಮ ಅಧಿಕಾರಕ್ಕೆ ತಕ್ಕ ಮುಕ್ತಿ ಮಾರ್ಗಕ್ಕೆ ದ್ವಾರಗಳಾದ ಕರ್ಮಯೋಗಾದಿ ಪರ್ವಗಳಲ್ಲಿ ಪ್ರವಿಷ್ಟರಾದವರ ವಿಷಯದಲ್ಲಿಯೂ ಅವಮಾನಿಸುವುದೂ ಭಾಗವತಾಪಚಾರವೇ. ಹೆಚ್ಚೇಕೆ ?— ಗೋಮುಖವ್ಯಾಘ್ರ ನ್ಯಾಯದಿಂದಲೂ, ರಾವಣ ಸನ್ಯಾಸಿ ನ್ಯಾಯದಿಂದಲೂ ಭಾಗವತ ವೇಷಧಾರಿಗಳಾದವರೂ ಕೂಡ ಅವರ ಒಳ ತತ್ತ್ವವು ತಿಳಿಯುವ ಪರ್ಯಂತ ಭಗವದ್ರೂಪ–ದಾಸ್ಯನಾಮಗಳಿಂದ ಆದರಿಸಲ್ಪಡಲು ಯೋಗ್ಯರು. "ಚೋರೋಽಪ್ಯವಧ್ಯಃ ಶ್ವಪಚೋಽಪ್ಯದೂಷ್ಯಃ ಋಣ್ಯಪ್ಯಪೀಡ್ಯೋ ಪಶುರಪ್ಯ ತಾಡ್ಯಃ । ಯೋಽಹ್ಯಂಕಿತೋ ವೈಷ್ಣವ ಲಾಂಛನೇನ ಸ ಏವ ವಿಷ್ಣು ಪ್ರತಿಮಾ ಸಮಾನಃ ॥"—ಇತ್ಯಾದಿಗೆ ಹೃದಯ

ಜ್ಞಾನ ಪರ್ಯಂತವೇ ವೇಷವನ್ನು ನೋಡಿ ಆದರಿಸಬೇಕೆಂದು ಭಾವ. ಇಂತಹ ವೇಷಧಾರಿಗಳ ಬಗ್ಗೆಯೇ "ನಲಿಂಗಂ ಧರ್ಮಕಾರಣಂ,"-ಅಂದರೆ ವೇಷ ಮಾತ್ರವೇ ಭಗವತ್ಪ್ರಸಾದ ಜನಕವಲ್ಲ-ಎನ್ನುವುದು. ನಾಮ ಮಾತ್ರದಿಂದಲೇ ಪ್ರಯೋಜನ ಸಿದ್ಧಿಸುವುದಿಲ್ಲವೆನ್ನುವುದಕ್ಕೆ ಪ್ರಮಾಣ; "ಫಲಂಕತವೃಕ್ಷಸ್ಯ ಯದ್ಯಪ್ಯಂಬು ಪ್ರಸಾದನಂ । ನ ನಾಮ ಗ್ರಹಣೇನೈವ ಕಸ್ಯವಾರಿ ಪ್ರಸೀದತಿ"- ಇತ್ಯಾದಿ,

"ಆರ್ತಾವಿಷಣ್ಣಾ ಶ್ಶಿಥಿಲಾಶ್ಚಭೀತಾಃ........ । ಸಂಕೀರ್ತ್ಯ ನಾರಾಯಣ ಶಬ್ದ ಮಾತ್ರಂ ವಿಮುಕ್ತ ದುಃ ಖಾಸ್ಸುಖಿನೋ ಭವನ್ತಿ ॥"- "ಅವಶೇನಾಪಿ ಯನ್ನಾಮ್ನಿ ಕೀರ್ತಿತೇ ಸರ್ವಪಾತಕೈಃ । ಪುಮಾನ್ ವಿಮುಚ್ಯತೇ ಸದ್ಯಃ ಸಿಂಹತ್ರಸ್ತೈರ್ಮೃಗೈರಿವ ॥. ಸಾಂಕೇತ್ಯಂ ಪಾರಿಹಾಸ್ಯಂ ವಾ ಸ್ತೋಭಂ ಹೇಳನಮೇವ ವಾ । ವೈಕುಂಠ ನಾಮ ಗ್ರಹಣಂ ಅಶೇಷಾಘವಿನಾಶನಂ ॥ ಹರಿರ್ಹರತಿ ಪಾಪಾನಿ...... ॥ ಏತಾವತಾಲಮ ಘನಿರ್ಹರಣಾಯ ಪುಂಸಾಂ ಸಂಕೀರ್ತನಂ ಭಗವತೋ ಗುಣಕರ್ಮನಾಮ್ನಾಂ ॥ ಆಕ್ರುಶ್ಯ ಪುತ್ರಮಘ ವಾನ್... ನಾರಾಯಣೇತಿ ಮ್ರಿಯಮಾಣ ಉಪೈತಿ ಮುಕ್ತಿಂ ॥"- "ಮೊಯ್ತ್ತ ವಲ್ವಿನೈಯುಳ್ ನಿನ್ರು ಮೂನ್ರೆಟ್ಟುತ್ತುಡೈಯ ಪೇರಾಲ್, ಕತ್ತಿರಬನ್ದು ಮನ್ರೇ ಪರಾಂಗತಿ ಕಣ್ಡುಕೊಣ್ಡಾನ್, ಇತ್ತನೈಯುಡಿಯ ರಾನಾರ್ಕ್ಕು ಇರಂಗುಂ ನಮ್ ಅರಂಗನಾಯ, ಪಿತ್ತನೈಪ್ಪೆತ್ತುಮ್ ॥"- ಎಂದೂ ಹೇಳುವ ಇವೆಲ್ಲವೂ ಭಗವತ್ಪ್ರದ್ವೇಷವಿಲ್ಲದವರಿಗೆ ಆಸ್ತಿಕ್ಯವು ಮಂದವಾದರೂ, ಬಾಲಾದಿಗಳಂತೆ ಅರ್ಥ ತಿಳಿಯದಿದ್ದರೂ, ಬಾಯಿತೊದಲಿ ಹೇಳಿದರೂ, ಸಂಕೇತ ಪರಿಹಾಸಾದಿಗಳಿಂದ ಬೇರೆ ಅಭಿಸಂಧಿಯುಂಟಾಗಿದ್ದರೂ, ಪ್ರಯೋಜನಾಂತರ ಸಂಗವುಂಟಾಗಿದ್ದರೂ, ದೋಷಾಂತರಗಳಿದ್ದಾಗ್ಯೂ, ನಾಮ ಸಂಕೀರ್ತನವು ಪಾವನತಮವೆಂಬ ಅಭಿಪ್ರಾಯವುಳ್ಳವು. ಅಲ್ಲದೆ ಭಗವತ್ಪರೀವಾದಾದಿಗಳಿಗಾಗಿ ಭಗವನ್ನಾಮ ಸಂಕೀರ್ತನ ಮಾಡಿದರೂ ಪಾಪ ಹೋಗುತ್ತದೆಯೆಂದಲ್ಲ. ಭಗವತ್ಪರೀವಾದಾದಿಗಳು ಪಾಪಗಳಾಗಿ ಪರಿಗಣಿಸಲ್ಪಟ್ಟಿವೆ. [ಪರಿವಾದ = ನಿಂದೆ] ಗೋಪಿಕಾ – ಕಂಸ – ಚೈದ್ಯಾದಿಗಳಂತೆ ಯಾವದಾದರೊಂದು ವಿಧದಲ್ಲಿ ಆಗುವ ಭಗವತ್ಸಂಬಂಧವು

ಪಾವನತಮ ಎಂದು ಅರ್ಥವುಳ್ಳ ವಚನಗಳು ಜನ್ಮಾಂತರದಲ್ಲಿ ಸಿದ್ಧವಾದ

ಅಧಿಕಾರಿ ವಿಶೇಷ ವಿಷಯವೆಂಬುದು ಪೂರ್ವಾಪರ ವೃತ್ತಾಂತದಿಂದ ಸಿದ್ಧ. ಅದನ್ನು ಹೇಳುವುದಾದರೋ - ಪ್ರದ್ವೇಷವನ್ನು ಬಿಡಲು ಪ್ರರೋಚಿಸುವುದ ಕ್ಕಾಗಿಯೇ ಹೊರತು ಕಂಸಾದಿಗಳ ಹಾಗೆ ಎಲ್ಲರೂ ಆಚರಿಸಲೆಂದಲ್ಲ.

ಭಗವತ್ ಕ್ಷೇತ್ರವಾಸದಿಂದ ಎಲ್ಲರಿಗೂ ಸದ್ಗತಿಯುಂಟೆಂದು ಶಾಸ್ತ್ರ ಹೇಳಿರುವುದರಿಂದ ಅಲ್ಲಿಯವಾಸದಿಂದ ಪ್ರತಿಕೂಲರಿಗೂ ಮೋಕ್ಷವುಂ-ಟಾಗದೋ ? ಎಂದಲ್ಲಿ, ಭಗವತ್ ಕ್ಷೇತ್ರದಲ್ಲಿ ಶರೀರ ವಿಶ್ಲೇಷಾದಿಗಳು ಮೋಕ್ಷಕ್ಕೆ ಉಪಕಾರಗಳೆಂಬುದೂ ಪಶ್ವಾದಿಗಳಂತೆಯಾದರೂ, ಪ್ರಾತಿಕೂಲ್ಯ ವಿಲ್ಲದವರಿಗೆ ಉಪಕಾರಗಳೆಂದರ್ಥ—

"ದುಷ್ಟೇಂದ್ರಿಯವಶಾತ್ ಚಿತ್ತಂ ನೃಣಾಂ ಯತ್ಕಲ್ಮಷೈರ್ವೃತಂ ।
ತದನ್ತಕಾಲೇ ಸಂಶುದ್ಧಿಂ ಯಾತಿ ನಾರಾಯಣಾಲಯೇ ॥"

— ಎಂಬ ಸಾತ್ವತವಚನವೂ, ಕ್ಷೇತ್ರವಾಸಾದಿ ತತ್ಪರರಾದವರಿಗೆ ಶಾಸ್ತ್ರ ವಿರೋಧವಿಲ್ಲದ ಶಬ್ದಾದಿ ಪ್ರಾವಣ್ಯದಿಂದ ಮೊದಲು ಭಗವತ್ಸಾಕ್ಷಾತ್ಕಾರಾದಿಗಳಿಲ್ಲ ದಿದ್ದರೂ ಅಂತಿಮಕಾಲದಲ್ಲಿ ಜ್ಞಾನವುಂಟಾಗುವುದೆಂಬ ಅರ್ಥದಲ್ಲಿಯೆಂದು ಪ್ರಕರಣಾದಿಯಿಂದ ಸಿದ್ಧ "ಯಂ ಯೋಗಿನಃ ಪ್ರಾಣವಿಯೋಗಕಾಲೇ ಯತ್ನೇನ ಚಿತ್ತೇ ವಿನಿವೇಶಯನ್ತಿ"—ಎಂದು ಹೇಳಲ್ಪಡುವ ಸ್ವಯತ್ನಾಪೇಕ್ಷೆಯಿಲ್ಲದೆಯೇ ಅಂತಿಮಕಾಲದಲ್ಲಿ ಇವರಿಗೆ ಸ್ಮೃತಿಯುಂಟಾಗುವುದೆಂಬುದು ಕ್ಷೇತ್ರವಾಸಕ್ಕಿರುವ ಅತಿಶಯ. ಇದು "ಕೇವಲಂ ಮದೀಯಯೈವ ದಯಯಾತಿ ಪ್ರಬುದ್ಧ...." —ಎಂದು ಪ್ರಪನ್ನರ ವಿಷಯದಲ್ಲಿಯೂ ಪ್ರದರ್ಶಿತ. ಆದ್ದರಿಂದ ಭಗವತ್ಪ್ರತಿ ಕೂಲರಿಗೆ ಕ್ಷೇತ್ರವಾಸಾದಿಗಳು ಉಪಕಾರಕವಲ್ಲ. ಪುಣ್ಯಕ್ಷೇತ್ರಗಳಲ್ಲಿ ಮಾಡುವ ಪ್ರತಿಕೂಲಾಚರಣವು ಅತ್ಯಂತ ಬಾಧಕವೆಂಬುದು ಬಹು ಶಾಸ್ತ್ರಗಳಿಂದ ಸಿದ್ಧ, ಇದೂ ಭಗವತ್ಪ್ರಭಾವ. ಭಗವತ್ಪ್ರವಣರಿಗೆ ವೃತ್ರ, ಕ್ಷತ್ರಬಂಧು ಮುಂತಾ ದವರುಗಳಿಗೆ ಹೇಗೋ ಹಾಗೆ ಆನುಕೂಲ್ಯಗಳು ತಾವೇ ಎಲ್ಲಾ ದೋಷಗಳನ್ನೂ ಹೇಗಾದರೂ ನೀಗಿಸಿ ಉತ್ತಾರಕಗಳಾಗುವುವು.

ಆದ್ದರಿಂದ - ಸರ್ವೇಶ್ವರನು ತಾನೇ ಸ್ವಸಂಕಲ್ಪ ನಿಯತವಾದ ಯಾವ ದಾದರೊಂದು ವ್ಯಾಜದಿಂದ ಮುಕ್ತೈಶ್ವರ್ಯವನ್ನು ಅನುಗ್ರಹಿಸುವುದಕ್ಕಾಗಿ ಆಶ್ರಿತರ ದೋಷಗಳನ್ನು ನೀಗಿಸುತ್ತಾನೆಯೆಂದು ನೆನೆದು, ದೋಷಗಳ

ಪ್ರಯುಕ್ತವಾಗಿ ಅವರನ್ನು ಅನಾದರಿಸದೆ, ಗುಣಕಂಡುಬಂದಲ್ಲಿ. ಮರುಭೂಮಿ ಯಲ್ಲಿ ಶೀತಲ ಮಧುರ ಜಲವನ್ನು ಕಂಡಂತೆ ಸಂತೋಷಿಸುತ್ತಾ, ಭಾಗವತ ಸಂಸರ್ಗದಿಂದ ತಮ್ಮನ್ನು ಕೃತಾರ್ಥರನ್ನಾಗಿ ಮಾಡಿಕೊಳ್ಳುವವರಾಗಿ ಶ್ರೀಪತಿ ಪರೀಗ್ರಹೀತರಾದ ತಮಗೆ ಎಂದೂ, ಎಲ್ಲಿಯೂ ಹಾನಿಯಿಲ್ಲವೆಂಬ ನಿಶ್ಚಯವುಳ್ಳ ವರಿಗೆ ಪರಮಪದ ಸಾಮ್ರಾಜ್ಯಕ್ಕೆ ತಾವು ಪಟ್ಟಾಭಿಷಿಕ್ತರೆಂದು ಅನುಸಂಧಾನ ಮಾಡಿ ಕರಣತ್ರಯದಿಂದಲೂ ಒಳ್ಳೆಯದನ್ನು ಆಚರಿಸುವುದು ಯುಕ್ತ. ಈ ಪ್ರಭಾವರಕ್ಷೆಯು ಶ್ರೀಮದ್ರಹಸ್ಯತ್ರಯದಲ್ಲಿ ಚತುರ್ಥ್ಯಂತವಾದ ನಾರಾಯ ಣಾದಿ ಪದಗಳಲ್ಲಿ ಅರ್ಥಸಿದ್ಧವಾಗಿ ಅನುಸಂಧೇಯ.

ಆದರೂ ಶರಣ್ಯನು ನಿರ್ದುಷ್ಟನಾದ್ದರಿಂದ, ಅಳವಿಲ್ಲದ ಪ್ರಭಾವವುಳ್ಳ ವನೇ ಆದಾಗ್ಯೂ ಜಾತ್ಯಾದಿ ಕೃತವಾದ ಅಪಕರ್ಷವುಳ್ಳ ಭಾಗವತರು ಅಂತಹ ಪ್ರಭಾವವುಳ್ಳವರಾಗಲು ಸಾಧ್ಯವೆ ? —ಎಂದಲ್ಲಿ, – ನಿಸ್ಸಮಾಭ್ಯಧಿಕನಾದ ಪುರುಷೋತ್ತಮನ ಪ್ರಭಾವವು ಅಳವಿಲ್ಲದ್ದು. ಆದ್ದರಿಂದ, ಆಕಿಂಚನ್ಯಾದಿ ಯುಕ್ತರಾಗಿ ಬಂದು ಅವನ ಪಾದಗಳನ್ನು ಆಶ್ರಯಿಸುವವರಿಗೆ ಜಾತ್ಯಾದಿಕೃತ ನೈಚ್ಯವಿದ್ದಾಗ್ಯೂ, ಪುರುಷಾರ್ಥಕ್ಕೂ ಭಗವದಭಿಮಾನಕ್ಕೂ ಕೊರತೆಯಿಲ್ಲವ್ದ ರಿಂದ, ಅಳವಿಲ್ಲದ ಪ್ರಭಾವವುಳ್ಳ ಭಗವಂತನೇ ಇವರಿಗೆ ಸದೃಶನೆಂದಾಗ್ಯೂ, ಆಶ್ಚರ್ಯಪಡತಕ್ಕದ್ದಿಲ್ಲವೆಂದು ಮಂದಾಧಿಕಾರಿ ಪೂರ್ಣಾಧಿಕಾರಿ ಎಂಬ ಪಕ್ಷ ಪಾತವಿಲ್ಲದೆ ಕೇವಲ ವಾತ್ಸಲ್ಯದಿಂದ, ಜ್ಞಾನಾನುಷ್ಠಾನಗಳಲ್ಲಿ ವ್ಯಾಸಾದಿಗಳಿ ಗಿಂತಲೂ ಅಧಿಕರಾದ ನಮ್ಮ ಆಚಾರ್ಯರುಗಳು ಉಪದೇಶಿಸಿದ್ದಾರೆಯೆನ್ನುತ್ತಾರೆ-

ಶ್ರೀ ಮದಾಚಾರ್ಯರು ;—

"ಉಣ್ಣೈಯು ಱ್ರಿಕ್ಕುಮ್ ಮಣಿಕಳಿಲೋಂಗಿಯು ವೃತ್ತಮನಾರ್
ವಣ್ಣೈಯಳಪ್ಪರಿ ತಾತರ್ಲಿ ವನ್ದು ಕೞಲ್ ಪಣಿವಾರ್,
ತಣ್ಣೈಕಿಡನ್ದಿಡತ್ತರ ಮಳವೆನ್ನ ವಿಯಪ್ಪಿಲತಾಮ್,
ಉಣ್ಣೈಯು ಱ್ರಿತ್ತನರ್ ಓರನ್ನವಿರ ವಯರ್ನ್ದನರೇ ॥"—ಇತಿ

"ಯೋ ಹ್ಯೇನಂ ಪುರುಷಂ ವೇದ ದೇವಾ ಅಪಿ ನ ತಂವಿದುಃ"—ಎಂದಿದೆ ಯಷ್ಟೆ !

ಮುಂದೆ ಅಧಿಕಾರದ ಕೊನೆಯದಾದ ಕೆಳಗಿನ ಶ್ಲೋಕದಿಂದ ಉಪಾಯ ನಿಷ್ಠರ ಪ್ರಭಾವವು ಅಳವಿಲ್ಲದ್ದೆಂದು ತೋರಿಸಿ, ಉಪಾಯ ಪ್ರಭಾವವೂ ಅಳವಿಲ್ಲದ್ದೆಂದು ತೋರಿಸಿದ್ದಾರೆ ; —

"ರಾಗದ್ವೇಷಮದಾದಿಕೈ ರಿಹಮಹಾರಕ್ಷೋಭಿ ರಕ್ಷೋಭಿತಂ, ನಿತ್ಯೇ ರಕ್ಷಿತರಿಸ್ಥಿತೇ ನಿಜಭರನ್ಯಾಸಾಭಿಧಾನಂ ತಪಃ । ಯತ್ಕಕ್ಷೀಕೃತಮತ್ಯಶೇತ ವಿವಿಧಾನ್ ಧರ್ಮಾನಧರ್ಮದ್ರುಹಃ, ತದ್ಭೂಮಾರ್ಣವ ಲೇಶವರ್ಣನಮಪಿ ಪ್ರಾಚಾಂ ನ ವಾಚಾಂ ಪದಂ ॥"—ಇತಿ. ರಾಗದ್ವೇಷಮದಾದಿಗಳು ಮಹಾ ರಕ್ಷಸ್ಸುಗಳಂತೆ. ಜನಸ್ಥಾನ ನಿವಾಸಿಗಳಾಗಿದ್ದ ಋಷಿಗಳ ತಪಸ್ಸು ದುರ್ಬಲ ರಾದ ರಕ್ಷಸ್ಸುಗಳಿಂದ ಕ್ಷೋಭೆಗೊಂಡಿತು. ನ್ಯಾಸವೆಂಬ ತಪಸ್ಸಾದರೋ ಈ ಮಹಾರಕ್ಷಸ್ಸುಗಳಿಂದಲೂ ಕ್ಷೋಭೆಹೊಂದದೆಂಬ ವ್ಯತಿರೇಕವೂ ವ್ಯಂಜಿತ.

ಸಂಗ್ರಹ ಶ್ಲೋಕಗಳು

1. ಉಕ್ತ್ವಾ ಭೂಮ್ನೋ ವ್ಯವಸ್ಥಾಮನಧಿಕಮಥಚೋಪಾಯ
 ತನ್ನಿಷ್ಠ ಭೂಮ-
 ನ್ಯೂನತ್ವಾಶಂಕಿ ಚೇತಃ ಕಲುಷ ಮಪನಯತ್ಯತ್ರ ಮಾನ್ಯೈಶ್ಚ ತರ್ಕೈಃ ।
 ಭೂಮಃ ಸಿದ್ಧೌ ಹಿ ಶಂಕಾವಿಘಟನ ಮುಚಿತಂ ತತ್ರ ತಸ್ಮಾದ್ವ್ಯವಸ್ಥಾ
 ಪಶ್ಚಾದ್ಯುಕ್ತೇತಿ ಸತ್ಯಂ ಸಮರಚಿತಮಿಯಂ ಸಿದ್ಧವತ್ಕೃತ್ಯ ಪೂರ್ವಂ ॥

2. ಪ್ರಾರಬ್ಧಸ್ಯಾಪಿ ಹನ್ತ್ರೀ ಯದಿ ವಚನ ಬಲಾತ್ ನ್ಯಾಸವಿದ್ಯಾಭ್ಯುಪೇತಾ
 ತನ್ನಿಷ್ಠಾನಾಂ ಬುಧಾನಾಂ ಇಹ ಕಿಮಪಿ ತದಾ ನೋಪಲಭ್ಯೇತ ದುಃಖಂ ।
 ತತ್ತಾದೃಕ್ಪಾವನತ್ವಾದಿಕಮಿವ ವಿ ಪದಾಂ ಹಾನಿರ ಪ್ರಾರ್ಥಿತಾಪಿ
 ನ್ಯಾಸಸ್ಯೈವ ಪ್ರಭಾವಾತ್ ಕಿಮಿತಿ ನಭವತಿ ಪ್ರತ್ಯುತ್ಯೈಕಾಹಿಬಹ್ವ್ಯಃ ॥

3. ತಸ್ಮಾನ್ನ್ಯಾಸಪ್ರಶಂಸಾ ಪರಮಿದಮಿತಿ ಯೋ ಮನ್ಯತೇ ತಾರ್ಕ ಪ್ರತೀದಂ
 ವಾಚ್ಯಂ ಪ್ರಾರಬ್ಧ ಕರ್ಮಾಣ್ಯಪಹರತಿ ಯದಿ ನ್ಯಾಸವಿದ್ಯಾಪ್ಯಕಾಮೇ।
 ನಿಶ್ಶೇಷಂ ಕರ್ಮನಾಶಾತ್ ನಿಜತನುವಿಲಯಸ್ಸದ್ಯ ಏವೇತಿ ಮತ್ವಾ
 ಲೋಕೇಸ್ಯಾನ್ನ್ಯಾಸವಾರ್ತಾ ಶ್ರವಣ ಕಟುರತ ಶ್ಯಾಸ್ತ್ರವೈಫಲ್ಯಮೇವ ॥

4. ತೇಷಾಮಿಚ್ಛಾನುಸಾರಾತ್ ಉಪಶಮ ಇತಿ ತದ್ವಾಕ್ಯ
ಭಾವೋऽಪ್ಯುಪೇಯೋ
ದುಃಖಾವಾಪ್ತಿರ್ಮುರಾರಿ ಸ್ಮೃತಿಕೃದಭಿಮತಾ
ಜ್ಞಾನಿನಸ್ತನ್ನ ದೋಷಃ ।
ತತ್ತತ್ಕರ್ಮಾನುಸೃತ್ಯಾ ವಿತರತಿ ಹಿತಮಿತ್ಯಚ್ಯುತೋऽನ್ಯಸ್ಯ ಶಿಕ್ಷಾ
ರೂಪಂ ಭಕ್ತಸ್ಯ ದುಃಖಂ ಜನಕ ಇವ ತನೂಜಸ್ಯ ವೈರಾಗ್ಯ ಸಿದ್ಧ್ಯೈ
5. ವೈರಾಗ್ಯೈಕ ಪ್ರಧಾನಾಃ ಕತಿಚಿದಿಹವದನ್ತ್ಯರ್ಥ ಕಾಮಾದಿ ಸಕ್ತ
ಪುಂಸಃ ಪ್ರಾರಬ್ಧ ಚೈತ್ರ್ಯಾನ್ಮುರರಿಪು ಶರಣಾನಪ್ಯಸಂಭಾಷಣೀಯಾನ್।
ಪ್ರಾಜ್ಞಾನಾಂ ನೈಕದಿಷ್ಟಂ ವಿಪಥಗತಜನೇ ಪೂಜ್ಯಮಾನಾ ಹಿ ನಿಂದಾ
ನಾಹಾರ್ಹಾ ಮಾರ್ಗೇ ಸ್ಖಲತ್ಸು ಸ್ಫುಟಮಪಿ ವಚನೈಃ ।
ಘುಷ್ಯತೇ ಮುಕ್ತಿರೇಷಾಂ
6. ಮಂತವ್ಯಾಸ್ಸಾಧು ರೇವಹ್ಯಪರಿಮಿತ ದುರಾಚಾರ ಶೀಲೋऽಪ್ಯನನ್ಯೋ
ಮದ್ಭಕ್ತಃ ಪಾಪ ಸಕ್ತಾ ಅಪಿ ಚ ಮಮಜನಾಃ ತೈರ್ವಿಮುಚ್ಯನ್ತ ಏವ ।
ಇತ್ಯೇವಂ ಮಾಧವೋಕ್ತ್ಯಾ ಪ್ರಿಯಮಪಿ ವಿಜಯಂ
ಧರ್ಮಸೂನುಂ ಪ್ರತೀದೃ–
ಗ್ಭಕ್ತೇಷ್ವಪ್ಯಾಗ ಆತ್ಮ ಪ್ರಪತನಕರಮಿತ್ಯೇವ ನಿರ್ಣೀತ ಮಾರ್ಯೈಃ ॥
7 ಭೂಯಾಂಸೋऽಪ್ಯೇಷು ದೋಷಾಃ ಪರಮಪದಗತಿಂ
ನಾಲಮೇವೋಪರೋದ್ಧುಂ
ನಿಷ್ಕೃತ್ಯಾ ಶಿಕ್ಷಯಾ ವಾ ಕ್ಷಪಣಮಿಹಕರೋ ತ್ಯೇವ
ತೇಷಾಂ ಮುಕುನ್ದಃ ।
ನಾಲಂ ಮುಕ್ತ್ಯೈ ಬಹೂನ್ಯಪ್ಯವಿಕಲ ಸುಕೃತಾನ್ಯಚ್ಯುತ ದ್ವೇಷಭಾಜಾಂ
ತೇऽಪಿಸ್ಯುಸ್ಸಾಧು ವೇಷಾ ಯದಿ ಹೃದವಗಮಾತ್
ಪ್ರಾಜ್ಞೈಷೇವ್ಯಾನ ಪಶ್ಚಾತ್॥
8. ಅದ್ವೇಷೇ ಕ್ಷೇತ್ರವಾಸಃ ಕಥಮಪಿ ಭಗವನ್ನಾಮ ಸಂಕೀರ್ತನಂ ಚ–
ಶ್ರೇಯೋಮೂಲಂ ತದಸ್ಮಿನ್ ಜಗತಿ ತತಮಹಾ
ಮೋಹಗಾಢಾನ್ಧಕಾರೇ ।

ಕಶ್ಚಿತ್ಪದ್ಯೋತ ವತ್ಸ್ಯ್ಯದಿ ಸುಪಥಚರೋ
ಹೃಷ್ಯತಾಂ ಲಾಭಮಾತ್ರಾತ್
ತಸ್ಮಾನ್ನ್ಯಾಸಾದಿ ಭೂಮಾ ಗತವಿಹತಿ ಯಥಾ
ಮಾನಮೇವಾಭ್ಯುಪೇಯಃ ॥

ಇತಿ ಶ್ರೀ ಕಪಿಸ್ಥಲಂ ರಂಗನಾಥಾರ್ಯ ಪ್ರಣೀತಾಯಾಂ
ಶ್ರೀ ರಹಸ್ಯತ್ರಯ ಸಾರಾರ್ಥ ರತ್ನಾವಳ್ಯಾಂ
ಪ್ರಭಾವ ರಕ್ಷಾಧಿಕಾರಃ ಷಡ್ವಿಂಶಃ

ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ
ಶ್ರೀಮತೇ ರಾಮಾನುಜಾಯ ನಮಃ
ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ

## ೨೭–ಮೂಲಮಂತ್ರಾಧಿಕಾರ

ಹಿಂದೆ ಸ್ಥಿರೀಕರಣ ಭಾಗವಾಯಿತು. ಮುಂದೆ ಪದವಾಕ್ಯಯೋಜನೆ ಯೆಂಬ ಮೂರನೇ ಭಾಗದೊಳಗೆ ಮೊದಲು ಮೂಲಮಂತ್ರವಾದ ಅಷ್ಟಾಕ್ಷರ ದಲ್ಲಿಯ ಪದ ವಾಕ್ಯಯೋಜನೆಗಳಿರುವ ಪ್ರಕಾರವನ್ನು ವರ್ಣಿಸಿದ್ದಾರೆ. ಇದರಲ್ಲಿ ಮೊದಲು,

"ಮಂತ್ರೇ ತದ್ದೇವತಾಯಾಂ ಚ ತಥಾ ಮಂತ್ರಪ್ರದೇ ಗುರೌ ।
ತ್ರಿಷು ಭಕ್ತಿಃ ಸದಾ ಕಾರ್ಯಾ ಸಾ ಹಿ ಪ್ರಥಮ ಸಾಧನಂ ॥"—,

—ಎಂಬಂತೆಯೇ ಮಂತ್ರ-ಪ್ರತಿಪಾದ್ಯವಾದ ದೇವತೆ, ಮಂತ್ರಪ್ರದ ಮತ್ತು ಮಂತ್ರಗಳನ್ನು ಮೂರು ಶ್ಲೋಕಗಳಿಂದ ಅನುಸಂಧಾನಮಾಡಿದ್ದಾರೆ.

1. ತಾರಂ ಪೂರ್ವಂ ತದನು ಹೃದಯಂ ತಚ್ಚ ನಾರಾಯಣಾಯೇ ತ್ಯಾಮ್ನಾಯೋಕ್ತಂ ಪದಮವಯತಾಂ ಸಾರ್ಥಮಾಚಾರ್ಯದತ್ತಂ । ಅಂಗೀ ಕುರ್ವನ್ನಲಸಮನಸಾಂ ಆತ್ಮರಕ್ಷಾಭರಂ ನಃ ಕ್ಷಿಪ್ರಂ ದೇವಃ ಕ್ಷಿಪತು ನಿಖಿಲಾನ್ ಕಿಂಕರೈಶ್ವರ್ಯ ವಿಘ್ನಾನ್ ॥

[ಪೂರ್ವಂ] = ಮೊದಲು, [ತಾರಂ] = ಪ್ರಣವ. "ಓಮಿತ್ಯಗ್ರೇ ವ್ಯಾಹ ರೇತ್",-ಎಂದು ಮೊದಲು ಪ್ರಣವವು ಶ್ರುತವಾಗಿದೆ. [ತದನು] = ಅನಂತರ [ಹೃದಯಂ] = 'ನಮಃ'–ಎಂಬುದು "ನಮ ಇತಿ ಪಶ್ಚಾತ್"—ಎಂಬಂತೆ

ಇದು "ಜ್ಞಾನಾಯ ಹೃದಯಾಯ ನಮಃ"—ಎಂದು ನ್ಯಾಸಪ್ರಕ್ರಿಯೆಯಲ್ಲಿ ಹೃದಯ ಸ್ಥಳದಲ್ಲಿ 'ನಮಃ' -ಎಂಬುದರ ವಿನ್ಯಸನವಿದೆ. ಮಂತ್ರದ ಗೋಪನ ಕ್ಕಾಗಿ 'ಹೃದಯ'-ಶಬ್ದದ ಪ್ರಯೋಗ [ತತ್ ಚ] = "ನಾರಾಯಣಾಯ ವಿದ್ಮಹೇ...."-ಎಂದು ಪ್ರಸಿದ್ಧವಾಗಿ "ನಾರಾಯಣಾಯೇತ್ಯುಪರಿಷ್ಟಾತ್"—ಎಂಬ ಶ್ರುತ್ಯುಕ್ತವಾದ [ನಾರಾಯಣಾಯ] = ಎಂಬ [ಆಮ್ನಾಯೋಕ್ತಂ] = ವೇದದಲ್ಲಿ ಹೇಳಿರುವ [ಪದಂ] = ಪದ-ಒಟ್ಟು ಈ ಮೂರು ಪದಗಳನ್ನೂ [ಸಾರ್ಥಂ] = ಅರ್ಥಸಹಿತವಾಗಿರೋಣ ಹೇಗೋ ಹಾಗೆ [ಆಚಾರ್ಯದತ್ತಂ] = ಆಚಾರ್ಯನಿಂದ ಉಪದಿಷ್ಟರೀತಿಯಲ್ಲಿ [ಅವಯತಾಂ] = ಅನುಸಂಧಾನ ಮಾಡುವ [ಅಲಸಮನಸಾಂ] – ಅಕಿಂಚನರಾದ [ನಃ] = ನಮ್ಮ [ಆತ್ಮರಕ್ಷಾಭರಂ] = ಆತ್ಮ ರಕ್ಷಣೆಯ ಭರವನ್ನು [ಅಂಗೀಕುರ್ವನ್] = ಅಂಗೀಕರಿಸುವವನಾದ [ದೇವಃ] = ಶ್ರೀಮನ್ನಾರಾಯಣನು [ಕಿಂಕರೈಶ್ವರ್ಯ ವಿಘ್ನಾನ್] = ಸರ್ವದೇಶ-ಸರ್ವಕಾಲ-ಸರ್ವಾವಸ್ಥೋಚಿತ ಸರ್ವವಿಧ ಕೈಂಕರ್ಯಗಳಿಗೂ ಪ್ರತಿಬಂಧಕಗಳಾದ ಅವಿದ್ಯಾ-ಕರ್ಮ ವಾಸನಾ–ರುಚಿ-ಪ್ರಕೃತಿ ಸಂಬಂಧರೂಪ ವಿಘ್ನಗಳನ್ನು [ಕ್ಷಿಪ್ರಂ] = ಬೇಗ [ಕ್ಷಿಪತು] = ಹೋಗಲಾಡಿಸಲಿ. ಇಲ್ಲಿ 'ಬೇಗ'–ಎಂದರೆ ಈ ದೇಹಾವ ಸಾನದಲ್ಲಿಯೇ ಎಂದು ಭಾವ. ಇಲ್ಲಿ 'ದೇವ'-ಎಂಬ ಶಬ್ದದಿಂದ ಮಂತ್ರದ ದೇವತೆಯೆಂದೂ ಸೂಚಿತ. ಅನಿಷ್ಟ ನಿವೃತ್ತಿಯನ್ನು ಪ್ರಾರ್ಥಿಸಿರುವುದರ ಮೂಲಕ ಮಂಗಳಾಚರಣೆಯೂ ಆದಹಾಗಾಯಿತು. ಮುಂದೆ, ಮಂತ್ರ ಪ್ರವರ್ತಕನಾದ್ದರಿಂದ ಗುರುವೆನಿಸಿದ ಶ್ರೀ ಬದರಿಕಾಶ್ರಮವಾಸಿಯಾದ ಶ್ರೀಮನ್ನಾರಾಯಣನ ವಿಷಯವಾಗಿ ಒಂದು ಮಂಗಳಾಚರಣೆಯನ್ನು ಮಾಡಿದ್ದಾರೆ;

2. ಕಲ್ಯಾಣಮಾವಹತು ಕಾರ್ತಯುಗಂ ಸ್ವಧರ್ಮಂ
ಪ್ರಖ್ಯಾಪಯನ್ ಪ್ರಣಿಹಿತೇಷು ನರಾದಿಕೇಷು ।
ಆದ್ಯಂ ಕಮಪ್ಯಧಿಗತೋ ರಥಮಷ್ಟಚಕ್ರಂ
ಬಂಧುಸ್ಸತಾಂ ಬದರಿಕಾಶ್ರಮ ತಾಪಸೋನಃ ॥

ಇಲ್ಲಿ 'ರಥ'—ಎಂಬುದು ಮಂತ್ರ. "ಅಷ್ಟಚಕ್ರಂ"—ಎಂಬುದು ರಥದ ಚಕ್ರ. ಶರಣ್ಯನು ಈ ಮಂತ್ರದಲ್ಲಿ ಪ್ರತಿಪಾದ್ಯನಾದ್ದರಿಂದ "ರಥಂ

ಅಧಿಗತಃ"—ಎಂದರೆ ರಥಾರೂಢನೆನಿಸಿದ್ದಾನೆ. "ಕಾರ್ತಯುಗಂ ಸ್ವಧರ್ಮಂ" —ಎಂಬುದು ನಿವೃತ್ತಿಧರ್ಮ. "ಪ್ರಣಿಹಿತೇಷು" = ಸಾವಧಾನರಾದ. "ನರಾದಿಕೇಷು" = ನರ–ನಾರದ ಮುಂತಾದವರುಗಳಲ್ಲಿ–"ಪ್ರಖ್ಯಾಪಯನ್"–ಪ್ರಸಿದ್ಧಿ ಪಡಿಸುವವನಾಗಿ. "ಆದ್ಯಂ"–ಎಂದರೆ-ಶ್ರೀಮದಷ್ಟಾಕ್ಷರೀ ಶ್ರೀ ವಾಸುದೇವ ದ್ವಾದಶಾಕ್ಷರೀ, ಶ್ರೀ ವಿಷ್ಣುಷಡಕ್ಷರೀ–ಎಂಬ ಮೂರು ವ್ಯಾಪಕ ಮಂತ್ರಗಳಲ್ಲಿ ಮೊದಲನೆಯದಾದ ಅಷ್ಟಾಕ್ಷರೀ ಎಂದರ್ಥ— ಇಂಥ ಬದರಿಕಾಶ್ರಮವಾಸಿಯಾದ ನಾರಾಯಣನು ನಮಗೆ ಮಂಗಳ ಉಂಟುಮಾಡಲಿ ಎಂದರ್ಥ. ಮುಂದೆ ಮಂತ್ರದ ವಿಷಯವಾಗಿಯೂ ಒಂದು ಮಂಗಳವನ್ನು ಆಚರಿಸಿದ್ದಾರೆ;

3. ಯದನ್ತಸ್ಥಮ ಶೇಷೇಣ ವಾಙ್ಮಯಂ ವೇದವೈದಿಕಂ ।
ತಸ್ಮೈವ್ಯಾಪಕ ಮುಖ್ಯಾಯ ಮಂತ್ರಾಯ ಮಹತೇ ನಮಃ ॥

—[ವೇದ] = ಶ್ರುತಿ. [ವೈದಿಕ] = ವೇದ ಮೂಲವಾದ ಸ್ಮೃತಿಯೇ ಮುಂತಾದ [ವಾಙ್ಮಯಂ ಯದನ್ತಃಸ್ಥಂ] = ಯಾವುದರಲ್ಲಿ ಅಡಗಿದೆಯೋ— "ಸರ್ವಮಷ್ಟಾಕ್ಷರಾನ್ತಃಸ್ಥಂ ಯಚ್ಚಾನ್ಯದಪಿ ವಾಙ್ಮಯಂ"—"ಅಕಾರೋವೈ ಸರ್ವಾವಾಕ್," "ಪ್ರಣವಾದ್ಯಾ ವಚನೇ ವೇದಾಃ ಪ್ರಣವೇ ಪರ್ಯವಸ್ಥಿತಾಃ"- ಇತ್ಯಾದಿಯು ಇದಕ್ಕೆ ಪ್ರಮಾಣ. ಅಂತಹ–[ಮಹತೇ ಮಂತ್ರಾಯ] = ಮಹಾಮಂತ್ರಕ್ಕೆ—ಇದು ಮೇಲೆ ಹೇಳಿರುವಂತೆ ಮೂರು ವ್ಯಾಪಕ ಮಂತ್ರಗಳಲ್ಲಿಯೂ ಮುಖ್ಯವಾದ್ದರಿಂದ [ವ್ಯಾಪಕ ಮುಖ್ಯಾಯ] – ಎಂದಿದೆ. ಇಂತಹ ಮಹಾ ಮಂತ್ರಕ್ಕೆ ನಮಸ್ಕಾರವೆಂದರ್ಥ.

ಸರ್ವವೂ ಮೂಲಮಂತ್ರದಲ್ಲಿ ಅಡಗಿದೆಯಾದಲ್ಲಿ ಅದರ ಅರ್ಥವನ್ನು ತಿಳಿಯುವುದು ಕಷ್ಟವೆನಿಸಿದಾಗ್ಯೂ, ಆಚಾರ್ಯಾನುಗ್ರಹವನ್ನು ಪಡೆದ ಭಾಗ್ಯಶಾಲಿಯು ಅದನ್ನು ಸುಲಭವಾಗಿ ತಿಳಿಯಬಲ್ಲನೆನ್ನುವುದಕ್ಕಾಗಿ :

"ಇಹ ಮೂಲ ಮಂತ್ರ ಸಂವೃತಮರ್ಥಮಶೇಷೇಣ ಕಶ್ಚಿದನುಭವತಿ ।
ಸ್ಫಟಿಕತಲ ನಿಹಿತ ನಿಧಿಮಿವ ದೇಶಿಕದತ್ತೇನ ಚಕ್ಷುಷಾ ಜನ್ತುಃ"— ಎಂದಿದ್ದಾರೆ.

1. ಮೂಲಮಂತ್ರ, ದ್ವಯ. ಚರಮ ಶ್ಲೋಕ—ಎಂಬ ಮೂರು ಮಂತ್ರಗಳೂ ಸೇರಿ ರಹಸ್ಯತ್ರಯವೆನಿಸಿವೆ. ಇವುಗಳೊಳಗೆ ಶ್ರೀ ಮೂಲ ಮಂತ್ರದ

ಪ್ರಥಮ ಪದವ ಪ್ರಥಮಾಕ್ಷರವಾದ 'ಅ'-ಕಾರದಿಂದ ವಾಚ್ಯವಾದ ಪರ ತತ್ತ್ವವನ್ನೂ, ನಡುವಣ ಪದವಾದ 'ನಮಃ'-ಎಂಬುದರಿಂದ ತೋರುವ ಉಪಾಯವನ್ನೂ' ಮೂರನೇ ಪದವಾದ 'ನಾರಾಯಣಾಯ'-ಎಂಬುದರಿಂದ ತೋರುವ ಉಪೇಯವನ್ನೂ ವಿಶದಗೊಳಿಸುವುದು ಶ್ರೀ ದ್ವಯಮಂತ್ರ. ಇದ ರೊಳಗಿನ "ಪ್ರಪದ್ಯೇ"—ಎಂಬುದರ ಉತ್ತಮ ಪುರುಷದಲ್ಲಿ ವಿವಕ್ಷಿತವಾದ ಅನನ್ಯಶರಣನಾದ ಅಕಿಂಚನಾಧಿಕಾರಿ ವಿಶೇಷವನ್ನೂ, ಅರ್ಥತಃ ಈ ಶರಣಾ ಗತಿಯೆಂಬ ಉಪಾಯಕ್ಕೆ ಆನುಕೂಲ್ಯ ಸಂಕಲ್ಪಾದಿಗಳನ್ನು ಬಿಟ್ಟು ಮತ್ತೇನೂ ಬೇಕಿಲ್ಲವೆಂಬುದನ್ನೂ, ಉಪೇಯದಲ್ಲಿ 'ನಮಃ'—ಎಂಬುದ ರಲ್ಲಿ ಸಂಕ್ಷಿಪ್ತವಾದ ವಿರೋಧಿನಿವೃತ್ತ್ಯಂಶವನ್ನೂ ಪ್ರಕಾಶಪಡಿಸುವುದು ಚರಮ ಶ್ಲೋಕ. ಮೂಲ ಮಂತ್ರವು ಮುಮುಕ್ಷುಗಳಿಗೆ ಸ್ವರೂಪಾದಿ ಜ್ಞಾನ ವುಂಟುಮಾಡುವುದರ ಮೂಲಕ ಧಾರಕವಾಗಿದೆ. ಚರಮಶ್ಲೋಕವು ಅನುಷ್ಠಾನಕ್ಕೆ ಮೂಲವಾಗಿ ಪೋಷಕವಾಗಿದೆ. ವಿಧಿಸದಿದ್ದಲ್ಲಿ ಉಪಾಯವು ಅನುಷ್ಠೇಯ ವಾಗದಷ್ಟೇ! ದ್ವಯವು ಪರಮ ಪುರುಷಾರ್ಥಕ್ಕೆ ಉಪಾಯಾನುಷ್ಠಾನ ರೂಪ ಮೂಲಕಾರಣವಾಗಿದ್ದುಕೊಂಡು ಭೋಗ್ಯವಾಗಿದೆ, ಭೋಗ್ಯವಾದ್ದರಿಂದಲೇ ಸದಾ ಅನುಸಂಧೇಯ. ಅನ್ನದಿಂದ ದೃಢವಾಗಿ, ದಧಿಕ್ಷೀರಾದಿಗಳಿಂದ ಪುಷ್ಟ ವಾದ ದೇಹಕ್ಕೆ ಸ್ರಕ್-ಚಂದನಾದಿಗಳು ಭೋಗ್ಯವಾಗಿರುವಂತೆ ಈ ಮೂರು ಮಂತ್ರಗಳೂ ಈ ಆತ್ಮನಿಗೆ ಕ್ರಮವಾಗಿ ಧಾರಕ–ಭೋಗ್ಯ–ಪೋಷಕಗಳಾಗಿವೆ.

ಈ ಮೂಲ ಮಂತ್ರದ ಪ್ರಭಾವವು ಆಥರ್ವಣ - ಕಠಾದ್ಯುಪನಿಷತ್ತು ಗಳಲ್ಲಿಯೂ, ಮನ್ವಾದಿ ಸರ್ವ ಶಾಸ್ತ್ರಗಳಲ್ಲಿಯೂ ನಾರಾಯಣಾತ್ಮಕ ಹೈರಣ್ಯ ಗರ್ಭ, ನಾರದೀಯ, ಬೋಧಾಯನಾದಿ ಬಹುವಿಧ ಕಲ್ಪಗಳಲ್ಲಿಯೂ ಪ್ರಸಿದ್ಧ. "ಓಂ ನಮೋ ನಾರಾಯಣಾಯೇತಿ ಮಂತ್ರೋಪಾಸಕಃ ವೈಕುಂಠಭುವನಲೋಕಂ ಗಮಿಷ್ಯತಿ। ಯೋ ಹವೈ ನಾರಾಯಣಸ್ಯಾಷ್ಟಾಕ್ಷರಂ ಪದಮಧ್ಯೇತಿ। ಅನು ಪಪ್ಲವಸ್ಸರ್ವಮಾಯುರೇತಿ । ವಿನ್ದತೇ ಪ್ರಾಜಾಪತ್ಯಂ ರಾಯಸ್ಪೋಷಂಗೋ ಪತ್ಯಂ । ತತೋಽಮೃತತ್ವಮಶ್ನುತೇ ತತೋಽಮೃತತ್ವಮಶ್ನುತೇ । ಏಕಾಕ್ಷರಾಂ ದ್ವಿಪದಾಂ ಷಟ್ಪದಾಂ ಚ- । ವಾಚಂ ದೇವಾ ಉಪಜೀವನ್ತಿ ವಿಶ್ವೇ, ವಾಚಂ ಗಂಧರ್ವಾಃ ಪಶವೋ ಮನುಷ್ಯಾಃ । ವಾಚೀಮಾ ವಿಶ್ವಾ ಭುವನಾನ್ಯರ್ಪಿತಾ ।"

—ಇತ್ಯಾದಿಗಳಲ್ಲಿ ಇದು ಪ್ರಸಿದ್ಧ ವೈಭವವುಳ್ಳದ್ದು. ಆದ್ದರಿಂದಲೇ ಪೂರ್ವಾಚಾರ್ಯರುಗಳಿಂದ ಅತ್ಯಂತವಾಗಿ ಆದರಿಸಲ್ಪಟ್ಟಿದೆ.

ಮಂತ್ರಾಂತರಗಳಿಗಿಂತ ಭಗವನ್ಮಂತ್ರಗಳು ಅಧಿಕ ; ಅವುಗಳಲ್ಲಿಯೂ, "ಮೂಲಮಂತ್ರ", "ಶ್ರೀ ವಾಸುದೇವ ದ್ವಾದಶಾಕ್ಷರೀ", "ಶ್ರೀ ವಿಷ್ಣುಷಡಕ್ಷರೀ"—ಎಂಬ ಈ ಮೂರು ವ್ಯಾಪಕ ಮಂತ್ರಗಳು ಅಧಿಕ; ಅವುಗಳಲ್ಲಿಯೂ ಮೂಲ ಮಂತ್ರವು :

"ಮಂತ್ರಾಣಾಂ ಪರಮೋ ಮಂತ್ರಃ ಗುಹ್ಯಾನಾಂ ಗುಹ್ಯಮುತ್ತಮಂ ।

ಪವಿತ್ರಂ ಚ ಪವಿತ್ರಾಣಾಂ ಮೂಲಮಂತ್ರಸ್ಸನಾತನಃ ॥"—ಇತ್ಯಾದಿಯ ಪ್ರಕಾರ ಅಧಿಕವಾಗಿ ಸರ್ವ ವೇದಗಳಿಗೂ ಸಾರವಾಗಿ, ಸಕಲ ಅನಿಷ್ಟಗಳನ್ನೂ ಹೋಗಲಾಡಿಸತಕ್ಕದ್ದಾಗಿ, ಸಕಲ ಪುರುಷಾರ್ಥಗಳಿಗೂ ಸಾಧನವಾಗಿ ಸಕಲ ಉಪಾಯಗಳಿಗೂ ಉಪಕಾರಕವಾಗಿ, ಎಲ್ಲಾ ವರ್ಣಗಳವರಿಗೂ ಆಯಾ ಅಧಿಕಾರಾನುಗುಣವಾಗಿ ವೈದಿಕ ರೂಪದಿಂದಲೂ, ತಾಂತ್ರಿಕ (ಪ್ರಣವ ರಹಿತ) ರೂಪದಿಂದಲೂ ಆಶ್ರಯವಾಗಿ, ವ್ಯಾಪ್ಯ ತತ್ತ್ವ (ಚೇತನಾಚೇತನಗಳು) ವ್ಯಾಪಕ ತತ್ತ್ವ (ಪರಮಾತ್ಮ) ಮುಂತಾದುವುಗಳು ಕಂಠೋಕ್ತಿಮತ್ತಾಗಿ, ತನ್ನನ್ನು ಅಧಿಕರಿಸುವವನಿಗೆ ಮತ್ತೊಂದು ಮಂತ್ರದ ಅಪೇಕ್ಷೆಯಿಲ್ಲವಂತೆಯಾಗಿ ಸಕಲ ಭಗವನ್ಮೂರ್ತಿಗಳಿಗೂ ಸಾಧಾರಣವಾಗಿರುವುದರಿಂದ ಇದೇ ಅತ್ಯಾದರಣೀಯವಾದುದು.

ಆಳ್ವಾರ್ರುಗಳೂ. "ಎನ್ನಿರುಪೆಟ್ಟೆಳ್ರುತ್ತುಂ ಕತ್ತು..........."—" "ಎಟ್ಟೆಳ್ರುತ್ತುಂ ಓದುವಾರ್‌ಕಳ್ ವಲ್ಲರ್ ವಾನಮಾಳವೇ "—" ನಾಡು ನಕರಮುಂ ನನ್ಕರಿಯ ನಮೋ ನಾರಾಯಣಾಯ," - "ಪಲ್‌ವ ಕೈಯಾಲ್ ನಮೋ ನಾರಾಯಣಾ"– ಎಂದೂ, ಈ ಮಂತ್ರವನ್ನೇ ಅತ್ಯಾದರಿಸಿದ್ದಾರೆ, ಋಷಿಗಳೂ,

"ಬಹವೋऽಪಿ ಮಹಾತ್ಮಾನಃ ಮುನಯಸ್ಸನಕಾದಯಃ ।
ಅಷ್ಟಾಕ್ಷರಂ ಸಮಾಶ್ರಿತ್ಯ ತೇ ಜಗ್ಮುರ್ವೈಷ್ಣವಂ ಪದಂ ॥
ಯಥಾ ಸರ್ವೇಷು ದೇವೇಷು ನಾಸ್ತಿ ನಾರಾಯಣಾತ್ಪರಃ ।
ತಥಾ ಸರ್ವೇಷು ಮಂತ್ರೇಷು ನಾಸ್ತಿ ಚಾಷ್ಟಾಕ್ಷರಾತ್ಪರಃ ॥
ಭೂತ್ವೋರ್ಧ್ವ ಬಾಹುರತ್ರಾದ್ಯ ಸತ್ಯಪೂರ್ವಂ ಬ್ರವೀಮಿ ವಃ ।

ಹೇ ಪುತ್ರ ಶಿಷ್ಯಾಃ ಶೃಣುತ ನ ಮಂತ್ರೋಽಷ್ಟಾಕ್ಷರಾತ್ಪರಃ ॥
ತದರ್ಚನ ಪರೋ ನಿತ್ಯಂ ತದ್ಭಕ್ತಸ್ತಂ ನಮಸ್ಕುರು ।
ತದ್ಭಕ್ತಾ ನ ವಿನಶ್ಯನ್ತಿ ಹ್ಯಷ್ಟಾಕ್ಷರ ಪರಾಯಣಾಃ ॥
ಆಸೀನಾ ವಾ ಶಯಾನಾ ವಾ ತಿಷ್ಠಂತೋ ಯತ್ರ ಕುತ್ರ ವಾ ।
ನಮೋ ನಾರಾಯಣೇತಿ ಮಂತ್ರೈಕಶರಣಾ ವಯಂ ॥

ಸರ್ವ ಮಷ್ಟಾಕ್ಷರಾಂತಸ್ಥಂ, "— ಇತ್ಯಾದಿಯಾಗಿ ಅನುಗ್ರಹಿಸಿದ್ದಾರೆ. ಈ ತಿರುಮಂತ್ರವನ್ನು ಸರ್ವೇಶ್ವರನು ಶ್ರೀ ನಾರದರ ಮೂಲಕ ಶ್ರೀ ಪುಂಡರೀಕನಿಗೆ ಉಪದೇಶ ಮಾಡಿಸಿದ. ಅವನೂ ಇದನ್ನೇ ಪರಮ ಹಿತವೆಂದು ಕೇಳಿದ್ದರಿಂದ :

"ಪುಂಡರೀಕೋಽಪಿ ಧರ್ಮಾತ್ಮಾ ನಾರಾಯಣ ಪರಾಯಣಃ ।
ನಮೋ ನಾರಾಯಣಾಯೇತಿ ಮಂತ್ರಮಷ್ಟಾಕ್ಷರಂ ಜಪನ್, "—

ಇತ್ಯಾದಿಗಳಲ್ಲಿ ಹೇಳಿರುವಂತೆಯೇ ಈ ಮಂತ್ರದಲ್ಲಿಯೇ ನಿಷ್ಠನಾಗಿ ಮುಕ್ತಿ ಹೊಂದಿದ. ಈ ಮಂತ್ರವನ್ನು ತಿರುಮಂಗೈಯಾಳ್ವಾರ್ರಿಗೆ ಸರ್ವೇಶ್ವರನು ತಾನೇ ಉಪದೇಶಿಸಿದ. ಇದು ಪ್ರಣವ-ಚತುರ್ಥಿಗಳಿಲ್ಲದೆ ಇದ್ದಲ್ಲಿ ಸರ್ವಾಧಿಕಾರವಾದುದೆಂದು ಶ್ರೀ ವರಾಹ ಪುರಾಣದಲ್ಲಿ ಕೈಶಿಕ ದ್ವಾದಶೀ ಮಾಹಾತ್ಮ್ಯದಲ್ಲಿ, "ನಮೋ ನಾರಾಯಣೇತ್ಯುಕ್ತ್ವಾ ಶ್ವಪಾಕಃ ಪುನರಾಗಮತ್ ॥ "— ಎಂದು ಹೇಳಲ್ಪಟ್ಟಿದೆ. "ನಾಮಮುಂ ಶೊಲ್ಲಿಲ್ ನಮೋ ನಾರಾಯಣಮೇ "—ಎಂದೂ, "ನ್ ಮಾಲೈ ಕೊಂಡು ನಮೋ ನಾರಾಯಣಾ... ...."— ಎಂದೂ, "ನಾಪಾಯಿಲುಂಡೇ ನಮೋ ನಾರಣಾವೆನ್ನೋ ಮಾತು ರೈಕ್ಕು ಮುರೈಯುಂಡೇ"— ಎಂದೂ ಹೇಳಿರುವ ಪಾಶುರಗಳಿಂದಲೂ ಇದು ಸಿದ್ಧ. ಇದು ಬ್ರಾಹ್ಮಣಾದಿಗಳಿಗೆ "ಓಂ ನಮೋ ನಾರಾಯಣಾಯೇತಿ ಮಂತ್ರೋಪಾಸಕಃ "— ಎಂದು ಅಧೀತವಾದ ಕ್ರಮದಲ್ಲಿ ಪ್ರಣವದೊಂದಿಗೆ ಕೂಡಿ ಅಷ್ಟಾಕ್ಷರಗಳುಳ್ಳದ್ದಾಗಿದೆ. "ವೈದಿಕಂ ತಾಂತ್ರಿಕಂ ಚೈವ ತಥಾ ವೈದಿಕ ತಾಂತ್ರಿಕಂ । ತ್ರಿವಿಧಂ ಕರ್ಮ ಸಂಪ್ರೋಕ್ತಂ ಪಂಚರಾತ್ರಾಮೃತಾರ್ಣವೇ ॥ ವೈದಿಕಂ ಬ್ರಾಹ್ಮಣಾನಾಂತು ರಾಜ್ಞಾಂ ವೈದಿಕ ತಾಂತ್ರಿಕಂ । ತಾಂತ್ರಿಕಂ ವೈಶ್ಯಶೂದ್ರಾಣಾಂ ಸರ್ವೇಷಾಂ ತಾಂತ್ರಿಕಂ ತುವಾ ॥ ಅಷ್ಟಾಕ್ಷರಶ್ಚ ಯೋ ಮಂತ್ರೋ ವಿಷ್ಣೋ ರಮಿತ ತೇಜಸಃ । ಏತೇ ಮಂತ್ರಾಃ ಪ್ರಧಾನಾಸ್ತು

ಇಷ್ಟು ಕಾಲವೂ ಬರದಿದ್ದ ಸಂಸಾರವೈರಾಗ್ಯಾದಿಗಳೂ, ಇದಕ್ಕೆ ಮೂಲವಾದ ಸದಾಚಾರ್ಯಪ್ರಾಪ್ತ್ಯಾದಿಗಳೂ ಈಗ ಯಾವನಿಗಾದರೂ ಹೇಗೆ ಬಂದಾವು ?—ಬರುವುದಾದರೆ ಎಲ್ಲರಿಗೂ ಬರದಿರುವುದೇಕೆ ?—ಪ್ರಕೃತಿ ಪುರುಷಭೋಗಗಳಲ್ಲಿ ದುಃಖ ಮಿಶ್ರತ್ವ ಅಲ್ಪತ್ವಾದಿ ದೋಷಗಳಿದ್ದಾಗ್ಯೂ, ಸುಖ ರೂಪತ್ವವೂ ಇರುವುದರಿಂದ ಅವುಗಳ ಪ್ರಯುಕ್ತ ಅವು ಗ್ರಾಹ್ಯವಾಗವೋ ?—ಇತ್ಯಾದಿ ಶಂಕೆಗಳನ್ನು ಮೇಲಣ ಶ್ಲೋಕದಲ್ಲಿಯು "ದೈವಾತ್"—ಮೊದಲಾದ ಪದಗಳಿಂದ ಪರಿಹರಿಸಿದ್ದಾರೆ. "ದೈವಾತ್"—ಎಂದರೆ ಯಾದೃಚ್ಛಿಕ ಸುಕೃತಾದಿ ಮೂಲಪೂವ ಜಾಯಮಾನ ಕಟಾಕ್ಷ ರೂಪ ಭಗವದನುಗ್ರಹ ವಿಶೇಷದಿಂದ ಎಂದರ್ಥ. ಈ ವಿಧವಾದ ಭಗವದನು ಗ್ರಹ ವಿಶೇಷವಿಲ್ಲದ್ದರಿಂದ ಎಲ್ಲರಿಗೂ ಇಷ್ಟು ಕಾಲ ಸಂಸಾರದಲ್ಲಿ ವೈರಾಗ್ಯಾದಿಗಳು ಹುಟ್ಟಲಿಲ್ಲವಾದರೂ, ಜಗತ್ತಿನಲ್ಲಿ ಯಾವನಾದರೂ ಒಬ್ಬನಿಗಾದರೂ ಒಂದು ಕಾಲ ವಿಶೇಷದಲ್ಲಿ ಈ ಅನುಗ್ರಹ ಸಂಭವವಾದ್ದರಿಂದ ಅವನಿಗೆ ಸಂಸಾರ ವೈರಾಗ್ಯಾದಿಗಳು ಉಂಟಾಗ ಬಹುದೆಂದು ಭಾವ.

## ೮. ಅಧಿಕಾರಿ ವಿಭಾಗಾಧಿಕಾರ

ಹೀಗೆ ನಿವೃತ್ತಿ ಧರ್ಮಗಳಾದ ಪರಮಪುರುಷಾರ್ಥೋಪಾಯಗಳಲ್ಲಿ ಪ್ರವೃತ್ತರಾದ ಅಧಿಕಾರಿಗಳು ಎರಡು ಬಗೆ — ಅವರು ಅದ್ವಾರಕ ಪ್ರಪತ್ತಿ ನಿಷ್ಠರು ಮತ್ತು ಸದ್ವಾರಕ ಪ್ರಪತ್ತಿ ನಿಷ್ಠರೆಂಬುವರು. ಇವರೊಳಗೆ ಅದ್ವಾರಕ ಪ್ರಪತ್ತಿನಿಷ್ಠರಾದವರು, ಮೋಕ್ಷಕ್ಕೆ ಭಕ್ತಿಯನ್ನು ದ್ವಾರವಾಗಿ ಮಾಡಿಕೊಳ್ಳದೆ ಸ್ವತಂತ್ರವಾಗಿ ಪ್ರಪತ್ತಿಯನ್ನು ಅನುಷ್ಠಿಸುತ್ತಾರೆ. ಸದ್ವಾರಕರಾದರೋ — ಮೋಕ್ಷಕ್ಕಾಗಿ ಭಕ್ತಿಯನ್ನು ಸ್ವೀಕರಿಸಿ, ಅದಕ್ಕೆ ಅಂಗವಾಗಿ ಪ್ರಪತ್ತಿಯನ್ನು ಅನುಷ್ಠಿಸುತ್ತಾರೆ. ಹೀಗೆ ಸ್ವತಂತ್ರ ಪ್ರಪತ್ತಿ — ಅಂಗ ಪ್ರಪತ್ತಿಗಳಿಂದ ಇವರಿಬ್ಬರೂ ಪ್ರಪನ್ನರೇ. ಕ್ರಮವಾಗಿ ಫಲಭಕ್ತಿ-ಸಾಧನ ಭಕ್ತಿಗಳಿಂದ ಇವರೀರ್ವರೂ ಭಕ್ತರೂ ಹೌದು.

ಅದ್ವಾರಕ ಪ್ರಪತ್ತಿ ನಿಷ್ಠರಲ್ಲಿ — ಸ್ವನಿಷ್ಠರು, ಉಕ್ತಿನಿಷ್ಠರು, ಆಚಾರ್ಯ ನಿಷ್ಠರೆಂಬುದಾಗಿ ಮೂರುವಿಧ ಅವಾಂತರ ಭೇದಗಳುಂಟು.

ಹೀಗೆ ವಿಶದಜ್ಞಾನದೊಡನೆಯೋ, ಸಮುದಾಯ ಜ್ಞಾನದೊಡನೆಯೋ ಅಂಗವಾಗಿಯೋ - ಸ್ವತಂತ್ರವಾಗಿಯೋ, ತಾವೇಯೋ - ಉಕ್ತಿನಿಷ್ಠೆ ಅಥವಾ

"ಆದ್ಯಂ ತು ತ್ರ್ಯಕ್ಷರಂ ಬ್ರಹ್ಮ ತ್ರಯೀ ಯತ್ರಪ್ರತಿಷ್ಠಿತಾ ।
ಸಗುಹ್ಯೋಽನ್ಯಃ ತ್ರಿವೃದ್ವೇದಃ ಯಸ್ತಂ ವೇದ ಸ ವೇದವಿತ್"–

ಇತ್ಯಾದಿಗಳಲ್ಲಿ ಪ್ರಸಿದ್ಧ, ಇದರ ಅರ್ಥ :–[ಆದ್ಯಂ] = ''ಯದ್ವೇದಾದೌಸ್ವರಃ ಪ್ರೋಕ್ತಃ"–ಎಂದಿರುವಂತೆ ಸಕಲ ವೇದಗಳಿಗೂ ಆದಿಯಲ್ಲಿ ಉಚ್ಚರಿಸಲ್ಪಡುವ [ತ್ರಯೀ ಯತ್ರಪ್ರತಿಷ್ಠಿತಾ] = "ಓಂ ಕಾರಪ್ರಭವಾ ವೇದಾಃ–ಅಕಾರಾತ್ಮಾ ಹಿ ಋಗ್ವೇದಃ ಉಕಾರಾತ್ಮಾ ಯಜುಶ್ಶ್ರುತಿಃ–ಸಾಮವೇದೋ ಮಕಾರಾತ್ಮಾ ಅನುಸ್ವಾರೋಹ್ಯಥರ್ವಣಃ"–ಎಂದಿರುವುದರಿಂದ ನಾಲ್ಕು ವೇದಗಳೂ ಇದರಲ್ಲಿ ಪ್ರತಿಷ್ಠಿತವಾಗಿದೆಯೆಂದರ್ಥ. [ತ್ರಿವೃತ್] = ಮೂರು ಅಕ್ಷರಗಳುಳ್ಳ [ಸಃ] = ಪ್ರಣವವೆಂಬು ಆ ವೇದವೇ [ಅನ್ಯಃ] = ವೇದಾಂತರಕ್ಕಿಂತ ವಿಲಕ್ಷಣ-[ಗುಹ್ಯಃ] = ಸ್ತ್ರೀ ಶೂದ್ರಾದಿಗಳಿಗೆ ಉಪದೇಶ್ಯವಲ್ಲದ್ದರಿಂದ ಶಬ್ದತಃ, ಮತ್ತು ಅರ್ಥತಃ ರಹಸ್ಯವಾದದ್ದು. [ಯಃ, ತಂ ವೇದ ಸ ವೇದ–ವಿತ್] = ಇಂತಹ ಪ್ರಣವವನ್ನು ಬಲ್ಲವನೇ ವೇದವನ್ನು ಬಲ್ಲವನು.— ಎಂದು ಪ್ರಣವವು ಪ್ರಶಂಸಿತವಾಗಿದೆ.

"ವಸುರಣ್ಯೋ ವಿಭೂರಸಿ–"-ಎಂದು ಆರಂಭವಾಗಿ "ಬ್ರಹ್ಮಣೇ ತ್ವಾ ಮಹಸ ಓಂ-ಇತ್ಯಾತ್ಮಾನಂ ಯುಂಜೀತ"-ಇತ್ಯಾದಿ ಪ್ರಮಾಣಗಳಿಂದ ಪ್ರಣವವು ಸ್ವತಂತ್ರವಾಗಿಯೂ ಆತ್ಮಸಮರ್ಪಣಪರ ಮಂತ್ರಾಂತರಕ್ಕೆ ಅವಯವವಾದಾಗಲೂ, ಇದು ಸಮಾನವೆನ್ನುವುದಕ್ಕಾಗಿ, ಈ ಪ್ರಣವವು––

"ಹವಿರ್ಗೃಹೀತ್ವಾತ್ಮರೂಪಂ ವಸುರಣ್ಯೇತಿ ಮಂತ್ರತಃ ।
ಜುಹುಯಾತ್ ಪ್ರಣವೇನಾಗ್ನೌ ಅಚ್ಯುತಾಖ್ಯೇ ಸನಾತನೇ ॥"—

ಎಂಬಂತೆಯೇ ನ್ಯಾಸವಿದ್ಯೆಯಲ್ಲಿ ಸ್ವತಂತ್ರವಾಗಿ ಆತ್ಮಸಮರ್ಪಣಪರವಾದಂತೆ ಇಲ್ಲಿಯೂ ಸಮರ್ಪಣಪರವಾಗಿಯೂ ಯೋಜಿಸುತ್ತಾರೆ.

ಮೂಲ ಮಂತ್ರದಲ್ಲಿಸ್ವರೂಪ ಜ್ಞಾನವು ಪ್ರಧಾನ ವಾದುದರಿಂದ ಶೇಷತ್ವಾನುಸಂಧಾನ ಮಾತ್ರವೇ ಮೊದಲು ಸಂಪಾದ್ಯ. ಶೇಷತ್ವಜ್ಞಾನವಿದ್ದಲ್ಲಿ ಭರಸಮರ್ಪಣಕ್ಕೆ ಅಧಿಕಾರ ಸಿದ್ಧಿಸುವುದೆಂದು ಭಾವ. "ಕ್ಷೇತ್ರಜ್ಞಸ್ಯೇಶ್ವರಜ್ಞಾನಾತ್ ವಿಶುದ್ಧಿಃ ಪರಮಾ ಮತಾ"-ಎಂದಿದೆಯಷ್ಟೆ ! ಪ್ರಣವದಲ್ಲಿಯ ಅ-ಕಾರಕ್ಕೆ-"ಅವತಿ + ಇತಿ = ಅಃ"–ಎಂಬ ವ್ಯುತ್ಪತ್ತಿಯಿಂದ ವಿಷ್ಣು–ಅಂದರೆ, ರಕ್ಷಕನೆಂದರ್ಥ, ಅಕಾರವು ವಿಷ್ಣುವಾಚಕವಷ್ಟೆ ! ಸಂಕೋ

ಚಕವಿಲ್ಲದ್ದರಿಂದ ವಿಷ್ಣು ಸರ್ವರಿಗೂ ರಕ್ಷಕನೆಂದರ್ಥ. ಹೀಗೆ ಸ್ವಾಭಾವಿಕವಾದ ಅವನ ರಕ್ಷಕತ್ವಕ್ಕೆ ಅನಾದಿ ಕಾಲದಿಂದ ನಾವು ನಡೆಸುತ್ತಾ ಬಂದಿರುವ ಭಗವನ್ನಿಗ್ರಹ ಸಂಕಲ್ಪವು ಅಡ್ಡಿಯಾಗಿದೆ. ಈ ಪ್ರತಿ ಬಂಧಕವನ್ನು ನೀಗಿಸುವುದಕ್ಕಾಗಿಯೇ ಪ್ರಪತ್ತಿಯೇ ಮುಂತಾದ ವ್ಯಾಜಗಳು ಶಾಸ್ತ್ರಸಿದ್ಧವಾಗಿವೆ. ರಕ್ಷಣಕ್ಕೆ ಪ್ರಧಾನ ಕಾರಣ ವಿಷ್ಣುವಿನ ಸ್ವಾಭಾವಿಕವಾದ ಕಾರುಣ್ಯ. ಪ್ರಪತ್ತಿ ಮುಂತಾದುದು ವ್ಯಾಜ ಮಾತ್ರ.

"ತ್ರಾಣೇ ಸ್ವಾಮಿತ್ವಮೌಚಿತ್ಯಂ ನ್ಯಾಸಾದ್ಯಾಃ ಸಹಕಾರಿಣಃ ।

ಪ್ರಧಾನ ಹೇತುಃ ಸ್ವಾತಂತ್ರ್ಯವಿಶಿಷ್ಟಾ ಕರುಣಾ ವಿಭೋಃ ॥" — ಎಂದಿದೆಯಷ್ಟೆ ! ಸರ್ವರನ್ನೂ ರಕ್ಷಿಸುವುದರಲ್ಲಿಯೇ ಸಂಕಲ್ಪವುಳ್ಳ ಈಶ್ವರನು.

"ಲಕ್ಷ್ಮ್ಯಾಸಹ ಹೃಷೀಕೇಶಃ ದೇವ್ಯಾಕಾರುಣ್ಯರೂಪಯಾ ।

ರಕ್ಷಕಸ್ಸರ್ವಸಿದ್ಧಾನ್ತೇ ವೇದಾನ್ತೇಷು ಚ ಕಥ್ಯತೇ॥"—ಎಂಬಂತೆ ಸ ಸಪತ್ನೀಕನಾಗಿಯೇ ರಕ್ಷಣದಲ್ಲಿ ಸಿದ್ಧನಾಗಿರುವುದರಿಂದ ಇಲ್ಲಿ ಪತ್ನೀಸಂಬಂಧವು ಅರ್ಥತಃ ಸಿದ್ಧಿಸುತ್ತೆ. "ಸಹ ವಾ ಪ್ರವೃತ್ತಿಃ, ಸಹವಾನಿವೃತ್ತಿಃ॥"—ಎಂಬ ಸನ್ನಿಯೋಗ ಶಿಷ್ಟನ್ಯಾಯದಿಂದ ಭಗವಂತನನ್ನು ಹೇಳುವ ಎಡೆಗಳೆಲ್ಲವೂ ಅವನ ದಿವ್ಯಮಹಿಷಿಯನ್ನೂ ಹೇಳುತ್ತವೆಯೆಂದು ತಿಳಿಯಬೇಕು. "ತದಂತ-ರ್ಭಾವಾತ್ ತ್ವಾಂ ನ ಪೃಥಗಭಿಧತ್ತೇ ಶ್ರುತಿರಪಿ" ॥ ಎಂಬ ಶ್ರೀ ಭಟ್ಟರ ಶ್ರೀಸೂಕ್ತಿಯೂ ಇದಕ್ಕೆ ಪ್ರಮಾಣ. ಈ ಪತ್ನೀ ಸಂಬಂಧರೂಪವಾದ ವಿಶೇಷಣವು ಸರ್ವ ವಿದ್ಯೆಗಳಲ್ಲಿಯೂ, ಅನುಸಂಧೇಯ. ದೇವತಾಂತರವನ್ನು ತಳ್ಳಿ ಹಾಕುವುದರ ಮೂಲಕ ಈ ವಿಶೇಷಣವು ಸ್ವತಂತ್ರನ ದಿವ್ಯಾತ್ಮಸ್ವರೂಪವನ್ನು ನಿರೂಪಿಸುತ್ತದೆ. ಪ್ರಣವದ 'ಅ'-ಕಾರದಲ್ಲಿ ಅದರ ಚತುರ್ಥೀ ವಿಭಕ್ತಿ ಲುಪ್ತವಾಗಿದೆ. ಪ್ರಥಮ—ತೃತೀಯಾಕ್ಷರಗಳನ್ನು ಸಮಾನಾಧಿಕರಣಗಳಾಗಿ ಸ್ವೀಕರಿಸಿ ಜೀವ–ಪರಮಾತ್ಮರ ಸ್ವರೂಪೈಕ್ಯವು

ಇಲ್ಲಿ ವಿವಕ್ಷಿತವೆಂಬುದು "ದ್ವಾಸುಪರ್ಣಾ..." "ಪೃಥಗಾತ್ಮಾನಂಪ್ರೇರಿತಾರಂಚ...... ॥" —ಇತ್ಯಾದಿ ಬಹು ಪ್ರಮಾಣಗಳಿಗೆ ವಿರುದ್ಧ—

ಪ್ರಣವೋ ಧನುಶ್ಶರೋಹ್ಯಾತ್ಮಾ ಬ್ರಹ್ಮತಲ್ಲಕ್ಷ್ಯಮುಚ್ಯತೇ ।

ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥

—ಎಂಬಲ್ಲಿ ಪ್ರಣವವನ್ನು ಧನುಸ್ಸನ್ನಾಗಿಯೂ ಆತ್ಮಾವನ್ನು ಶರವನ್ನಾಗಿಯೂ

ಬ್ರಹ್ಮನನ್ನು ಲಕ್ಷ್ಯವನ್ನಾಗಿಯೂ ಆತ್ಮ ಸಮರ್ಪಣವನ್ನು ಲಕ್ಷ್ಯವೇಧನ ವನ್ನಾಗಿಯೂ ಹೇಳಿರುವ ವಾಕ್ಯದಿಂದಲೂ 'ಆ'-ಕಾರದ ಚತುರ್ಥೀ ವಿಭಕ್ತಿ ಯೆಂಬುದು ಸಿದ್ಧ. ಪ್ರಣವದ 'ಉ' ಕಾರವನ್ನು ಲಕ್ಷ್ಮೀವಾಚಕವಾಗಿ ಹೇಳುವ ಶತಶ್ರುತಿ ವಾಕ್ಯದಿಂದ ದಿವ್ಯದಂಪತಿಗಳಿಬ್ಬರಿಗೂ ಈ ಚೇತನನು ಶೇಷನೆಂಬುದೂ ಸಿದ್ಧ. ತನಗೊಂದು ಉಪಕಾರವನ್ನು ಪ್ರಧಾನವಾಗಿ ಆಶ್ರಯಿಸದೆಯೇ ಪರೋಪ ಕಾರಕ್ಕೆ ಅರ್ಹವಾಗಿರುವಿಕೆಯೇ ಶೇಷತ್ವವೆಂಬುದು. ಭಗವದಭಿಮತವಾದ ಭಾಗವತಶೇಷತ್ವದಿಂದ ಅನ್ಯಶೇಷತ್ವ ದೋಷವಿಲ್ಲದ್ದರಿಂದ ಅವಧಾರಣಾರ್ಥಕ 'ಉ'-ಕಾರದಿಂದ ಭಾಗವತ ಶೇಷತ್ವಕ್ಕೆ ನಿವೃತ್ತಿಯೆನ್ನಕೂಡದು. ಈ ಪರಶೇಷ ತ್ವೈಕರಸವಾದ ಪರಿಶುದ್ಧ ಸ್ವರೂಪವೇ ಮುಮುಕ್ಷುದಶೆಯಲ್ಲಿ ಅನುಸಂಧೇಯ ವೆಂಬುದು "ವ್ಯತಿರೇಕಸ್ತದ್ಭಾವ ಭಾವಿತ್ವಾತ್" —ಎಂಬ ಸೂತ್ರದಿಂದ ಸಿದ್ಧ. ವ್ಯತಿರೇಕ=ವೈಲಕ್ಷಣ್ಯ. ಮೋಕ್ಷ-ದಶೆಯಲ್ಲಿ ಅಪಹತ ಪಾಪ್ಮತ್ವಾದಿ ರೂಪ ವೈಲಕ್ಷಣ್ಯ ಯಾವುದುಂಟೋ ಅದು ಮುಮುಕ್ಷು ದಶೆಯಲ್ಲಿಯೂ ಅನು ಸಂಧೇಯವೆಂದು ಈ ಬ್ರಹ್ಮಸೂತ್ರದ ಅರ್ಥ.

'ನಮಃ'– ಎಂಬುದರ ಅರ್ಥವೇ ಅತ್ಯಂತ ಸಾರವಾದದ್ದು- "ದ್ವ್ಯಕ್ಷರಸ್ತು ಭವೇತ್ ಮೃತ್ಯುಃ ನಮಮೇತಿ ಚ ಶಾಶ್ವತಂ" ಇತ್ಯಾದಿ ಪ್ರಮಾಣ ಸಿದ್ಧ- ವಿದು. ನಾರಾಯಣ ಶಬ್ದವು ಸ್ವರ–ವ್ಯಂಜನ ಭೇದದಿಂದ ಎಂಟು ಅಕ್ಷರಗ ಳಾಗಿ ಭಾವಿಸಿದರೆ ಮೂಲಮಂತ್ರಕ್ಕೆ ಸಮಾನವಾಗುತ್ತೆ. ಹೇಗೆಂದರೆ: ನ್ + ಆ + ರ್ + ಆಯ್ + ಅ + ಣ್ + ಅ = ನಾರಾಯಣ - ಎಂಬುದಾಗಿ ನಾರಾಯಣ ಶಬ್ದದ ಪ್ರಭಾವವು "ಸಂಕೀರ್ತ್ಯ ನಾರಾಯಣ ಶಬ್ದ ಮಾತ್ರಂ ವಿಮುಕ್ತ ದುಃಖಾಸ್ಸುಖಿನೋ ಭವನ್ತಿ,," "ನಾರಾಯಣೇತಿ ಯಸ್ಯಾಸ್ಯೇ ವರ್ತತೇ ನಾಮ ಮಂಗಳಂ। ನಾರಾಯಣಸ್ತಮನ್ವಾಸ್ತೇ ವತ್ಸಂ, ಗೌರ್ವತ್ಸಲಾ ಯಥಾ॥" "ಕುಲಂ ತರುಮ್ ಶೆಲ್ವಮ್ ತನ್ದಿಡುಮ್" — "ನಾರಣನ್ತಮ್ ಮನ್ನೈ ನರಕಂ ಪುಕಾಳ್"– "ರೋಗಾಪದ್ಭಯ ದುಃಖೇಭ್ಯೋ ಮುಚ್ಯನ್ತೇ ನಾತ್ರ ಸಂಶಯಃ। ಅಪಿ ನಾರಾಯಣೇತ್ಯೇತತ್ ಶಬ್ದಮಾತ್ರ ಪ್ರಲಾಪಿನಃ" ಇತ್ಯಾದಿಯಾಗಿ ಹೇಳಲ್ಪಟ್ಟಿದೆ.

ಶಾರೀರಕಾಧ್ಯಾಯ ಚತುಷ್ಟಯ ಪ್ರತಿಪಾದ್ಯಗಳಾದ ನಾಲ್ಕು ಅರ್ಥಗಳೂ –ಅಂದರೆ "ಕಾರಣತ್ವಂ ಅಬಾಧ್ಯತ್ವಂ ಉಪಾಯತ್ವಂ ಉಪೇಯತಾ। ಇತಿ

ಶಾರೀರಕಸ್ಯಾಪ್ಯಂ ಇಹ ಚಾಪಿ ವ್ಯವಸ್ಥಿತಂ" – ಎಂಬಂತೆ ಈ ನಾರಾಯಣ ಶಬ್ದದಲ್ಲಿ ಸಂಗ್ರಹವಾಗಿ ಸಿದ್ಧವಾಗಿದೆ. ಹೇಗೆಂದರೆ, ನರಾಜ್ಜಾತಾನಿ ತತ್ತ್ವಾನಿ ನಾರಾಣೀತಿ ತತೋವಿದುಃ । ತಾನ್ಯೇವ ಚಾಯನಂತಸ್ಯ ತೇನ ನಾರಾಯಣಃ ಸ್ಮೃತಃ ॥" —ಇತ್ಯಾದಿಗಳಲ್ಲಿ - ಕಾರಣತ್ವ ರೂಪ ಪ್ರಥಮಾಧ್ಯಾಯದ ಅರ್ಥವೂ, 'ರಿಜ್-ಕ್ಷಯೇ' - ಇತಿ ಧಾತುನಿಷ್ಪನ್ನವಾದ - (ರೀಯತೆ - ಇತಿ ರಃ - ರಃ ನಭವತೀತಿ ನರಃ) - ಎಂಬ ಕ್ಷಯರಾಹಿತ್ಯೋಕ್ತಿಯ ಮೂಲಕ ನರ ಶಬ್ದದಿಂದ 'ಅಬಾಧ್ಯತ್ವಂ' - ಎಂಬ ದ್ವಿತೀಯಾಧ್ಯಾಯಾರ್ಥವೂ, 'ಈಯತೇ ಅನೇನ' - ಎಂಬ ಕರಣವ್ಯುತ್ಪತ್ತಿ ಸಿದ್ಧವಾದ ಅಯನ ಶಬ್ದದಿಂದ ಮೂರನೇ ಅಧ್ಯಾಯ ಪ್ರತಿಪಾದ್ಯವಾದ ಉಪಾಯತ್ವವೂ, ಕರ್ಮವ್ಯುತ್ಪತ್ತಿಯಿಂದ ಕೋರುವ ಪ್ರಾಪ್ಯತ್ವವೆಂಬ ಅರ್ಥದಿಂದ ನಾಲ್ಕನೇ ಅಧ್ಯಾಯ ಪ್ರತಿಪಾದ್ಯವಾದ ಉಪೇಯತ್ವವೂ—ಹೀಗ ನಾಲ್ಕು ಶಾರೀರಕದ ಅರ್ಥಗಳೂ 'ನಾರಾಯಣ' —ಶಬ್ದದಿಂದ ಸಿದ್ಧವಾಗುತ್ತವೆ.

ವ್ಯಾಪ್ಯ—ವ್ಯಾಪಕ ಭಾವ

ನಾರಾಣಾಂ + ಅಯನಂ = ನಾರಾಯಣಃ (ತತ್ಪುರುಷ)

ನಾರಾಃ - ಅಯನಂ + ಯಸ್ಯಸಃ = ನಾರಾಯಣಃ (ಬಹುವ್ರೀಹಿ)

ಕರ್ಮವ್ಯುತ್ಪತ್ತಿ - ಈಯತೇ, ಅಸೌ (ಅಯನಂ) - ಉಪೇಯ.

ಅಧಿಕರಣವ್ಯುತ್ಪತ್ತಿ - ಈಯತೇ, ಅಸ್ಮಿನ್ - ಇತಿ - ಅಯನಂ - ಆಧಾರ.

ಕರಣವ್ಯುತ್ಪತ್ತಿ - ಈಯತೇ, ಅನೇನ - ಇತಿ ಅಯನಂ - ಉಪಾಯ.

ಅಯನ ಶಬ್ದಕ್ಕೆ - ವಾಸಸ್ಥಾನವೆಂದೂ ಅರ್ಥ. ಹೀಗೆ ಬಹುವ್ರೀಹಿ ಸಮಾಸದಲ್ಲಿ ಈಶ್ವರನ ಅಂತರ್ವ್ಯಾಪ್ತಿಯೂ, ತತ್ಪುರುಷ ಸಮಾಸದಲ್ಲಿ ಬಹಿರ್ವ್ಯಾಪ್ತಿಯೂ ತೋರುತ್ತದೆ. ಇವೆರಡನ್ನೂ—"ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಃ ಸ್ಥಿತಃ"—ಎಂದು ಹೇಳಿದೆ ಶ್ರುತಿ. ಸುಲಭನಲ್ಲದಿದ್ದಲ್ಲಿ ಉಪಾಯನಾಗನು, ಪರನಲ್ಲದಿದ್ದಲ್ಲಿ ಉಪೇಯನಾಗನು ಸರ್ವೇಶ್ವರ. ಈ ಉಪಾಯತ್ವೋಪೇಯತ್ವಾದಿಗಳಿಂದ ಉಪಯುಕ್ತವಾದ ಸೌಲಭ್ಯವೂ ಪರತ್ವವೂ ಇಲ್ಲಿ ಅರ್ಥತಃ ಸಿದ್ಧ.

ಈಶ್ವರನಿಗೆ ಅಂತರ್ವ್ಯಾಪ್ತಿಯೆಂದರೆ - ಇವು ಇರುವ ಸ್ಥಳದಲ್ಲಿ ತಾನು ಇಲ್ಲವೆನ್ನದ ಹಾಗೆ ಕಲೆತಿರುವುದು.

ಬಹಿರ್ವ್ಯಾಪ್ತಿಯೆಂದರೆ-ಇವು ಇಲ್ಲವೆಡೆಗಳಲ್ಲಿಯೂ ಎಲ್ಲೆಲ್ಲಿಯೂ ತಾನು ಇರುವುದು.

ವಿಭುಗಳಾದ ಕಾಲಾದಿಗಳಿಗೆ ಬಹಿರ್ವ್ಯಾಪ್ತಿಯನ್ನು ಹೇಳಬೇಕಾಗಿಲ್ಲ.

"ಅಣೋರ್ಜೀವಸ್ಯನಹ್ಯನ್ತರ್ದೇಶಃ ಕಾಲಸ್ಯ ವಾ ವಿಭೋಃ ।
ಬಹಿಃಪ್ರದೇಶೋಽನ್ಯಥಾತು ವಿಭುತ್ವಾಣುತ್ವಯೋಃ ಹತಿಃ ।
ಅಣೋರಣೀಯಾನ್ಮಹತೋಮಹೀಯಾನಿತಿಚಾಗಮಃ ।
ಅವ್ಯಾಪ್ತದೇಶೋನಾಸ್ತೀತಿ, ಹ್ಯತಿ ಸೂಕ್ಷ್ಮತ್ವ ತತ್ಪರಃ ॥"

ಇತಿ ಪ್ರಮಾಣಾನ್ಯನುಸಂಧೇಯಾನಿ.

"ತೇನೇದಂ ಪೂರ್ಣಂ ಪುರುಷೇಣ ಸರ್ವಂ"—ಎಂಬಲ್ಲಿ ಹೇಳಿರುವ ಪ್ರತಿ ವಸ್ತು ಪೂರ್ಣತ್ವವು ವ್ಯಾಪ್ತನಿಗೆ ಒಂದೊಂದು ವಸ್ತುವಿನಲ್ಲಿಯೂ ತೋರುವ ಸ್ವರೂಪ ಸಮಾಪ್ತಿಯಲ್ಲ. ಮತ್ತೇನೆಂದರೆ ಒಂದೊಂದು ಬ್ರಹ್ಮಪ್ರದೇಶ ವಲ್ಲಿಯೂ ನಿರ್ವಾಹಕ ಶಕ್ತಿ ಪೂರ್ಣವೆಂದು ಭಾವ. ಅನ್ಯಥಾ - ಪ್ರತಿವಸ್ತು ಪೂರ್ಣತ್ವವೆಂದರೆ ಅಲ್ಲಿಯೇ ಇರುವುದು ಎಂದಾಗುತ್ತೆ. ಬಹಿರ್ವ್ಯಾಪ್ತತ್ವವೆಂದರೆ ಅದಿಲ್ಲದೆಡೆಯಲ್ಲಿಯೂ ಇರುವುದು—ಇವೆರಡೂ ಪರಸ್ಪರ ವಿರುದ್ಧ-ಯಾದವ ಜೈನಪಕ್ಷ ಪ್ರಕಾರವಾದೀತು ಆದ್ದರಿಂದ ಪ್ರತಿವಸ್ತು ಪೂರ್ಣತೆಗೆ ಮುಖ್ಯಾರ್ಥ ಕೂಡದು.

"ನಾನುನ್ನೈಯನ್ರಿಯಿಲೇನ್ ಕಂಡಾಯ್ ನಾರಣನೇ ನೀ ಯೆನ್ನೈ ಯನ್ರಿಯಿಲೈ"—ಎಂದೂ. "ರಾಮಾನುಜಂ ಲಕ್ಷ್ಮಣಪೂರ್ವಜಂ ಚ"—ಎಂದೂ ಹೇಳಿರುವಂತೆಯೇ ಒಂದರಿಂದ ಮತ್ತೊಂದನ್ನು ನಿರೂಪಿಸಿರುವಲ್ಲಿ ಅರ್ಜುನನ ರಥದಂತೆ ಪ್ರಣವವು ಶೇಷ ಪ್ರಧಾನವಾದ್ದರಿಂದಲೂ, ರಾಸಮಂಡಲ ದಂತೆ ನಾರಾಯಣಶಬ್ದವು ಶೇಷಿ ಪ್ರದಾನವಾದ್ದರಿಂದಲೂ ಪುನರುಕ್ತಿಯಿಲ್ಲ. "ಅಂಗನಾಮಂಗನಾ ಮಂತರೇ ಮಾಧವ"—ಎಂಬಂತೆ ರಾಸಮಂಡಲವು ಶೇಷಿ ಯನ್ನು ಪ್ರಧಾನವಾಗಿಯು ಅರ್ಜುನನ ರಥದಲ್ಲಿ ಶೇಷಿಯು ಸಾರಥಿಯಾದ್ದ ರಿಂದ ಶೇಷನಿಗೆ ಪ್ರಾಧಾನ್ಯ. ಜೀವನು ಸ್ವರೂಪನಿರೂಪಕ ವಿಶೇಷಣವಾದ್ದ ರಿಂದ ಅವನನ್ನು ಬಿಟ್ಟು ವಿಶೇಷ್ಯದ ಸ್ವರೂಪವನ್ನು ನಿರೂಪಿಸುವುದು ಅಶಕ್ಯ. "ರಾಮಾನುಜಂ ಲಕ್ಷ್ಮಣ ಪೂರ್ವಜಂಚ"—"ರಾಮಂಲಕ್ಷ್ಮಣಂ ಚ"—ಎನ್ನ ಬಹುದಾಗಿದ್ದರೂ ಕೂಡ. 'ರಾಮಾನುಜಂ'—ಎಂದು ಶೇಷಿಯ ಮೂಲಕ

ಶೇಷನ ನಿರೂಪಣೆ. 'ಲಕ್ಷ್ಮಣ ಪೂರ್ವಜಂ'—ಎಂದು ಶೇಷನ ಮೂಲಕ ಶೇಷಿಯ ನಿರೂಪಣೆ. "ಅಂಗನಾಮಂಗನಾಮಂತರೇ ಮಾಧವಃ"—ಎಂಬಲ್ಲಿ ಮಂಡಲಾಕಾರ ನರ್ತನ ವಿಶೇಷ ಹೇಳಲ್ಪಡುತ್ತೆ. ಇವರಲ್ಲಿ ಶೇಷಿಯು ಪ್ರಧಾನ—ಇವರಲ್ಲಿಯ ಅಂಗನೆಯರು ಅಂತರಾಳದಲ್ಲಿರುವವರಾದ್ದರಿಂದ ಅಪ್ರಧಾನರು. ಹಾಗೆಯೇ ನಾರಾಯಣ ಶಬ್ದದಲ್ಲಿಯೂ, "ನರಸಂಬಧಿನೋನಾರಾಃ"-ಎಂದೂ, "ನರಾಜ್ಞಾತಾನಿ ತತ್ವಾನಿ"—ಎಂದೂ ನರಶಬ್ದವೂ ಭಗವತ್ಪರ, ಅಯನ ಶಬ್ದವೂ ಹಾಗೆಯೇ, ಅಚಿದ್ವರ್ಗಗಳಾದರೋ ಆಂತರಾಳಿಕ 'ಅಣ್'—ಪ್ರತ್ಯಯದಿಂದ ತಿಳಿಯಲ್ಪಡತಕ್ಕವು. ಆದ್ದರಿಂದ ಕಾರಣತ್ವ - ಆಧಾರತ್ವಾದಿಗಳಿಂದ ಶೇಷಿಗೇ ಪ್ರಧಾನ್ಯ – ಹೀಗೆಯೇ ಪ್ರಣವದಲ್ಲಿಯೂ ಶಬ್ದತಃ ಪ್ರಾಧಾನ್ಯವು 'ಮ' - ಕಾರವಾಚ್ಯನಾದ ಜೀವನಿಗೆ ತೋರಿದಾಗ್ಯೂ, ಅಂದರೆ 'ಅ' - ಕಾರವಾಚ್ಯನಿಗೆ ಶೇಷ ಎಂದು 'ಅ' ಕಾರವಾಚ್ಯನು ವಿಶೇಷಣವಾಗಿಯೂ, 'ಮ'—ಕಾರವಾಚ್ಯನಾದ ಜೀವನು ವಿಶೇಷ್ಯವಾಗಿಯೂ ತೋರಿದರೂ, ಅರ್ಥಪ್ರಾಧಾನ್ಯ—ಸ್ವರೂಪ ಪ್ರಯುಕ್ತ ಪ್ರಾಧಾನ್ಯವು ರಕ್ಷಕನಾದ ಶೇಷಿಗೆ. ರಕ್ಷಕನಿಗೇ ಅಲ್ಲವೇ ಲೋಕದಲ್ಲಿ ಪ್ರಾಧಾನ್ಯ ! ಹೀಗೆ "ಋಚೋ ಯಜೂಗ್ಂಷಿ ಸಾಮಾನಿ ತಥೈವಾರ್ಥಣಾನಿಚ । ಸರ್ವಮಷ್ಟಾಕ್ಷರಾಂ ತಸ್ಥಂ ಯಚ್ಚಾನ್ಯದಪಿ ವಾಙ್ಮಯಂ ॥" —ಎಂದಿರುವಂತೆ "ಸರ್ವಮಷ್ಟಾಕ್ಷರಾಂತಸ್ಥಂ" —ಎನ್ನುವಂತಿರುವ ಈ ತಿರುಮಂತ್ರದಲ್ಲಿ ಚಿದ ಚಿದೀಶ್ವರ ಸ್ವರೂಪಗಳೂ, ಜೀವರುಗಳ ಅನ್ಯೋನ್ಯ ಭೇದವೂ, ಶೇಷ–ಶೇಷಿ ಭಾವಾದಿಗಳಿಂದ ನಿರುಪಾಧಿಕ ಜೀವೇಶ್ವರ ಭೇದವೂ, ನಿಖಿಲಜಗನ್ನಿಮಿತ್ತೋಪಾದಾನಭೂತ ಪರದೇವತಾ ವಿಶೇಷ ನಿರ್ಧಾರಣಾದಿಗಳೂ ಸಿದ್ಧಿಸುವುದರಿಂದ, ಹೀಗೆಯೇ ಅನುಸಂಧಾನ ಮಾಡುವವರಿರುವ ಊರಲ್ಲಿರತಕ್ಕವರಿಗೂ, 1) ಈಶ್ವರನಿಲ್ಲವೆಂದೂ, ) ನಿರ್ವಿಶೇಷನೆಂದೂ, 3) ಅತ್ಯಂತೋದಾಸೀನನೆಂದೂ. 4) ಪ್ರತಿಫಲನ ತುಲ್ಯವಾದ ಐಶ್ವರ್ಯವುಳ್ಳವನೆಂದೂ, ಕರ್ಮವಿಶೇಷ ಸಿದ್ಧವಾದ ಐಶ್ವರ್ಯವುಳ್ಳವನೆಂದೂ, ಕದಾಚಿತ್ ಕರ್ಮಾದಿ ವಶನೆಂದೂ, ತ್ರಿಮೂರ್ತಿಗಳೂ ಸಮರೆಂದೂ, ಒಬ್ಬರೇ ಎಂದೂ, ಪರತತ್ತ್ವವು ತ್ರಿಮೂರ್ತ್ಯುತ್ತೀರ್ಣವಾದುದೆಂದೂ, ಬ್ರಹ್ಮಾದಿಗಳಲ್ಲಿ ಒಬ್ಬ ಈಶ್ವರನೆಂದೂ, 5) ಸ್ವರೂಪ ಪರಿಣಾಮವುಳ್ಳವನೆಂದೂ, 6) ನಿಮಿತ್ತೋಪಾದಾನೈಕ್ಯವನ್ನೊಪ್ಪಲಾಗದೆಂದೂ, 7) ಜೀವೇಶ್ವರರುಗಳು ಒಂದೇ ತತ್ತ್ವವೆಂದೂ,

8) ಉಪಾಧಿಸಿದ್ಧ ಜೀವವುಳ್ಳವರೆಂದೂ. 9) ನಿತ್ಯಭಿನ್ನಾಭಿನ್ನರೆಂದೂ, ಜೀವನು ಕರ್ಮ ಮಾತ್ರಕ್ಕೆ ಅಧೀನವಾದ ಶೇಷ ಭಾವನೆಂದೂ. ಅನಿಯತ ಶೇಷಭಾವನೆಂದೂ, ಜಡನೆಂದೂ. 10) ಜ್ಞಾನಮಾತ್ರ ಸ್ವರೂಪನೆಂದೂ, 11) ನಿತ್ಯ ಮುಕ್ತನೆಂದೂ, 12) ಆರೋಪಿತ ಭೋಗನೆಂದೂ. 13) ಕರ್ತೃ ಅಲ್ಲವೆಂದೂ 14) ಸ್ವತಂತ್ರ ಕರ್ತೃವೆಂದೂ. ಆ ಪ್ರಳಯಸ್ಥಾಯಿಯೆಂದೂ, 15) ಆಮೋಕ್ಷ ಸ್ಥಾಯಿಯೆಂದೂ 16) ಏಕನೆಂದೂ. 17) ಸ್ವಸಿಷ್ಟನೆಂದೂ, 18) ಸ್ವರೂಪತಃ ಕಾರ್ಯಭೂತನೆಂದೂ. 19) ಕಾರ್ಯತ್ವಪ್ರಸಂಗರಹಿತನೆಂದೂ, 20) ಕರ್ಮ ಮಾತ್ರೋಪಾಯನೆಂದೂ. 21) ಮುಕ್ತದಶೆಯಲ್ಲಿ ಪಾಷಾಣಕಲ್ಪನೆಂದೂ, 22) ಸ್ವಾತ್ಮಾನಂದ ಮಾತ್ರ ತೃಪ್ತನೆಂದೂ, 23) ಅತ್ಯಂತ ಸ್ವತಂತ್ರನೆಂದೂ. 24) ಈಶ್ವರನೊಂದಿಗೆ ಏಕೀಭೂತನೆಂದೂ, 25) ವ್ಯಾಪಾರಾದಿ ರಹಿತನೆಂದೂ, 26) ವಿಭಾಗಾದಿ ಶಕ್ತಿ ವಂತನೆಂದೂ. 27) ಆನಂದತಾರತಮ್ಯವಂತನೆಂದೂ, 28) ವ್ಯವಸ್ಥಿತ ಸಾಲೋಕ್ಯಾದಿ ಭೇದವಂತನೆಂದೂ, ಮತ್ತೂ ಹೀಗೇಯೇ ಉಳ್ಳ ಬಾಹ್ಯ-ಕುದೃಷ್ಟಿಮತಗಳೊಂದರಿಂದಲೂ ಕ್ಷೋಭೆಗೊಳ್ಳರು.

[1) ಮಾಧ್ಯಮಿಕ-ಮೀಮಾಂಸಕ ಮತ, 2) ಮಾಯಿಮತ. 3) ಸಾಂಖ್ಯ ಮತ, 4) ಯೋಗಮತ, 5) ಯಾದವ ಮತ. 6) ನೈಯಾಯಿಕ ಮತ, 7) ಮಾಯಿ ಮತ, 8) ಭಾಸ್ಕರ ಮತ 9) ಯಾದವ ಮತ, 10) ಪ್ರಚ್ಛನ್ನ ಬೌದ್ಧಾದಿಗಳು, 11) ಸಾಂಖ್ಯ, 12) ಸಾಂಖ್ಯ. 13) ಸಾಂಖ್ಯ. 14) ಮೀಮಾಂಸಕ, 15) ಮಾಯಿಗಳು. 16) ಮಾಯಿ, 17) ಮೀಮಾಂಸಕ. 18) ಯಾದವ. 19) ಮೀಮಾಂಸಕ. 20) ಮೀಮಾಂಸಕ, 21) ನೈಯಾಯಿಕ, 22) ಮೀಮಾಂಸಕ. 23) ಪಾಶುಪತ, 24) ಮಾಯಿ, 25) ನೈಯಾಯಿಕ. 26) ಯಾದವ, 27) ಮಾಧ್ವ, 28) ಮಾಧವ.]

ಈ ತಿರುಮಂತ್ರದಲ್ಲಿ ಬಾಹ್ಯಕುದೃಷ್ಟಿ ಮತಗಳಿಂದ ಚಲಿಸದ ತಿಳಿವುವುಳ್ಳವನನ್ನು, "ಪ್ರಜ್ಞಾಪ್ರಾಸಾದ ಮಾರುಹ್ಯಹ್ಯಶೋಚ್ಯಃ ಶೋಚತೋ ಜನಾನ್ । ಭೂಮಿಸ್ಥಾನಿವ ಶೈಲಸ್ಥೋಽಪ್ಯಜ್ಞಾನ್ ಪ್ರಾಜ್ಞಃ ಪ್ರಪಶ್ಯತಿ ॥"— ಎಂದಿದ್ದಾರೆ, ಈ ತಿಳಿವುಳ್ಳವನು,—"ನಪ್ರಹೃಷ್ಯತಿ ಸಂಮಾನೇ ನಾವಮಾನೇಽನುತಪ್ಯತೇ । ಗಂಗಾಹ್ರದ ಇವಾಕ್ಷೋಭ್ಯೋಯಸ್ಸ ಪಂಡಿತ ಉಚ್ಯತೇ ॥"—

ಎಂಬಂತೆ - ಮಾನಾವಮಾನಗಳಿಂದ ಚಿತ್ತವಿಕಾರಹೊಂದನು. ಈ ತಿರುಮಂತ್ರ ದಲ್ಲಿ ಯಥಾರ್ಥಜ್ಞಾನ ಮತ್ತು ನಿಷ್ಠೆಯುಳ್ಳವನನ್ನು ಆದರಿಸುವ ದೇಶ ದಲ್ಲಿಯೂ, "ಯತ್ರಾಷ್ಟಾಕ್ಷರ ಸಂಸಿದ್ಧಃ ಮಹಾಭಾಗೋ ಮಹೀಯತೇ। ನ ತತ್ರಸಂಚರಿಷ್ಯನ್ತಿ ವ್ಯಾಧಿದುರ್ಭಿಕ್ಷತಸ್ಕರಾಃ॥"—ಎಂಬಂತೆಯೇ ಒಂದು ದೋಷವೂ ಬಾರದು.

"ಯಸ್ಯಯಾವಾಂಶ್ಚ ವಿಶ್ವಾಸಃ ತಸ್ಯಸಿದ್ಧಿಶ್ಚತಾವತೀ । ಏತಾವಾನಿತಿ ನೈತಸ್ಯ ಪ್ರಭಾವಃ ಪರಿಮೀಯತೇ" –ಎಂಬಂತೆ ಅವರವರ ವಿಶ್ವಾಸ ತಾರ ತಮ್ಯಕ್ಕೆ ತಕ್ಕಂತೆ ಸಿದ್ಧಿ ತಾರತಮ್ಯ. ಮಹಾವಿಶ್ವಾಸವುಳ್ಳವರ ವಿಷಯದಲ್ಲಿ ಈ ತಿರುಮಂತ್ರವು ಅಳವಿಲ್ಲದ ಪ್ರಭಾವವುಳ್ಳದ್ದು. ಈ ತಿರುಮಂತ್ರಕ್ಕೆ ಪ್ರವ ರ್ತಕನೂ ಪ್ರತಿಪಾದ್ಯನೂ ಸ್ವತಃ ಸರ್ವಜ್ಞನೂ ಆದ ನಾರಾಯಣನೂ ಇದರ ಪ್ರಭಾವವಳವಿಲ್ಲದ್ದೆಂದಷ್ಟು ಮಾತ್ರವೇ ಬಲ್ಲನು. ಇವನಿಂದ ಇದನ್ನು ಅರ್ಥ ಸಹಿತ ಗ್ರಹಿಸಿದ ತಿರುಮಂಗೈಯಾಳ್ವಾರ್ರವರು "ಅನ್ತಣರ್ ಮಾಟ್ಟನ್ತಿವೈತ್ತ ಮನ್ತಿರತ್ತೈ ಮಂತಿರತ್ತಾಲ್ ಮರವಾತೆನ್ರುವರ್ ವಾಳುದಿಯೇಲ್ವಾಳಲಾವರ್" –ಎಂದು ಅಪ್ಪಣೆ ಕೊಡಿಸಿದ್ದಾರೆ ಅಂದರೆ, "ಬ್ರಾಹ್ಮಣಾನಾಂ ಧನಂವೇದಃ" ಎಂಬಂತೆಯೆ ವೇದಗಳ ಅಂತವಾದ ವೇದಾಂತದಲ್ಲಿರುವ ರಹಸ್ಯದಲ್ಲಿ ಉಪ ದೇಷ್ಟವ್ಯನಾದ ಶರಣ್ಯನನ್ನು ಮೂಲಮಂತ್ರದಿಂದ ಎಂದೂ ಮರೆಯದ ಹಾಗೆ ಅನನ್ಯ ಪ್ರಯೋಜನನಾಗಿ ಅನುಭವಿಸುವುದಾದಲ್ಲಿ ಪರಮಪದವನ್ನು ಸೇರಿ ನಿತ್ಯಕೈಂಕರ್ಯದಿಂದ ಬಾಳಬಹುದೆಂದರ್ಥ. ಇವನಿಗೆ ಇಚ್ಛೆಯುಳ್ಳವುಗಳಲ್ಲಿ ಎಟುಕದಿರುವುದು ಯಾವುದೂ ಇಲ್ಲವೆಂದು "ಎಟ್ಟುಮಾಮೂರ್ತಿ" ಇತ್ಯಾದಿ ಯಾಗಿ ಶ್ರೀಮದಾಚಾರ್ಯರು ಅನುಸಂಧಾನ ಮಾಡಿದ್ದಾರೆ.

"ಋಚೋಯಜೂಗ್ಂಷಿ ಸಾಮಾನಿ ಯೋಽಧೀತೇಽ ಸಕೃದಂಜಸಾ। ಸಕೃದಷ್ಟಾಕ್ಷರಂ ಜಪ್ತ್ವಾಸತಸ್ಯ ಫಲಮಶ್ನುತೇ॥" - ಎಂದಿರುವಂತೆ ಶ್ರೀಮದಷ್ಟಾಕ್ಷರವನ್ನು ಒಂದು ಸಲ ಉಚ್ಚರಿಸಿದಲ್ಲಿ ಸರ್ವವೇದಗಳನ್ನೂ ಜಪಿ ಸಿದಂತೆ,

"ಎಟ್ಟು ಮಾಮೂರ್ತಿ ಯೆಣ್‌ಕಣ ನೆಣ್ಣಿಕ್ಕಟ್ಟಿರೈಯೆಣ್ ಪಿರರುತಿ
ಎಟ್ಟು ಮಾವರೈ ಕಳೀನ್ದು ವೆಣ್‌ಕುಣತ್ತೋ ನೆಟ್ಟಿಣಮೆಣ್ ಕುಣ
ಮತಿಯೋರ್‌ಕ್ಕು

ಎಟ್ಟು ಮೂಮಲರೆಣ್ ಶಿತ್ತಿಯೆಣ್ಣಿತ್ತಿ ಯೆಟ್ಟು ಯೋಕಾಜ್ಗ ಮೆಣ್
ಶೆಲ್ವವ್
ಎಟ್ಟು ಮಾಕುಣ ಮೆಟ್ಟೆಟ್ಟೆಣ್ಣುಂ ಕಲ್ಪೆ ಯೆಟ್ಟಿರತವೋಲತುವು
ಮೆಟ್ಟಿನವೇ॥ '' –ಹೀಗೆ ತಿರುಮಂತ್ರವು ಸಕಲ ಪುರುಷಾರ್ಥ ಸಾಧನ ವೆಂಬುದನ್ನು ಮೇಲಿನ ಈ ಪಾಶುರದಿಂದ ಅಪ್ಪಣೆ ಕೊಡಿಸಿದ್ದಾರೆ. ಈ ರೀತಿ. ಗಳೆಲ್ಲವೂ ತತ್ತ್ವಜ್ಞರಾದ ಆಚಾರ್ಯದಿಂದ ಉಪದಿಷ್ಟವಾದುವೆಂದು "ಅವಿದ್ಯಾ ಪೂತನೋಸ್ಮಕ್ತೈಃ ಅನವಜ್ಞಾತ ಸತ್ಪಥೈಃ। ಅಸದಾಸ್ವಾದ ಸವ್ರೀಳೈಃ ಆದಿಷ್ಟ ಮಿಹ ದರ್ಶಿತಂ॥'' – ಎಂಬ ಶ್ಲೋಕದಿಂದ ಸಕಲ ವೇದಾಂತ ಸಾರವಾದ ಈ ಮಂತ್ರವು ಇದರ ಅರ್ಥ ಜ್ಞಾನದಿಂದ ಸತ್ತೆ ಪಡೆದವರಿಗೆ ಸಂಸಾರವನ್ನು ಶಮನ ಮಾಡುತ್ತದೆಯೆಂದು

"ಇತ್ಥಂ ಸಂಘಟಿತಃ ಪದೈಃ ತ್ರಿಭಿರ ಸಾವೇಕದ್ವಿ ಪಂಚಾಕ್ಷರೈಃ
ಅರ್ಥೈಸ್ತತ್ತ್ವಹಿತ ಪ್ರಯೋಜನಮಯೈಃ ಅಧ್ಯಾತ್ಮಸಾರೈಸ್ತ್ರಿಭಿಃ
ಆದ್ಯಃತ್ರ್ಯಕ್ಷರ ವೇದಸೂತಿ ರಜಹತ್ ಸ್ಥೂಲಾದಿ ವೃತ್ತಿತ್ರಯಃ
ತ್ರೈಗುಣ್ಯ ಪ್ರಶಮಂಪ್ರಯಚ್ಛತಿ ಸತಾಂ ತ್ರಯ್ಯಂತಸಾರೋ ಮನುಃ"
–ಎಂಬ ಶ್ಲೋಕದಿಂದ ಸಂಗ್ರಹಿಸಿ ಅಧಿಕಾರವನ್ನು ನಿಗಮಿಸಿದ್ದಾರೆ,

— ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ —

[೨೮–ಅಥ ದ್ವಯಾಧಿಕಾರಃ]

ಮೇಲೆ ತಿರುಮಂತ್ರಾಧಿಕಾರ ವ್ಯಾಖ್ಯಾತವಾಯಿತು. ಈ ತಿರುಮಂತ್ರದ ವಿವರಣರೂಪವಾದ ದ್ವಯವನ್ನು ವ್ಯಾಖ್ಯಾನ ಮಾಡಲು ಉಪಕ್ರಮಿಸಿ ಮೊದಲು ದ್ವಯಮಂತ್ರದ ಅಸಾಧಾರಣ ಪ್ರಭಾವವನ್ನು ಕೆಳಗಿನ ಶ್ಲೋಕದಿಂದ ತೋರಿಸಿದ್ದಾರೆ ; ಶ್ಲೋಕ—

"ಆಕರ್ಣಿತೋ ವಿತನುತೇ ಕೃತಕೃತ್ಯಕಕ್ಷ್ಯಾಂ
ಆಮ್ರೇಡಿತೋ ದಿಶತಿ ಯಶ್ಚ ಕೃತಾರ್ಥಭಾವಂ ।
ಪ್ರತ್ಯೂಷತಾಂ ಭಜತಿ ಸಂಸೃತಿ ಕಾಳರಾತ್ರೇಃ
ಪದ್ಮಾಸಹಾಯ ಶರಣಾಗತಿ ಮಂತ್ರ ಏಷಃ ॥"–ಎಂದು,–ಅಂದರೆ,–
ಯಾವ ಮಂತ್ರವು ಗುರುವಿನದೆಸೆಯಿಂದ ಒಂದು ಸಲ ಶ್ರುತವಾಗಿ ಉಚ್ಚಾರಿತ ವಾದ ಮಾತ್ರಕ್ಕೇ ಪುರುಷನನ್ನು ಉಪಾಯಕೋಟಿಯಲ್ಲಿ ಸೇರಿಸುತ್ತದೆಯೋ-

ದ್ವಿತೀಯಾದ್ಯುಚ್ಚಾರಣದಿಂದ ಕೈಂಕರ್ಯ ಕೋಟಿಯಲ್ಲಿ ಸೇರಿಸುತ್ತದೆಯೋ-ಅಂತಹ ಈ ದ್ವಯವೆಂಬ ಮಂತ್ರವು ಶ್ರೀ ಶ್ರೀನಿವಾಸನ ಶರಣಾಗತಿ ಮಂತ್ರವಾದದ್ದಾಗಿ, ಪ್ರಕಾಶಲೇಶವೂ ಇಲ್ಲದಿರುವ ಸಂಸಾರವೆಂಬ ಕಾಳರಾತ್ರಿಗೆ ಮುಂಜಾನೆಯ ಕಾಲವಾಗುತ್ತದೆ. (ಅಂದರೆ ಸಂಸಾರವೆಂಬ ಕಾಳರಾತ್ರಿ ಕೊನೆಗೊಳ್ಳುವ ಕಾಲವಾಗುತ್ತದೆ). "ಕೃತಾರ್ಥತೆ=ಕೈಂಕರ್ಯತೆಸಕೃದುಚ್ಚಾರಸ್ಸಂಸಾರ ತಾರಣಂ ಭವತಿ"—ಎಂಬಂತೆಯೇ ಕ್ರಮೇಣ ಕೃತಕೃತ್ಯ ಕಕ್ಷ್ಯೆಯಲ್ಲಿ ಸೇರಿಸಿ ಕೃತಾರ್ಥತೆಯನ್ನು ಉಂಟುಮಾಡುವುದು. ಇದರಿಂದ ಮೂಲ ಮಂತ್ರಾದಿಗಳಿಗೆ ಒಂದುಸಲ ಉಚ್ಚರಿಸಿದ ಮಾತ್ರದಿಂದ ಕೃತಕೃತ್ಯತೆಯನ್ನುಂಟುಮಾಡುವಂಥ ಮೋಕ್ಷ ಜನಕತ್ವ ಪ್ರಭಾವವಿಲ್ಲವೆಂದು ಭಾವ. ಇಂತಹ ದ್ವಯಮಂತ್ರಕ್ಕಿಂತ ಅಧಿಕ ಪ್ರಭಾವವುಳ್ಳ ಮಂತ್ರ ಮತ್ತೊಂದಿಲ್ಲವೆಂದು ತಾತ್ಪರ್ಯ. ಮೂಲ ಮಂತ್ರದಲ್ಲಿಯ 'ನಮಃ' ಎಂಬ ಶಬ್ದದ ಅರ್ಥ ಮತ್ತು ಚತುರ್ಥ್ಯರ್ಥ (ನಾರಾಯಣಾಯ-ಎಂಬುದರ) ಗಳೆರಡನ್ನೂ ಪ್ರಕಾಶಪಡಿಸುವುದರಿಂದ ಇದಕ್ಕೆ ದ್ವಯವೆಂದು ಹೆಸರು. ಅಂದರೆ ಉಪಾಯವನ್ನು ಸತ್ಯಾದಿ ವಿಶಿಷ್ಟ ವಿಷಯವಾಗಿಯೂ, ಪುರುಷಾರ್ಥವನ್ನು ಅನಿಷ್ಟ ನಿವೃತ್ತಿ ಪೂರ್ವಕವಾಗಿಯೂ ವಿಶದಪಡಿಸುತ್ತದೆ ಈ ಮಂತ್ರ. ಕಠವಲ್ಲಿಯಲ್ಲಿ ಅಷ್ಟಾಕ್ಷರದ ಪ್ರಕರಣದಲ್ಲಿಯೇ ದ್ವಯದ ಪೂರ್ವಖಂಡವನ್ನು ಓದಿ, ನಡುವೆ, "ಪೂರ್ಣಮದಃ ಪೂರ್ಣಮಿದಂ......॥"—ಇತ್ಯಾದಿಯನ್ನು ಓದಿ ತರುವಾಯ ಉತ್ತರಖಂಡವನ್ನು ಓದಿ, ಈ ಎರಡು ಖಂಡಗಳನ್ನೂ ಕೂಡಿಸಿ ಅನುಸಂಧಾನಮಾಡಬೇಕೆಂದು ವಿಧಿಸಿರುವುದರಿಂದಲೂ, ಇವೆರಡು ವಾಕ್ಯಗಳೂ ಒಟ್ಟಿಗೆ ಸೇರಿಸಿ ಜತೆಯಾಗಿಯೇ ಪುರುಷಾರ್ಥಕಾಂಕ್ಷಿಗಳಿಂದ ಉಚ್ಚರಿಸಲ್ಪಡಬೇಕು. ಹೀಗೆ ಶ್ರುತಿಮೂಲವಾದ್ದರಿಂದಲೂ, ಭಗವಚ್ಛಾಸ್ತ್ರದಲ್ಲಿ "ನವಾರ್ಣಂ ವಿದ್ಧಿ ಹೃದಯಂ ತ್ರ್ಯತಿಯಾರ್ಣಂ ಶಿರೋಮತಂ । ಶಿಖಾರ್ಣಂ ತ್ರ್ಯಕ್ಷರಂ ವಿದ್ಧಿ ಕವಚಂ ಕದ್ವದೇವಹಿ । ಅಸ್ತ್ರಂ ಪಂಚಾಕ್ಷರಂ ನೇತ್ರಂ ದ್ವ್ಯಕ್ಷರಂ ಪರಿಕೀರ್ತಿತಂ ॥"—ಇತ್ಯಾದಿಯಾಗಿ ವರ್ಣೋದ್ಧಾರಾದಿಗಳನ್ನುಮಾಡಿ ಪ್ರತಿಪಾದಿಸಿರುವುದರಿಂದಲೂ, ಇದು ಶ್ರುತಿಮೂಲ ತಾಂತ್ರಿಕಮಂತ್ರ. ಇದಕ್ಕೆ ಮೂಲಮಂತ್ರಾದಿಗಳಲ್ಲಿಯಂತೆ ಋಷ್ಯಾದಿಗಳನ್ನು ಬೇಕಾದರೆ ಮಂತ್ರ ಶಾಸ್ತ್ರಾದಿಗಳಲ್ಲಿ ಕಂಡು ತಿಳಿಯಬಹುದು. ಋಷ್ಯಾದಿಗಳು ಈ ಮಂತ್ರಕ್ಕೆ ಅವಶ್ಯಾಪೇಕ್ಷಿತವಲ್ಲವೆಂದು ಭಾವ.

ಈ ಮಂತ್ರದ ಪ್ರಭಾವವನ್ನು "ಯೇನ ಕೇನಾಪಿ ಪ್ರಕಾರೇಣ ದ್ವಯಃ ಪಕ್ತಾತ್ವಂ"—ಎಂದು ಮಂತ್ರಾಂತರಗಳಿಗಿಂತ ವೈಲಕ್ಷಣ್ಯ ತೋರುವ ಹಾಗೆ ಶ್ರೀ ಭಾಷ್ಯಕಾರರು ಅಪ್ಪಣೆ ಕೊಡಿಸಿದ್ದಾರೆ. "ಸತ್ಯಂ ದ್ವಯಂ ಸಕೃದುಚ್ಚಾರಃ ಸಂಸಾರ ವಿಮೋಚನಂ ಭವತಿ", "ಸಕೃಜ್ಜಪ್ತೇನ ಮಂತ್ರೇಣ ಕೃತಕೃತ್ಯಃ ಸುಖೀ ಭವೇತ್ ॥"–ಇತ್ಯಾದಿ ಶ್ರುತಿ-ಪ್ರಮಾಣಗಳೂ, "ದ್ವಯಾರ್ಥಶ್ಶರಣಾಗತಿಃ,"- "ಅಹೋ ದ್ವಯಸ್ಯ ಮಾಹಾತ್ಮ್ಯಂ ಅಹೋ ವೀರ್ಯಮಹೋ ಬಲಂ ॥—" ಇತ್ಯಾದಿ ಭಗವಚ್ಛಾಸ್ತ್ರಾದಿ ಪ್ರಮಾಣಗಳೂ ಇದರ ಮಾಹಾತ್ಮ್ಯಕ್ಕೆ ಹೇಳ ವಾಗಿವೆ. "ದೇವ ಗುಹ್ಯೇಷು ಚಾನ್ಯೇಷು ಹೇತುರ್ದೇವಿ ನಿರರ್ಥಕಃ । ಬಧಿರಾಂ ಧವ ದೇವಾತ್ರ ವರ್ತಿತವ್ಯಂ ಹಿತೈಷಿಣಾ॥"–ಇತ್ಯಾದಿಗಳಿಂದ, ಶಾಸ್ತ್ರ ದಲ್ಲಿ ಹೇಳಿರುವುದನ್ನು ಕಂಡು ನಂಬಬೇಕೇ ಹೊರತು-ಇಂತಹ ರಹಸ್ಯತಮ ವಾದ ಅರ್ಥಗಳಲ್ಲಿ ಹೇತು ನಿರೂಪಣ ಮಾಡಲು ಹೋಗಬಾರದು.

ಭಕ್ತರಿಗೆ ಪ್ರಾರಬ್ಧಾನುಭವ ಮುಗಿಯುವವರೆಗೂ ವಿಳಂಬಿಸಿ ಫಲ ಕೊಡುವ ಭಗವಂತ ಪ್ರಪನ್ನರಿಗೆ ಶೀಘ್ರ ಫಲವನ್ನು ಕೊಡುವುದು ಅಯುಕ್ತ ವಲ್ಲವೇ?-ಎಂದಲ್ಲಿ–ಅಂಕೋಲ ತೈಲಸಿಕ್ತಾನಾಂ ಬೀಜಾನಾಮಚಿರಾದ್ಯಥಾ ।

ವಿಪಾಕ ಫಲ ಪರ್ಯಂತಃ ತಥಾ ತ್ರೇತಿ ನಿದರ್ಶಿತಂ"–ಅಂದರೆ, ಬಹು ವರ್ಷಗಳು ನೀರು ಸುರಿದು ಬೆಳೆಸಿದ ಮಾವು ಮೊದಲಾದ ವೃಕ್ಷಗಳ ಫಲವು, ಭೂಮಿಯಲ್ಲಿ ಅಂಕೊಲದ ತೈಲದಿಂದ ಸಿಕ್ತವಾದ ಬೀಜದಿಂದ 2-3 ಘಳಿಗೆಗಳಲ್ಲಿಯೇ ಚಿಗುರು, ಮೊಗ್ಗು, ಹಣ್ಣುಗಳು ಉಂಟಾಗುವ ಹಾಗೆ, ಹಾರ್ದನ ಅನುಗ್ರಹದಿಂದ ಪ್ರಪನ್ನನಿಗೆ ಅಂತ್ಯಕಾಲದಲ್ಲಿ 2-3 ಕ್ಷಣಗಳಲ್ಲಿಯೇ ಚಿರಕಾಲಸಾಧ್ಯವಾದ ಪರಭಕ್ತಿ-ಪರಜ್ಞಾನ-ಪರಮಭಕ್ತಿ ಸಾಕ್ಷಾತ್ಕಾರ ಪರ್ಯಂತ ವಾದ ವಿಪಾಕವೂ ಕೂಡ ಉಂಟಾಗುವುದೆನ್ನುವುದಕ್ಕೆ ಮೋಕ್ಷಪ್ರದನೂ ಮೋಕ್ಷ ಪಡೆಯುವವನೂ ಇವರಿಬ್ಬರೇ ಸಾಕ್ಷಿಯೆನ್ನುತ್ತಾರೆ.

ಶ್ರೀಮನ್ನಾರಾಯಣನು ಶರಣ್ಯನಾಗುವಾಗ ಲಕ್ಷ್ಮೀವಿಶಿಷ್ಟನಾಗಿಯೇ ಶರಣ್ಯನಾಗುತ್ತಾನೆ ಎನ್ನುವುದಕ್ಕಾಗಿ ಪೂರ್ವಖಂಡದಲ್ಲಿ ಶ್ರೀಮಚ್ಛಬ್ದವಿದೆ. "ಆಕಾರಿಣಸ್ತು ವಿಜ್ಞಾನಂ ಆಕಾರ ಜ್ಞಾನ ಪೂರ್ವಕಂ । ತೇನಾಕಾರಂ ಶ್ರಿಯಂ

ಜ್ಞಾತ್ವಾ ಜ್ಞಾತವ್ಯೋ ಭಗವಾನ್ ಹರಿಃ ॥" —ಎಂದು ಅಭಿಯುಕ್ತೋಕ್ತಿಯಿದೆ. ಲಕ್ಷ್ಮೀ ವಿಶಿಷ್ಟನಾಗಿಯೇ ಶರಣ್ಯತ್ವೇನ ಅವನು ವರಣೀಯ. ಲಕ್ಷ್ಮೀ ವಿಶಿಷ್ಟ ನಾಗಿಯೇ ಪರಿಚರಣೀಯ.. ... "ಶ್ರೀ ಶಬ್ದವು - ಶ್ರೀಯತೆ, ಶ್ರಯತೇ, ಶೃಣೋತಿ, ಶ್ರಾವಯತಿ, ಶೃಣಾತಿ, ಶ್ರೀಣಾತಿ"–ಎಂದು ಆರುವಿಧವಾಗಿ ಭಗವ ಚ್ಛಾಸ್ತ್ರಗಳಲ್ಲಿ ನಿರ್ವಚನ ಮಾಡಲ್ಪಟ್ಟಿದೆ. ಶ್ರೀ ಲಕ್ಷ್ಮಿಯ ಪುರುಷಕಾರ ಭಾವಕ್ಕೆ ಪ್ರಮಾಣವನ್ನು—"ಅರ್ಥಸ್ವಭಾವಾನುಷ್ಠಾನ ಲೋಕದೃಷ್ಟಿ ಗುರೂಕ್ತಿಭಿಃ । ಶ್ರುತ್ಯಾಸ್ಮೃತ್ಯಾಚ ಸಂಸಿದ್ಧಂ ಘಟಕಾರ್ಥಾವಲಂಬನಂ ॥" — ಎಂದು ನಿಕ್ಷೇಪ ರಕ್ಷೆಯಲ್ಲಿ ಆಚಾರ್ಯರು ಕೊಟ್ಟಿದ್ದಾರೆ. ಪುರುಷಕಾರವರಣವೆಂದರೆ, ಒಬ್ಬ ಪ್ರಭುವಿನಿಂದ ಒಂದುಕಾರ್ಯ ಮಾಡಿಸಿಕೊಳ್ಳುವ ಅಪೇಕ್ಷೆಯಿರುವವನು, ಆತನನ್ನು ತನಗೆ ಅಭಿಮುಖನನ್ನಾಗಿಸುವುದಕ್ಕಾಗಿ ಅವಕ್ಕೆ ತಕ್ಕ ಮತ್ತೊಬ್ಬನನ್ನು ವರಿಸು ವುದೆಂದರ್ಥ. ಇಲ್ಲಿ ದಿವ್ಯಮಹಿಷಿಯಾದ ಶ್ರೀದೇವಿಯನ್ನು ಮುಂದಿಟ್ಟು ಭಗ ವಂತನನ್ನು ಶರಣ ಹೊಂದುವಲ್ಲಿ ಭಗವಂತನೆಂದೂ ನಿರಾಕರಿಸಲಾರನೆಂಬುದೇ ತತ್ವ. ಭಗವಂತನನ್ನು ನಾವು ಶರಣುಹೊಂದಬೇಕಾದರೆ, ಅನಂತಾಪರಾ ಧಿಗಳೂ ಅಸಹ್ಯಾಪರಾಧಿಗಳೂ ಆದ ನಮಗೆ ಅವನು ಪ್ರಸನ್ನನಾಗುವುದಕ್ಕಾಗಿ, ಮೊದಲು ಅವನ ದಿವ್ಯ ಮಹಿಷಿಯಾದ ಶ್ರೀದೇವಿಯನ್ನು ಶರಣು ಹೊಂದಿ ಅವಳನ್ನು ಮುಂದು ಮಾಡಿಯೇ ಭಗವಂತನನ್ನು ಶರಣು ಹೊಂದಬೇಕೆಂದು ನಿಯಮವಿದೆ. ಈ ಕ್ರಮದಲ್ಲಿ ದಿವ್ಯ ದಂಪತಿಗಳಿಬ್ಬರೂ ನಮಗೆ ಆಶ್ರಯಣೀ ಯರು. ಈ ಕ್ರಮ ತಪ್ಪಿ ಒಬ್ಬೊಬ್ಬರನ್ನೇ ಆಶ್ರಯಿಸುವವರ ಸ್ಥಿತಿಯಾದರೋ ರಾವಣ-ಶೂರ್ಪನಖಿಯರ ಸ್ಥಿತಿಯಂತಾಗುವುದು-ಅಂದರೆ ರಾಮನನ್ನು ಬಿಟ್ಟು ಸೀತೆಯೊಬ್ಬಳನ್ನೇ ಹಿಡಿದ ರಾವಣ ಸತ್ತ. ಪುರುಷಕಾರಳಾದ ಸೀತೆಯನ್ನು ಬಿಟ್ಟು ರಾಮನನ್ನು ಆಶ್ರಯಿಸಲು ಹೋದ ಶೂರ್ಪನಖಿ ಕೆಟ್ಟಳು.

ಶರಣಾಗತಿಯಲ್ಲಿ" ಅಹಂ ಸರ್ವಂ ಕರಿಷ್ಯಾಮಿ–" ಇತ್ಯಾದಿಗಳಲ್ಲಿಯಂತೆ ಪರಿಪೂರ್ಣಾನುಭವಪೂರ್ವಕವಾದ ಕೈಂಕರ್ಯವು ಪ್ರಾರ್ಥಿಸಲ್ಪಡತಕ್ಕದ್ದು – ಇದ ಕ್ಕಾಗಿ ಅನಂತರ "ನಮಃ" ಎಂಬುದರಿಂದ ಸರ್ವಾನಿಷ್ಟ ನಿವೃತ್ತಿಯೂ ಪ್ರಾರ್ಥಿಸಲ್ಪಡುತ್ತೆ – ಅನಿಷ್ಟವು ತ್ರಿವಿಧ,- ರಕ್ಷಣ ವಿರೋಧಿ, ಶೇಷತ್ವ ವಿರೋ ಧಿ, ಕೈಂಕರ್ಯ ವಿರೋಧಿಗಳೆಂದು ಕ್ರಮವಾಗಿ ಇವುಗಳ ನಿವೃತ್ತಿಯನ್ನು ತೋ- ರಿಸುವುದಕ್ಕಾಗಿ, "ಅಪ್ರಾಪ್ತಿತಃ ಪರಿಹರ್ತ ಸ್ವಪರೈಸ್ಸ್ವರಕ್ಷಾಂ, ತಾದರ್ಥ್ಯ

ಧೀ ಪರಿಹೃತ ಸ್ವಪರಾರ್ಥಭಾವಃ । ಅನ್ಯೋಪಭೋಗ ವಿರಹಾತ್ ಅನಘಃ ಪ್ರಪನ್ನೋ ಭುಂಕ್ತೇ ಸ್ವಭೋಗಮಖಿಲಂ ಪತಿಭೋಗ ಶೇಷಂ" ಎಂಬ ಶ್ಲೋಕವನ್ನು ಉದಾಹರಿಸಿದ್ದಾರೆ.

ಸರ್ವಸ್ವಾಮಿಯೂ, ಸರ್ವಪ್ರಕಾರ ನಿರತಿಶಯಭೋಗ್ಯನೂ ದಿವ್ಯ ಮಹಿಷಿಯನ್ನು ಎಂದೂ ಬಿಟ್ಟಿರದವನೂ, ಆದ ಶ್ರೀಮನ್ನಾರಾಯಣನ ಪಾದಗಳಲ್ಲಿ ಸ್ವರೂಪಪ್ರಾಪ್ತ ಸರ್ವದೇಶ-ಸರ್ವಕಾಲ ಸರ್ವಾವಸ್ಥೋಚಿತ ಸರ್ವ ವಿಧ ಕೈಂಕರ್ಯಗಳಿಗೂ ವಿರೋಧಿಯಾದ ಸರ್ವವನ್ನೂ ನೀಗಿಸಿ ಪರಿಪೂರ್ಣ ಕೈಂಕರ್ಯವನ್ನು ಪಡೆಯುವುದಕ್ಕೆ ಅಕಿಂಚನ ದಾಸನಾದ ನಾನು ಸ್ವರಕ್ಷಣ ಭರಾದಿಗಳಲ್ಲಿ ನನಗೆ ಅನ್ವಯವಿಲ್ಲದಹಾಗೆ ಶ್ರೀಮಾನ್ ಆದ ನಾರಾಯಣನ ತಿರುವಡಿಗಳಲ್ಲಿಯೇ ಅಂಗಪಂಚಕ ಸಂಪನ್ನವಾದ ಆತ್ಮರಕ್ಷಾಭರಸಮರ್ಪಣವನ್ನು ಮಾಡುತ್ತೇನೆ-ಎಂಬುದು ದ್ವಯದ ನಿಷ್ಕೃಷ್ಟವಾದ ಅರ್ಥ. ಕಡೆಯಲ್ಲಿ. ಅನೇಕ ದೃಷ್ಟಾಂತಗಳಿಂದ ದ್ವಯದ ಮಾಹಾತ್ಮ್ಯವನ್ನು ಸಮರ್ಥಿಸುತ್ತಾರೆ;-"ನವೇದಾನ್ಯಾತ್ ಶಾಸ್ತ್ರಂ ನ ಮಧುಮಥನಾತ್ ತತ್ತ್ವಮಧಿಕಂ ನತದ್ಭಕ್ತಾತ್ ತೀರ್ಥಂ ನ ತದಭಿಮತಾತ್ ಸಾತ್ತ್ವಿಕಪದಂ । ನ ಸತ್ತ್ವಾದಾರೋಗ್ಯಂ ನಬುಧಭಜನಾತ್ ಬೋಧಜನಕಂ ನಮುಕ್ತೇಸ್ಸೌಖ್ಯಂ ನದ್ವಯವಚನತಃ ಕ್ಷೇಮಕರಣಂ॥"-ಇತಿ. ಇದರ ಅರ್ಥ:- ಹೇಗೆ "ವೇದಶಾಸ್ತ್ರಾತ್ಪರಂ ನಾಸ್ತಿ ನದೈವಂ ಕೇಶವಾತ್ಪರಂ ॥ ನವಾಸುದೇವಾತ್ಪರಮಸ್ತಿಕಿಂಚಿತ್"

ಇತ್ಯಾದಿ ಪ್ರಮಾಣಗಳಿಂದ ವೇದಕ್ಕಿಂತ ಅಧಿಕವಾದ ಶಾಸ್ತ್ರವಾಗಲಿ. ವಾಸುದೇವನಿಗಿಂತ ಅಧಿಕನಾದ ದೇವನಾಗಲಿ ಇಲ್ಲವೆಂದು ತಿಳಿದಿದೆಯೋ, ಹೇಗೆ. "ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾಮೃಚ್ಛಿಲಾಮಯಾಃ । ತೇಪುನನ್ತ್ಯುರು ಕಾಲೇನ ದರ್ಶನಾದೇವ ಸಾಧವಃ ॥ ತಪ್ತಚಕ್ರೇಣ ವಿಧಿನಾ ಬಾಹುಮೂಲೇತುಲಾಂಛಿತಃ । ಪುನಾತಿ ಸಕಲಂ ಲೋಕಂ ನಾರಾಯಣ ಇವಾಘಭಿತ್ ॥--ಇತ್ಯಾದಿಗಳಿಂದ ಭಾಗವತರಿಗಿಂತ ಅಧಿಕ ಪಾವನವಾದುದು ಇಲ್ಲವೆಂದು ತಿಳಿಯುತ್ತದೆಯೋ, ಹೇಗೆ, "ಸದ್ಭಿರೇವ ಸಹಾಸೀತ ಸದ್ಭಿಃ ಕುರ್ವೀತ ಸಂಗಮಂ । ಸದ್ಭಿರ್ವಿವಾದಂ ಮೈತ್ರೀಂ ಚ ನಾಸದ್ಭಿಃ ಕಿಂಚಿದಾಚರೇತ್ ॥ ನಿಗೃಹೀತೇಂದ್ರಿಯಗ್ರಾಮಃ ಯತ್ರಯತ್ರ ವಸೇನ್ನರಃ । ತತ್ರ ತತ್ರ ಕುರುಕ್ಷೇತ್ರಂ ನೈಮಿಶಂ ಪುಷ್ಕರಂ ತಥಾ ॥"—ಇತ್ಯಾದಿಗಳಿಂದ ಭಾಗವ

ತಾಭಿಮತವಾದುದಕ್ಕಿಂತ ಅಧಿಕವಾದ ಸಾತ್ತ್ವಿಕ ಸ್ಥಾನವಾದ ಪಾಪಸ್ಥಾನ ಇಲ್ಲವೆಂದು ತಿಳಿಯುತ್ತದೆಯೋ—ಹೇಗೆ ಸಾತ್ತ್ವಿಕಾಹಾರಕ್ಕಿಂತ ಅಧಿಕ ಆರೋಗ್ಯ ಜನಕವಿಲ್ಲವೆಂದು "ಆಯುಸ್ಸತ್ತ್ವ ಬಲಾರೋಗ್ಯ ಸುಖಪ್ರೀತಿ ವಿವರ್ಧನಾಃ।– ಇತ್ಯಾದಿಯಿಂದ ತಿಳಿಯುತ್ತದೆಯೋ, ಹೇಗೆ ಸದಾಚಾರ್ಯ ಸಮಾಶ್ರಯಣಕ್ಕಿಂತ ಅಧಿಕವಾದ ತತ್ತ್ವಜ್ಞಾನ ಜನಕವಿಲ್ಲವೋ, ಹೇಗೆ ಮೋಕ್ಷಕ್ಕಿಂತ ಅಧಿಕ ಸುಖ ವೆಂಬುದಿಲ್ಲವೋ—ಹಾಗೆಯೇ ದ್ವಯೋಚ್ಚಾರಣಕ್ಕಿಂತ ಮೋಕ್ಷಕ್ಕೆ ಸಾಧಕತಮ ವಾದುದು ಮತ್ತೊಂದಿಲ್ಲವೆಂಬುದು-" "ಸಕೃದುಚ್ಚಾರಸ್ಸಂಸಾರ ವಿಮೋಚನಂ ಭವತಿ," "ಅಹೋದ್ವಯಸ್ಯ ಮಾಹಾತ್ಮ್ಯಂ." ॥—"ಇದಂ ರಹಸ್ಯಂ ಪರಮಂ ಲಕ್ಷ್ಮೀನಾರಾಯಣಂ ದ್ವಯಂ। ರಾಜನ್ ತವಾಪಿ ವಕ್ಷ್ಯಾಮಿ ಪ್ರಪತ್ತಿಂ ಶರಣಾಗತಿಂ॥ ದ್ವಯಾತ್ಪರತರಂ ಮಂತ್ರಂ ನಾಸ್ತಿನಾರಾಯಣಾತ್ಪರಂ॥"— ಇತ್ಯಾದಿ ಪಾದ್ಮ, ವಸಿಷ್ಠ ದಿಲೀಪಸಂವಾದಾದಿಗಳೂ ಇದಕ್ಕೆ ಪ್ರಮಾಣಗಳು.

## ೨೯. ಚರಮಶ್ಲೋಕಾಧಿಕಾರಃ

"ಏಷನಾರಾಯಣಃ ಶ್ರೀಮಾನ್ ಕ್ಷೀರಾರ್ಣವನಿಕೇತನಃ।
ನಾಗಪರ್ಯಂಕಮುತ್ಸೃಜ್ಯಹ್ಯಾಗತೋ ಮಧುರಾಂಪುರೀಂ॥"

—ಎಂದಿರುವಂತೆಯೇ ಶ್ರಿಯಃಪತಿಯಾದ ಸರ್ವೇಶ್ವರನು ಸಾಧು ಪರಿತ್ರಾಣ ಮತ್ತು ದುಷ್ಕೃದ್ವಿನಾಶ ಧರ್ಮಸಂಸ್ಥಾಪನೆಗಳಿಗಾಗಿ ದ್ವಾರಕಾ ನಾಥನಾಗಿ ಬಂದು ಅವತರಿಸಿ ಸರ್ವ ಸುಲಭನಾಗಿ ಶರಣಾಗತರಾದ ಪಾಂಡವರಿಗೆ ದೂತನಾಗಿ ನಿಂತು, ಅರ್ಜುನನನ್ನು ರಥಿಯನ್ನಾಗಿ ಮಾಡಿ ತಾನು ಸಾರಥಿಯಾಗಿ ಅವನಿಗೆ ವಿಧೇಯನಾಗಿ ನಿಂತಿರುವಲ್ಲಿ ಈ ಅರ್ಜುನನು ತನ್ನನ್ನು ನಿಮಿತ್ತಮಾತ್ರ ವಾಗಿಟ್ಟುಕೊಂಡು ಸರ್ವೇಶ್ವರನು ತನ್ನ ಶತ್ರುಗಳನ್ನು ಸಂಹರಿಸುವ ಸ್ಥಿತಿಯನ್ನು ಕಂಡು—ಬಂಧು ವಿನಾಶವು ಸಿದ್ಧವೆಂದು ನಿಶ್ಚಯಿಸಿ, ಯುದ್ಧಕಾಲವು ಸ್ನೇಹಕ್ಕೂ ಕೃಪೆಗೂ ಸಮಯವಲ್ಲವೆಂದರಿಯದೆ ಅಸ್ಥಾನ ಕೃಪೆಯಿಂದಲೂ, ಆಚಾರ್ಯರೇ ಆದರೂ, ಯುದ್ಧೋನ್ಮುಖರಾದಲ್ಲಿ ಅವರ ವಧದಿಂದ ಪಾಪಬರುವುದಿಲ್ಲ ವೆಂಬುದನ್ನೂ ಅರಿಯದೆ ಅವರ ವಧದಿಂದ ಪಾಪಬರುವುದೆಂಬ ಭಯದಿಂದಲೂ ಕಲಗಿದ ಮನಸ್ಸುಳ್ಳವನಾಗಿ, ಯಾವುದು ಹಿತವೆಂಬುದನ್ನು ಅರಿಯಬೇಕೆಂದು ನಿಶ್ಚಯಿಸಿ, "ಯಚ್ಛ್ರೇಯಸ್ಸ್ಯಾತ್ ನಿಶ್ಚಿತಂ ಬ್ರೂಹಿ ತನ್ಮೇ ಶಿಷ್ಯಸ್ತೇಽಹಂ

ಶಾಧಿಮಾಂ ತ್ವಾಂ ಪ್ರಪನ್ನಂ ॥"—ಎಂದು ಅರಿಕೆ ಮಾಡಿದ. ಆಗ ಅವನ ಶೋಕದ ನಿವೃತ್ತಿಗಾಗಿ ದೇಹಾದಿ ವ್ಯತಿರಿಕ್ತವೂ, ಪರಶೇಷತ್ವವನ್ನೇ ಸ್ವರೂಪವಾಗಿಯುಳ್ಳದ್ದೂ ಆದ ನಿತ್ಯಾತ್ಮಸ್ವರೂಪವನ್ನೂ, ಈ ಸ್ವರೂಪವನ್ನು ಅರಿತವನಿಗೆ ಪರಮ ಪುರುಷಾರ್ಥ ಲಾಭಕ್ಕೆ ಪರಂಪರೆಯಾಗಿ ಕಾರಣಗಳಾದ ಕರ್ಮಯೋಗ-ಜ್ಞಾನಯೋಗಗಳನ್ನೂ, ಸಾಕ್ಷಾದುಪಾಯವಾಗಿ ಚೋದಿತವಾದ ಭಕ್ತಿಯೋಗವನ್ನೂ ಸಪರಿಕರವಾಗಿ ಶ್ರೀಕೃಷ್ಣನು ಉಪದೇಶಿಸಿದ ಈ ಉಪಾಯಾನುಷ್ಠಾನಕ್ಕೆ ಬೇಕಾದ ಜ್ಞಾನ ಶಕ್ತಿಯಿದ್ದಾಗ್ಗೂ, ಅನೇಕ ಅವಧಾನದೊಂದಿಗೆ ಚಿರಕಾಲ ಸಾಧ್ಯವಾದ ಈ ಉಪಾಯದ ಸ್ವಭಾವದಿಂದ ಅಭಿಮತವು ಬೇಗ ಲಭಿಸದಿರುವುದರಿಂದಲೂ, ನಿರತಿಶಯ ಶೋಕಾವಿಷ್ಟನಾದ ಅರ್ಜುನನನ್ನು ನೆಪಮಾಡಿಕೊಂಡು ಪರಮ ಕಾರುಣಿಕನಾದ ಶ್ರೀ ಗೀತೋಪನಿಷದಾಚಾರ್ಯನು. "ಭಕ್ತ್ಯಾಪರಮಯಾವಾಪಿ ಪ್ರಪತ್ತ್ಯಾವಾ ಮಹಾಮುನೇ। ಪ್ರಾಪ್ಯೋಽಹಂ ನಾನ್ಯಥಾಪ್ರಾಪ್ಯಃ ಮಮ ಕೈಂಕರ್ಯ ಲಿಪ್ಸುಭಿಃ ॥" —ಎಂದು ತಾನೇ ವಿಕಲ್ಪಿಸಿ ವಿಧಿಸಿದ ಉಪಾಯಗಳಲ್ಲಿ, "ತಾವದಾರ್ತಿಸ್ತಥಾವಾಂಛಾ ತಾವನ್ಮೋಹಸ್ತಥಾ ಸುಖಂ। ಯಾವನ್ನಯಾತಿ ಶರಣಂ ತ್ವಾಮಶೇಷಾಘನಾಶನಂ ॥" -ಎಂಬಂತೆಯೇ ತನ್ನ ಪಾದಗಳನ್ನು ಪಡೆಯುವುದಕ್ಕೂ ಮತ್ತು ಎಲ್ಲಾ ಅಭಿಮತಗಳಿಗೂ ಸಾಧಾರಣ ಸಾಧನವಾಗಿ, ಅನುಕೂಲ್ಯ ಸಂಕಲ್ಪಾದಿಗಳನ್ನು ಬಿಟ್ಟು ಬೇರೆ ಯಾವ ಪರಿಕರವೂ ಬೇಕಿಲ್ಲದ್ದೂ, ಲಘುತರವೂ, ಕ್ಷಣಮಾತ್ರ ಸಾಧ್ಯವೂ. ಸಕೃತ್ ಕರ್ತವ್ಯವೂ. ರಹಸ್ಯತಮವೂ ಆದ ಶರಣಾಗತಿಯೆಂಬ ಉಪಾಯವನ್ನು ಶ್ರೋತವ್ಯ ಶೇಷವಿಲ್ಲದಹಾಗೆ ಮೋಕ್ಷೋಪಾಯದ ಉಪದೇಶದಲ್ಲಿ ಪರ್ಯವಸಾನಗೊಂಡ ಚರಮಶ್ಲೋಕದಿಂದ ಸಕಲಲೋಕ ರಕ್ಷಾರ್ಥವಾಗಿ ಅಪ್ಪಣೆ ಕೊಡಿಸಿದ. ಶ್ರುತಿಸಿದ್ಧವಾದ ಈ ಅರ್ಥವನ್ನು ಶರಣ್ಯನಾದ ಸರ್ವೇಶ್ವರನು ತಾನೇ ಉಪದೇಶಿಸಿದುದರಿಂದ. "ಸಂತ್ಯಜ್ಯ ನಿಧಿನಾ ನಿತ್ಯಂ ಷಡ್ವಿಧಾಂ ಶರಣಾಗತಿಂ। ಆಚಾರ್ಯಾನುಜ್ಞಯಾ ಕುರ್ಯಾತ್ ಶಾಸ್ತ್ರ ದೃಷ್ಟೇನ ವರ್ತ್ಮನಾ ॥"—ಎಂದು ಶ್ರೀ ವಿಷ್ಣು ತತ್ತ್ವಾದಿಗಳಲ್ಲಿ ಹೇಳಿರುವ ಆಚಾರ್ಯಾನುಜ್ಞೆಯೂ ಆದಹಾಗಾಯಿತು. ಇದನ್ನು,

"ದುರ್ವಿಜ್ಞಾನೈರ್ನಿಯಮಗಹನೈಃ ದೂರವಿಶ್ರಾನ್ತಿದೇಶೈಃ
ಬಾಲಾನರ್ಹೈಃ ಬಹುಭಿರಯನೈಃ ಶೋಚತಾಂ ನಸ್ಸಪನ್ಥಾಃ।

ನಿಷ್ಪ್ರತ್ಯೂಹಂ ನಿಜಪದಮಸೌ ನೇತುಕಾಮಸ್ಸಭೂಮ್ನಾ
ಸತ್ಪಾಥೇಯಂ ಕಿಮಪಿ ವಿದಧೇ ಸಾರಥಿಸ್ಸರ್ವನೇತಾ ॥",
—ಎಂದು ಆಚಾರ್ಯರು ಸಂಗ್ರಹಿಸಿದ್ದಾರೆ.

## ಚರಮ ಶ್ಲೋಕದ ಮಹಾ ವಾಕ್ಯಾರ್ಥ :—

ಅಲ್ಪಜ್ಞನೂ, ಅಲ್ಪ ಶಕ್ತಿಯುಳ್ಳವನೂ, ಪರಿಮಿತ ಕಾಲವರ್ತಿಯೂ ವಿಳಂಬಾಕ್ಷಮನೂ ಆದ ನೀನು ನಿನ್ನಿಂದ ಅರಿಯಲೂ, ಅನುಷ್ಠಿಸಲೂ ಆಗದೆ ಫಲವೂ ವಿಳಂಬಿಸುವ ಉಪಾಯಾಂತರಗಳಲ್ಲಿ ಅಲೆಯದೆ, ಸುಲಭನೂ ಸರ್ವ ಲೋಕಶರಣ್ಯನೂ, ಶರಣ್ಯತೆಗೆ ಉಪಯುಕ್ತವಾದ ಸರ್ವಾಕಾರಗಳಿಂದ ಕೂಡಿದವನೂ ಆದ ನನ್ನೊಬ್ಬನನ್ನೇ ಉಪಾಯವನ್ನಾಗಿ ನಿಶ್ಚಯಿಸಿಕೊಂಡು ನನ್ನೊಬ್ಬನಲ್ಲಿಯೇ ಅಂಗಪಂಚಕ ಸಂಪನ್ನವಾದ ಆತ್ಮರಕ್ಷಾಭರದ ಸಮರ್ಪಣ ವನ್ನು ಮಾಡು. ಹೀಗೆ ಉಪಾಯವನ್ನು ಅನುಷ್ಠಿಸಿದವನಾಗಿ ಕೃತಕೃತ್ಯನೂ ನನಗೆ ರಕ್ಷ್ಯವಸ್ತುವೂ ಅತ್ಯರ್ಥಪ್ರಿಯತಮನೂ ಆದ ನಿನ್ನನ್ನು, ಪರಮಕಾರುಣಿ ಕನೂ ಸುಪ್ರಸನ್ನನೂ ನಿರಂಕುಶ ಸ್ವಾತಂತ್ರ್ಯವುಳ್ಳವನೂ ಸ್ವಾರ್ಥಪ್ರವೃತ್ತನೂ ಆದ ನಾನೇ ನನ್ನ ಸಂಕಲ್ಪ ಮಾತ್ರದಿಂದ ಬಹು ಪ್ರಕಾರವೂ ಅನಂತವೂ ದುರತ್ಯಯವೂ ಆದ ಸರ್ವ ವಿರೋಧಿವರ್ಗಗಳಿಂದ ಬಿಡುಗಡೆಮಾಡಿ ನನ್ನೊಡನೆ ನನ್ನ ಆತ್ಮಾತ್ಮೀಯಗಳೆಲ್ಲವನ್ನೂ ಅನುಭವಿಸುವುದರಿಂದ ತುಲ್ಯಭೋಗನನ್ನಾಗಿಸಿ ಪರಿಪೂರ್ಣಾನುಭವದ ಪರೀವಾಹವಾದ ಸರ್ವದೇಶ ಸರ್ವಕಾಲ ಸರ್ವಾವ ಸ್ಥೋಚಿತ ಸರ್ವವಿಧಕೈಂಕರ್ಯವನ್ನೂ ನಿನಗೆ ತಂದು ಸಂತೋಷಿಸುವೆನು. ನೀನು ಯಾವುದಕ್ಕೂ ಶೋಕಿಸಬೇಡ - ಎಂಬುದು—"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ । ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿ- ಷ್ಯಾಮಿ ಮಾಶುಚಃ ॥"—ಎಂಬ ಶ್ರೀ ಚರಮ ಶ್ಲೋಕ ಮಹಾಮಂತ್ರದ ನಿಷ್ಕೃಷ್ಟವಾದ ಅರ್ಥ—

ಈ ಚರಮ ಶ್ಲೋಕದ ಮೂಲಕವೇ ವಿಲಕ್ಷಣೋಪಾಯನ್ನು ತಿಳಿಯ ಬೇಕೆಂಬ ನಿರ್ಬಂಧವುಂಟೋ ? ಭಗವಚ್ಛಾಸ್ತ್ರಾದಿ ಪ್ರಮಾಣಾಂತರಗಳ ಮೂಲಕವೂ ಅರಿಯಕೂಡದೋ? "ಅಪೇತಶೋಕೈರಾಚಾರ್ಯೈರಯಂ ಪಂಥಾಃ ಪ್ರದರ್ಶಿತಃ ॥"—ಎಂದು ಸದಾಚಾರ್ಯ ಸಂಪ್ರದಾಯಾಗತವೆಂದುದೂ

ಷರಿಯೋ ?—ವೇದಗಳ ಅರ್ಥವನ್ನು ವಿಶದ ಪಡಿಸುವವರಾದ ಋಷಿಗಳಿಗೆ ಇದು ಸಮ್ಮತವಾಗಿರಬೇಡವೆ ? ಸಮ್ಮತವಿಲ್ಲದಿದ್ದಲ್ಲಿ ಮತಾಂತರಸ್ಥರ ಚರಮ ಶ್ಲೋಕವ್ಯಾಖ್ಯಾನವೂ ಗ್ರಾಹ್ಯವಾಗಬೇಡವೆ ? ಅಲ್ಲದೆ. "ನಾನ್ಯಃ ಪಂಥಾ ಅಯನಾಯ ವಿದ್ಯತೇ,"–ಇತ್ಯಾದಿಯಿಂದ ಭಕ್ತಿಯೋಗಕ್ಕೆ ವ್ಯತಿರಿಕ್ತವಾದ ಉಪಾಯವನ್ನು ನಿಷೇಧಿಸಿರುವುದರಿಂದ ವೇದವಿರುದ್ಧವಾದ ಈ ಚರಮ ಶ್ಲೋಕದ ಅರ್ಥವು ಗ್ರಾಹ್ಯವೆಂಬುದು ತಾನೇ ಹೇಗೆ ? ಇತ್ಯಾದಿ ಶಂಕೆಗಳನ್ನು ಪರಿಹರಿಸುವವರಾಗಿ, ಚರಮಶ್ಲೋಕದ ವೈಲಕ್ಷಣ್ಯವನ್ನು—

"ವ್ಯಾಸಾಮ್ನಾಯ ಪಯೋಧಿ ಕೌಸ್ತುಭನಿಭಂ ಹೃದ್ಯಂ ಹರೇರುತ್ತಮಂ
ಶ್ಲೋಕಂಕೇಚನ ಲೋಕವೇದ ಪದವೀ ವಿಶ್ವಾಸಿತಾರ್ಥಂ ವಿದುಃ ।
ಯೇಷಾಮುಕ್ತಿಷು ಮುಕ್ತಿಸೌಧ ವಿಶಿಖಾಸೋಪಾನಪಂಕ್ತಿಷ್ವಮೀ
ವೈಶಂಪಾಯನ ಶೌನಕ ಪ್ರಭೃತಯಶ್ಶ್ರೇಷ್ಠಾಃ ಶಿರಃ ಕಂಪಿನಃ ॥,"

—ಎಂಬಲ್ಲಿ ಅಪ್ಪಣೆ ಕೊಡಿಸಿದ್ದಾರೆ, ಶ್ರೀಮದಾಚಾರ್ಯರು.

ಐರಾವತಾದಿಗಳೂ ಕ್ಷೀರಸಮುದ್ರದಲ್ಲಿ ಇದ್ದಾಗ್ಯೂ, ಕೌಸ್ತುಭವೇ ಹೇಗೆ ಭಗವಂತನಿಗೆ ಅತ್ಯಂತಾಭಿಮತವೋ - ಹಾಗೆಯೆ ಮಹಾಭಾರತವೆಂಬ ಪಯೋಧಿ ಯಲ್ಲಿ ಕೌಸ್ತುಭಸ್ಥಾನೀಯವಾದ ಚರಮಶ್ಲೋಕವು ಭಗವಂತನಿಗೆ ಅತ್ಯಂತ ಅಭಿಮತ. "ವೇದೇಷು ಪೌರುಷಂ ಸೂಕ್ತಂ ಪುರಾಣೇಷು ಚವೈಷ್ಣವಂ । ಭಾರತೇ ಭಗವದ್ಗೀತಾ ಧರ್ಮಶಾಸ್ತ್ರೇಷು ಮಾನವಂ ॥,"—ಎಂದು ಸರ್ವರೂ ಅಂಗೀಕರಿಸಿರುವ ಪ್ರಮಾಣವಾದ ಗೀತಾ ಶಾಸ್ತ್ರದ ಸಾರೋದ್ಧಾರವಾದ್ದರಿಂದ ಸರ್ವೋತ್ಕೃಷ್ಟವಾದ ಅತ್ಯುತ್ತಮ ಶ್ಲೋಕವಿದು. ಲೋಕದಲ್ಲಿ ಪಾಮರರೂ ಶರಣಾಗತನನ್ನು ಚೆನ್ನಾಗಿ ರಕ್ಷಿಸುತ್ತಾರೆ. ವೇದದಲ್ಲಿಯೂ, "ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ – ತಸ್ಮಾನ್ನ್ಯಾಸಮೇಷಾಂ ತಪಸಾಮತಿರಿಕ್ತಮಾಹುಃ ತಸ್ಮಾದಪಿ ವಧ್ಯಂ ಪ್ರಪನ್ನಂನ ಪ್ರತಿ ಪ್ರಯಚ್ಛನ್ತಿ" – ಇತ್ಯಾದಿಯಾಗಿ ವೇದ ದಲ್ಲಿಯೂ ಪ್ರಪತ್ತಿಯು ವಿಲಕ್ಷಣಮೋಕ್ಷೋಪಾಯವೆಂಬುದು ನಿಶ್ಚಿತವಾಗಿದೆ. "ನಾನ್ಯಃ ಪಂಥಾಃ" – ಎಂಬ ನಿಷೇಧವು ಜ್ಞಾನವ್ಯತಿರಿಕ್ತೋಪಾಯವನ್ನು ನಿಷೇಧಿಸುತ್ತೆಯಾಗಿ ಶ್ರುತಿವಿರೋಧವಿಲ್ಲದ್ದರಿಂದ ಈ ಅರ್ಥವು ಅತ್ಯಂತ ಆದರಣೀಯ. ಮುಕ್ತಿ ಸೌಧವಾದ ಪರಮಪದಕ್ಕೆ ರಾಜಮಾರ್ಗದಂತಿರುವ

ಪ್ರಪತ್ತಿಗೆ ಸೋಪಾನ ಪಂಕ್ತಿಗಳಂತಿರುವ, "ಪುಕಲೊನ್ರಿಲ್ಲಾವಡಿಯೇಲ್-ಉನ್ನ ಡಿಕ್ಕಿಳಮರ್‌ನ್ತು ಪುಕುನ್ದೇಲ್"–"ನಾಕಣ್ಯೈಮಿಶ್ಯೈ ನಮ್ಪ್ರಾರ್ ಶರಣೇ ಶರಣ್" "ನಧರ್ಮ ನಿಷ್ಠೋsಸ್ಮಿ....॥" – ಇತ್ಯಾದಿಯಾಗಿ, ಚರಮಶ್ಲೋಕದ ವ್ಯಾಖ್ಯಾನ ಭೂತಗಳಾದ ನಮ್ಮ ಆಳ್ವಾರ್–ಆಚಾರ್ಯರುಗಳ ಶ್ರೀ ಸೂಕ್ತಿಗಳಲ್ಲಿ ಶ್ರೇಷ್ಠರಾದ ವೈಶಂಪಾಯನ (ವ್ಯಾಸ ಶಿಷ್ಯ) ಶೌನಕ (ಋಗ್ವೇದಾಚಾರ್ಯರಾದ ಆಶ್ವಲಾಯನರ ಆಚಾರ್ಯರು) ರೇ ಮುಂತಾದ ಮಹಾ ಭಾಗವತ ಶ್ರೇಷ್ಠರುಗಳೂ ತಲೆದೂಗುತ್ತಾರೆ. ಅಂದರೆ, ನಮ್ಮ ಆಚಾರ್ಯರು ವ್ಯಾಸಾದಿಗಳಿಗಿಂತ ಅಧಿಕ ಚಾತುರ್ಯದಿಂದ ಶ್ರುತಿ ಸ್ಮೃತಿಗಳಿಗೆ ಅನುಗುಣವಾಗಿ ಚರಮಶ್ಲೋಕದ ಅರ್ಥವನ್ನು ವರ್ಣಿಸಿದ್ದಾರೆಂದು ಭಾವ. ಇದರಿಂದ ಋಷಿಗಳಿಗೂ ಚರಮ ಶ್ಲೋಕದ ಈ ಅರ್ಥವು ಅತ್ಯಂತ ಅಭಿಮತವೆಂದ ಹಾಗಾಯಿತು. ಚರಮ ಶ್ಲೋಕವೂ ಪ್ರಮಾಣಗಳೆಲ್ಲದರಲ್ಲಿಯೂ ಸಾರಭೂತವಾದ್ದರಿಂದ ಈ ಶ್ಲೋಕದ ಮೂಲಕವೇ ಈ ಶಾಸ್ತ್ರಾರ್ಥವು ಆಚಾರ್ಯರ ಮುಖೇನ ತಿಳಿಯಲ್ಪಡಬೇಕೆಂದೂ ತಾತ್ಪರ್ಯ.

– ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ

## ೩೦. ಆಚಾರ್ಯ ಕೃತ್ಯಾಧಿಕಾರ :

ಈ ಅಧಿಕಾರದಲ್ಲಿ –

"ಅಧಿಜಿಗಮಿಷು ರಾದ್ಯಂ ಧಾಮ ದಿವ್ಯಂ ತ್ರಿಧಾಮ್ನಃ
ಶ್ರುಕ ವಿವಿಧ ಪರೀಕ್ಷಾ ಶೋಧಿತೇ ಕ್ವಾಪಿ ಪಾತ್ರೇ।
ಅನಘಗುಣ ದಶಾಯಾ ಮಾಹಿತ ಸ್ನೇಹ ಮಾರ್ಯಃ
ಪ್ರದಿಶತಿ ನಿರಪಾಯಂ ಸಂಪ್ರದಾಯ ಪ್ರದೀಪಂ॥"– ಎಂಬ ಪ್ರಥಮ

ಶ್ಲೋಕದಿಂದ ಸತ್ಸಂಪ್ರದಾಯದ ಪ್ರವರ್ತನವೇ ಆಚಾರ್ಯಕೃತ್ಯದಲ್ಲಿ ಪ್ರಧಾನ ವಾದುದೆಂದು ತೋರಿಸುತ್ತಾರೆ. ಪರವ ಚಾರ್ಯನಾದ ಶ್ರೀಮನ್ನಾ ರಾಯಣನೇ ಮೊದಲಾದ ಸದಾಚಾರ್ಯ ಪರಂಪರೆಯಿಂದ ಪ್ರಾಪ್ತವಾದ ಶ್ರೀ ರಹಸ್ಯತ್ರಯದ ಅರ್ಥಗಳನ್ನು ಸಂಗ್ರಹಿಸಿ ತಾವೂ ಅನುಸಂಧಾನ ಮಾಡಿ, ಸಾತ್ತ್ವಿಕತಾಸ್ತಿಕ್ಯಾದಿ ಗುಣಗಳುಳ್ಳ ದೇವ ಪ್ರಕೃತಿಕರಾದ ಶಿಷ್ಯಾದಿಗಳಿಗೆ ಅವರ ಗುಣ ಶೀಲಾದಿಗಳ ಬಗ್ಗೆ ಪರೀಕ್ಷೆಯನ್ನು ಮಾಡಿ ನೋಡಿ ಅವರಿಗೆ ತಿಳಿಯಲಿಚ್ಛೆಯುಂಟಾದಾಗ

ಅಷಟ್ಕೋರ್ಣವಾಗಿ ಅಂದರೆ ಮೂರನೆಯವನಿಗೆ ಕೇಳಿಸದ ಹಾಗೆ ತತ್ತ್ವಹಿತಪುರುಷಾರ್ಥಗಳನ್ನೂ ಉತ್ತರ ಕೃತ್ಯಗಳನ್ನೂ ಸಂಗ್ರಹವಾಗಿ ಉಪದೇಶಿಸಿ ಆಸುರ ಪ್ರಕೃತಿಗಳಿಗೆ ತಿಳಿಯುವ ಹಾಗೆ ಗೋಪನಮಾಡಿ, ಕೃತಾರ್ಥರಾಗಿ ವರ್ತಿಸುವರು ಪೂರ್ವಾಚಾರ್ಯರುಗಳೆಂಬುದು ಈ ಅಧಿಕಾರದಲ್ಲಿಯ ಸಂಗ್ರಹವಾದ ಅರ್ಥ. ಈ ತತ್ತ್ವ-ಹಿತ-ಪುರುಷಾರ್ಥಗಳಲ್ಲಿ-ಪರಮಾತ್ಮನಿಗೆ ಶೇಷನಾದ ಜೀವಾತ್ಮನು ಜ್ಞಾತೃತ್ವ. ಕರ್ತೃತ್ವ, ಭೋಕ್ತೃತ್ವಾದಿಗಳಿಂದ ಅಚೇತನವಾದ ಪ್ರಕೃತಿಗಿಂತ ವಿಲಕ್ಷಣನೆಂದೂ, ಈಶ್ವರನು ಸರ್ವರಕ್ಷಕನೂ ಸ್ವಾಮಿಯೂ ಆದ್ದರಿಂದ ಆ ಚೇತನಾಚೇತನಗಳೆರಡಕ್ಕಿಂತ ವಿಲಕ್ಷಣನೆಂದೂ ಆವನಲ್ಲಿ ಆತ್ಮಭರವನ್ನು ಅರ್ಪಿಸುವುದು ಹಿತತಮವೆಂದೂ, ಅವನಲ್ಲಿ ಶೇಷತ್ವಪ್ರಯುಕ್ತ ಐಹಿಕಾಮುಷ್ಮಿಕ ಭಗವದ್ಭಾಗವತ ಕೈಂಕರ್ಯವೇ ಪರಮಪುರುಷಾರ್ಥವೆಂದೂ ಅನುಸಂಧಾನ ಮಾಡತಕ್ಕದ್ದೆಂದು, ತತ್ತ್ವ-ಹಿತ-ಪುರುಷಾರ್ಥ ರೂಪವಾಗಿ ಮೂರು ಬಗೆಯಾಗಿ ವಿಭಕ್ತವಾದ ಸಂಪ್ರದಾಯವೆಂಬ ಧನವನ್ನು ತಂದೆಯಾದವರುಗಳು ತಮ್ಮ ಪುತ್ರರಿಗೆ ತಾವೇ ಧನವನ್ನು ದಾಯವಾಗಿ ಕೊಡುವಂತೆ. ನ್ಯಸ್ತಭರರಾದ ನಮಗೆ ದಯಾಧನರಾದ ಆಚಾರ್ಯರು ಕೊಟ್ಟು ಅನುಗ್ರಹಿಸಿದ್ದಾರೆ.

## ೩೧. ಶಿಷ್ಯಕೃತ್ಯಾಧಿಕಾರ :

ಹೀಗೆ ಆಚಾರ ಕೃತ್ಯವನ್ನು ಪ್ರತಿಪಾದಿಸಿದ ನಂತರ ಶಿಷ್ಯಕೃತ್ಯವನ್ನು ಈ ಅಧಿಕಾರದಲ್ಲಿ ಪ್ರತಿಪಾದಿಸುವವರಾಗಿ "ಅಶಿಥಿಲ ಗುರುಭಕ್ತಿಃ. ತತ್ಪ್ರಶಂಸಾದಿಶೀಲ:, ಪ್ರಚುರ ಬಹುಮತಿ:, ತದ್ವಸ್ತುವಾಸ್ತ್ವಾದಿಕೇಽಪಿ। ಗುಣವತಿ ವಿನಿಯೋಕ್ತುಂ ಗೋಪಯನ್ ಸಂಪ್ರದಾಯಂ ಕೃತವಿದನಘವೃತ್ತಿ: ಕಿಂ ನವಿನ್ದೇನ್ನಿಧಾನಂ॥" ಎಂಬುದರಿಂದ ಅದರ ಅರ್ಥವನ್ನು ಸಂಗ್ರಹಿಸಿದ್ದಾರೆ. ಆಚಾರ್ಯನಿಗಿಂತ ಅಧಿಕವಾದ ದೇವತೆಯಿಲ್ಲ. ಬಹುವಿಧ ಗುರುಗಳೊಳಗೆ ಮುಕ್ತಿಗೆ ಸಾಕ್ಷಾದುಪಾಯಗಳಾದ ಭಕ್ತಿ-ಪ್ರಪತ್ತಿ ರೂಪ ವಿದ್ಯಾಭೇದಗಳನ್ನು ಉಪದೇಶಿಸುವವನೇ ಶ್ರೇಷ್ಠತಮನಾದ ಆಚಾರ್ಯ ಅಥವಾ ಗುರು. ಶಿಷ್ಯನ ಮನಸ್ಸಿನಲ್ಲಿ ತತ್ತ್ವ-ಹಿತ-ಪುರುಷಾರ್ಥ ವಿಷಯದಲ್ಲಿ ಯಥಾರ್ಥಜ್ಞಾನವೆಂಬ ಅತ್ಯುಜ್ವಲ ದೀಪವನ್ನು ಹೊತ್ತಿಸಿ, ಅಜ್ಞಾನ-ಅನ್ಯಥಾಜ್ಞಾನ-ವಿಪರೀತ ಜ್ಞಾನ ರೂಪವಾದ ಅಂಧಕಾರವನ್ನು ತೊಲಗಿಸಿದ ಆಚಾರ್ಯನಿಗೆ ತಕ್ಕ ಉಪ

ಕಾರವನ್ನು ಸರ್ವಜ್ಞನೂ ಆಶ್ಚರ್ಯಚೇಷ್ಟಿತನೂ ಆದ ಶರಣ್ಯನೂ ಅರಿಯನು. ಅವನನ್ನು ಸ್ತುತಿಸಿ ಮಂಗಳಾಶಾಸನ ಮಾಡುವುದೂ, ಧ್ಯಾನಿಸುವುದೂ, ಪಾದ ಸಂವಾಹನಾದಿಗಳನ್ನು ಮಾಡಿ ಸಂತೋಷಪಡಿಸುವುದೂ, ಅವನ ಕಲ್ಯಾಣ ಗುಣಗಳನ್ನು ಲೋಕದಲ್ಲಿ ಪ್ರಸಿದ್ಧಿಪಡಿಸುವುದೂ ಇದೇ ಮೊದಲಾದುವೆಲ್ಲವೂ ಅವನಿಂದ ಶಿಷ್ಯನು ಪಡೆದ ಮಹೋಪಕಾರಕ್ಕೆ ಎಷ್ಟರ ಮಟ್ಟಿಗೂ ಈಡಾಗವು. ಕೇವಲ ಕೃತಜ್ಞತೆಗಾಗಿ, "ಶರೀರಮರ್ಥಂ ಪ್ರಾಣಂ ಚ ಸದ್ಗುರುಭ್ಯೋನಿವೇದಯೇತ್ । ಸರ್ವಸ್ವಂ" ವಾ ತದರ್ಧಂವಾ ತದರ್ಧಾದರ್ಧ ಗುರವೇ ದಕ್ಷಿಣಾಂದದ್ಯಾತ್ ಯಥಾಶಕ್ತ್ಯಪಿವಾಪುನ :॥" ಇತ್ಯಾದಿ ಪ್ರತಿಪ್ರದಾನವನ್ನು ಶಾಸ್ತ್ರದಲ್ಲಿ ಹೇಳಿರುವುವೆಲ್ಲವೂ. ಪ್ರಣಿಪಾತ–ಅಭಿವಾದನಾದಿಗಳಂತೆ ಕೆಲವು ಕರ್ತವ್ಯಗಳೇ ಹೊರತು "ಕೃಪಯಾನಿಸ್ಪೃಹೋವದೇತ್" – ಎಂಬಂತೆ ಅನನ್ಯಪ್ರಯೋಜನನಾದ ಆಚಾರ್ಯನಿಗೆ ಪ್ರತ್ಯುಪಕಾರವೆಂದಲ್ಲ. "ಬ್ರಹ್ಮವಿದ್ಯಾಪ್ರದಾನಸ್ಯ ದೇವೈರಪಿ ನಶಕ್ಯತೇ । ಪ್ರತಿಪ್ರದಾನ ಮಥವಾ ದದ್ಯಾತ್ ಶಕ್ತಿತ ಆದರಾತ್॥" –ಇತ್ಯಾದಿ ನಿಯಮನವು ಶಿಷ್ಯನು ತೋರುವ ಆದರದ ಪರೀವಾಹ ಮಾತ್ರ. ಆದ್ದರಿಂದ, "ಗುರುಂ ಪ್ರಕಾಶಯೇದ್ಧೀಮಾನ್'' –ಇತ್ಯಾದ್ಯುಕ್ತ ಪ್ರಕಾರದಿಂದ ಗುರುಭಕ್ತಿಯ ಪರಿವಾಹ ರೂಪವಾದ ಅವನ ಪ್ರಶಂಸಾ–ಪ್ರಣಾಮಾದಿಪರನಾಗಿ, "ಗುರುವದ್ಗುರುವರ್ಗಶ್ಚ ದ್ರಷ್ಟವ್ಯೋ ನಿತ್ಯಮೇವ ಹಿ । ಶಯನಾಸನ ಯಾನಾದ್ಯಂ ತದೀಯಮಪಿ ವಂದಯೇತ್॥'' –ಇತ್ಯಾದಿಯ ಪ್ರಕಾರ ಗುರುವಿನ ವಸ್ತುವಾಸ್ತ್ವಾದಿಗಳಲ್ಲಿ ನಿರವಧಿಕ ಬಹುಮಾನವುಳ್ಳವನಾಗಿ, ಆಚಾರ್ಯೋಪದಿಷ್ಟವಾದ ಸಂಪ್ರದಾಯಾಗತವಾದ ಅರ್ಥವನ್ನು "ಶೇವಧಿಷ್ಟೇಽಸ್ಮಿ ರಕ್ಷಮಾಂ॥''– ಎಂಬ ಪ್ರಕಾರದಿಂದ ಅಯೋಗ್ಯರಲ್ಲಿ ದಾನಮಾಡದೆ ರಕ್ಷಿಸುವವನಾಗಿ ಆಚಾರ್ಯರಲ್ಲಿ ಕೃತಜ್ಞತೆಯಿಂದ ನಿರಪರಾಧ ವೃತ್ತಿಯುಳ್ಳವನಾಗಿರುವ ಶಿಷ್ಯನು, ''ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ'' –ಇತ್ಯಾದಿಯಾಗಿ ಹೇಳಿರುವ ನಿಧಿಯಂತೆ ಪರಮಪ್ರಾಪ್ಯಭೂತನಾದ ಭಗವಂತನನ್ನು ಹೊಂದಿಯೇ ಹೊಂದುವನಷ್ಟೆ!

## ೩೨. ನಿಗಮನಾಧಿಕಾರ

ಇಲ್ಲಿಯವರೆಗಿನ - ಅರ್ಥಾನುಶಾಸನಭಾಗ, ಸ್ಥಿರೀಕರಣಭಾಗ, ಪದವಾಕ್ಯ ಯೋಜನಾಭಾಗ, ಮತ್ತು ಆಚಾರ್ಯಕೃತ್ಯ - ಶಿಷ್ಯಕೃತ್ಯಾಧಿಕಾರ ರೂಪವಾದ ನಾಲ್ಕನೇ ಭಾಗ - ಹೀಗೆ ಒಟ್ಟು ನಾಲ್ಕು ಭಾಗಗಳ ಅರ್ಥವನ್ನು, "ಕರಬದರಿತ ವಿಶ್ವಃ, ಕಶ್ಚಿದಾಚಾರ್ಯದೃಷ್ಟ್ಯಾ ಮುಷಿತನಿಖಿಲಮೋಹೋ ಮೂಲಮಂತ್ರಾದಿ ಭೋಗಃ ।· ಸ ಗುಣವಿಷಯಸಿದ್ಧೌ ಸಂಪ್ರದಾಯಂ ಪ್ರಯಚ್ಛನ್ ಸುಚರಿತ ಸಿಲಹಾರೀ ಸೂರಿಬೃನ್ದಾಭಿನಂದ್ಯಃ ॥ —ಎಂಬ ಶ್ಲೋಕದಿಂದ ಸಂಗ್ರಹಿಸಿದ್ದಾರೆ. ಇದರ ಅರ್ಥ - [ಆಚಾರ್ಯದೃಷ್ಟ್ಯಾ] = ಆಚಾರ್ಯ ಕಟಾಕ್ಷಕ್ಕೆ ಪಾತ್ರನಾದ [ಕಶ್ಚಿತ್] = [ಕರಬದರಿತವಿಶ್ವಃ] = ಅಂಗೈಯಲ್ಲಿಯ ನೆಲ್ಲಿಕಾಯಿಯಂತೆ ನಿರ್ಣಯಿಸಲ್ಪಟ್ಟ ಚಿದಚಿದೀಶ್ವರ ತತ್ತ್ವಹಿತಪುರುಷಾರ್ಥಾದಿ ತತ್ತ್ವವುಳ್ಳ— ಇದರಿಂದ ಅರ್ಥಾನುಶಾಸನ ಭಾಗದ ಅರ್ಥ ಉಕ್ತವಾಯಿತು.

[ಮುಷಿತನಿಖಿಲಮೋಹಃ]—ಇದರಿಂದ ವ್ಯಾಮೋಹ ನಿವರ್ತಕವಾದ ಸ್ಥಿರೀಕರಣ ಭಾಗದ ಅರ್ಥಉಕ್ತವಾಯಿತು. [ಮೂಲಮಂತ್ರಾದಿ ಭೋಗಃ] = ಮೂಲಮಂತ್ರಾದಿಯಲ್ಲಿಯ ಅರ್ಥಾನುಸಂಧಾನರೂಪಭೋಗವುಳ್ಳ— ಇದರಿಂದ ಪದವಾಕ್ಯಯೋಜನಾ ಭಾಗದ ಅರ್ಥಉಕ್ತವಾಯಿತು.

[ಸಗುಣವಿಷಯಸಿದ್ಧೌ] = ಸಾತ್ವಿಕತಾಸ್ತಿಕ್ಯಾದಿ ಗುಣವಿಶಿಷ್ಟವಾದ ಪುತ್ರಶಿಷ್ಯಾದಿಪಾತ್ರ ಲಭಿಸಿದಲ್ಲಿ - ಎಂಬುವರಿಂದ ಕಡೆಯಭಾಗದ ಅರ್ಥಉಕ್ತ ವಾಯಿತು. ಇಂತಹ ಪಾತ್ರದಲ್ಲಿ [ಸಂಪ್ರದಾಯಂ] = ಗುರುಪರಂಪರಾ ಪ್ರಾಪ್ತವಾದ ರಹಸ್ಯಾರ್ಥವನ್ನು [ಪ್ರಯಚ್ಛನ್] = ಉಪದೇಶಿಸುವವನಾಗಿ [ಸುಚರಿತಸಿಲಹಾರೀ] = ''ಸುವ್ಯಾಹೃತಾನಿ ಮಹತಾಂ ಸುಕೃತಾನಿ ತತಸ್ತತಃ । ಸಂಚಿನ್ವನ್ ಧೀರ ಆಸೀತ ಸಿಲಹಾರೀಸಿಲಂ ಯಥಾ ॥''—ಎಂಬಂತೆ ಕಳದಲ್ಲಿ ಚೆಲ್ಲಿರುವ ಧಾನ್ಯಗಳನ್ನು ಆರಿಸಿಕೊಂಡು ಅದರಿಂದ ಜೀವಿಸುವವನ ಹಾಗೆ ಮಹಾತ್ಮರ ಸುಚರಿತಗಳನ್ನು ಆರಿಸುವವನಾಗಿದ್ದುಕೊಂಡು, ನಿರ್ಯಾಣವಾದ ನಂತರ ಅರ್ಚಿರಾದಿ ಮಾರ್ಗದಿಂದಹೋಗಿ [ಸೂರಿಬೃಂದಾಭಿನಂದ್ಯಃ] = (ಇದಿರುಗೊಂಡು ಬರುವ) ನಿತ್ಯಸೂರಿಗಳ ಸಮೂಹಕ್ಕೆ – "ಅಹೋಭಾಗ್ಯ ಮಯಂದೇಶಃ ಭವತಾದ್ಯಸನಾಥಿತಃ ॥''—ಇತ್ಯಾದಿ ವಚನಗಳಿಂದ ಉಪ-ಶ್ಲೋಕ್ಯನಾಗುತ್ತಾನೆ.

ಹೀಗೆತಾವು ಉಪದೇಶಿಸಿದ, ಮತ್ತು ತಮಗೆ ಶ್ರೀ ಕಿಡಾಂಬಿಯಾಚ್ಚಾನ್‌ರ ಪುತ್ರಪೌತ್ರಪರಂಪರೆಯಿಂದ ಹಿಡಿದು ಶ್ರೀವಾದಿಹಂಸಾಂಬುದಾಚಾರ್ಯರ ಪರ್ಯಂತದಿಂದ ಬಂದ ಶ್ರೀ ರಹಸ್ಯತ್ರಯಸಾರ ದಿವ್ಯಪ್ರಬಂಧವೆಂಬ ಅಮೃತ ವನ್ನು, "ಏಕಸ್ಸ್ವಾದು ನಭುಂಜೀತ,"—ಎಂಬ ನ್ಯಾಯದಿಂದ, ಸಂಸಾರ ದಾವಾನಲದಲ್ಲಿ ಬೆಂದವರನ್ನು ಕೃಪೆಯಿಂದ ಕರೆದು, ಪಾನಮಾಡಿ ಉಜ್ಜೀವಿಸಿರಿ ಯೆಂದು–"ಇತಿ ಯತಿರಾಜ ಮಹಾನಸ ಪರಿಮಳ ಪರಿವಾಹ ವಾಸಿತಾಂ ಪಿಬತ। ವಿಬುಧ ಪರಿಷನ್ನಿಷೇವ್ಯಾಂ ವೇದಾನ್ತೋದಯನ ಸಂಪ್ರದಾಯಸುಧಾಂ ॥" ಎಂಬುದರಿಂದ ಶ್ರೀಮದಾಚಾರ್ಯರು ಅಪ್ಪಣೆಯಿತ್ತು ಪ್ರಸಕ್ತ ದಿವ್ಯಪ್ರಬಂಧ ವನ್ನು ನಿಗಮಿಸಿದ್ದಾರೆ.

**ಶ್ರೀಮತೇ ನಿಗಮಾನ್ತ ಮಹಾ ದೇಶಿಕಾಯನಮಃ-**

ಕವಿತಾರ್ಕಿಕ ಸಿಂಹಾಯ ಕಲ್ಯಾಣಗುಣಶಾಲಿನೇ ।
ಶ್ರೀಮತೇ ವೇಂಕಟೇಶಾಯ ವೇದಾನ್ತಗುರವೇನಮಃ ॥ –

"ಅವಿಜ್ಞಾತಂ ವಿಜಾನತಾಂ ವಿಜ್ಞಾತಮ ವಿಜಾನತಾಂ ।
ರಹಸ್ಯತ್ರಯಸಾರಾಖ್ಯಂ ಪರಂ ಬ್ರಹ್ಮಾಸ್ತು ಮೇ ಹೃದಿ॥"–

ಅಸ್ಮತ್ಸರ್ವಗುರುಭ್ಯೋನಮಃ— ಇತಿ ಶಮ್–



# ನಮ್ಮ ಇತರ ಪ್ರಕಟಣೆಗಳು

| | | | | |
|---|---|---|---|---|
| 1. | ಶ್ರೀ ಹಯಗ್ರೀವ ಸ್ತೋತ್ರ | — | ರೂ. | 1-00 |
| 2. | ಮಧುರ ಕವಿಯಾಳ್ವಾರ್ | — | ರೂ. | 1-00 |
| 3. | ನ್ಯಾಸದಶಕಂ | — | ರೂ. | 1-00 |
| 4. | ಆಂಡಾಳ್ | — | ರೂ. | 2-50 |
| 5. | ಭೂಸ್ತುತಿ | — | ರೂ. | 1-00 |
| 6. | ಯತಿರಾಜರಾಮಾನುಜ | — | ರೂ. | 1-00 |
| 7. | ನಮ್ಮಾಳ್ವಾರ್ ದರ್ಶನ | — | ರೂ. | 12-00 |

## ಶ್ರೀ ಲಕ್ಷ್ಮೀಹಯಗ್ರೀವ ಸೇವಾ ಟ್ರಸ್ಟ್